# ಶ್ರೀ ಶಾಂಕರ ಸೂಕ್ತಿ ಮಣಿಹಾರ



ವಿದ್ವಾನ್ ಎಸ್. ರಂಗನಾಥ ಶರ್ಮ



ಕಾವ್ಯಾಲಯ ಪ್ರಕಾಶಕರು : ಜಯನಗರ,
ಮೈಸೂರು

# ಶ್ರೀ ಶಾಂಕರ ಸೂಕ್ತಿ ಮಣಿಹಾರ

ವಿದ್ವಾನ್ ಎನ್. ರಂಗನಾಥ್‌ಶರ್ಮಾ



ಕಾವ್ಯಾಲಯ ಪ್ರಕಾಶಕರು : ಜಯನಗರ,

ಮೈಸೂರು - 570 014

# ಶ್ರೀ ಶಾಂಕರ ಸೂಕ್ತಿ ಮಣಿಹಾರ

## ಪ್ರಸ್ಥಾನತ್ರಯ ಭಾಷ್ಯೆಗಳಿಂದ ಆರಿಸಿದ ವಚನಗಳ ಸಂಗ್ರಹ

ಸಂಗ್ರಹ ಮತ್ತು ಅನುವಾದ
ವಿದ್ವಾನ್ ಎನ್. ರಂಗನಾಥ್‌ಶರ್ಮಾ



ಕಾವ್ಯಾಲಯ ಪ್ರಕಾಶಕರು : ಜಯನಗರ,
ಮೈಸೂರು - 570 014

**SRI SANKARA SOOKTI MANIHARA : Extracts from the Bhasshyas of Sri Sankaracharya with kannada translation**
By Vidwan N. Ranga Natha Sharma No. 1261, "Dharani", 13th Cross, Giri Nagar, 2nd Stage, Bangalore - 560 085.,Tel No. 26720505
email : kavyalayamysore@g.com

Published by :
C.K. Krishna Murthy and Smt. C.K. Prabha,
Kavyalaya Publishers, Jayanagar, Mysore - 570 014
Ph : 0821 2567042, Mob : 9880705977



ಕಾವ್ಯಾಲಯದಿಂದ ಮೊದಲನೆಯ ಮುದ್ರಣ 2008

ISBN No 81- 7067-816-401

ಬೆಲೆ ರೂ : 120/-
ರೂ : ನೂರಇಪ್ಪತ್ತು

ಮುದ್ರಕರು : ಗುಪ್ತ ಆಫ್‌ಸೆಟ್ ಪ್ರಿಂಟರ್ಸ್, ವಿದ್ಯಾರಣ್ಯಪುರಂ, ಮೈಸೂರು

Ph. : 2482023

# ಸಂದೇಶ

ರಾಷ್ಟ್ರದ ಘನವಿದ್ವಾಂಸರಲ್ಲೊಬ್ಬರಾದ ಶ್ರೀ ನಡಹಳ್ಳಿ ರಂಗನಾಥಶರ್ಮರು ಶ್ರೀಶಂಕರ ಭಗವತ್ಪಾದರು ಬರೆದಿರುವ ಪ್ರಸ್ಥಾನ ತ್ರಯದ ಭಾಷ್ಯದ ಉಕ್ತಿಗಳನ್ನು ಆಧರಿಸಿ ರಚಿಸಿರುವ 'ಶ್ರೀ ಶಾಂಕರಸೂಕ್ತಿಮಣಿಹಾರ'ವೆಂಬ ಗ್ರಂಥರತ್ನವು ಅದ್ವೈತ ವೇದಾಂತದ ಸಾರವನ್ನು ಅರಿಯಬೇಕೆನ್ನುವವರಿಗೆ ಅತ್ಯಂತ ಉಪಯುಕ್ತವಾಗಿದೆ. ಮೂಲದ ಸಂಸ್ಕೃತ ವಾಕ್ಯಗಳನ್ನು ಆಧಾರ ಸಹಿತವಾಗಿ ಕನ್ನಡ ಲಿಪಿಯಲ್ಲಿ ನೀಡಿ ಅನುವಾದದೊಂದಿಗೆ ಆವಶ್ಯಕ ಟಿಪ್ಪಣಿಗಳನ್ನೂ ನೀಡಿರುವುದು ಗ್ರಂಥದ ಉಪಯುಕ್ತತೆಯನ್ನು ಹೆಚ್ಚಿಸಿದೆ. ಶ್ರೀಶರ್ಮರು ಗ್ರಂಥಲೇಖನದಲ್ಲಿ ಸಿದ್ಧಹಸ್ತರು. ಅವರ ಈ ಗ್ರಂಥವು ಅದ್ವೈತ ವಿದ್ಯಾಪ್ರತಿಷ್ಠಾನದ ಮೂಲಕ ಪ್ರಕಾಶಗೊಳ್ಳುತ್ತಿರುವುದು. ಸಂತೋಷದ ವಿಷಯ. ಲೇಖಕ ಪ್ರಕಾಶಕರಿಬ್ಬರ ಪರಿಶ್ರಮವೂ ಜಿಜ್ಞಾಸುಗಳ ಜ್ಞಾನತೃಷೆಯನ್ನು ತಣಿಸುವಲ್ಲಿ ಯಶಸ್ಸನ್ನು ಕಾಣುವಂತಾಗಲಿ. ಶ್ರೀಕ್ಷೇತ್ರದ ಅಧಿಷ್ಠಾತೀ ಶ್ರೀ ಕಾಮಾಕ್ಷೀ ದೇವಿಯ ಸಂಪೂರ್ಣ ಅನುಗ್ರಹವು ತಮ್ಮ ಮೇಲಿರಲಿ ಎಂದು ಪ್ರಾರ್ಥಿಸುತ್ತೇವೆ.

ಪ್ರಮಾಥಿ ಚೈತ್ರಶುದ್ಧನವಮಿ

ನಾರಾಯಣ ಸ್ಮರಣೆಗಳು
ಶ್ರೀ ಶ್ರೀ ನಾರಾಯಣಾಶ್ರಮ ಸ್ವಾಮಿಗಳು
ಶ್ರೀ ಕೋದಂಡಾಶ್ರಮ ಮಠ
ಹೆಬ್ಬೂರು.

# ಶ್ರೀ ಶಾಂಕರ ಸೂಕ್ತಿ ಮಣಿಹಾರ

## ಪರಿವಿಡಿ

# ಪ್ರಸ್ತಾವನೆ

ಪುಣ್ಯಭೂಮಿಯಾದ ಈ ಭರತಖಂಡದಲ್ಲಿ ಆತ್ಮತತ್ತ್ವಾನ್ವೇಷಣೆಗಾಗಿ ನಡೆದಷ್ಟು ಪ್ರಯತ್ನಗಳು ಜಗತ್ತಿನ ಇನ್ನಾವ ರಾಷ್ಟ್ರದಲ್ಲಿಯೂ ನಡೆಯಲಿಲ್ಲ. ಆತ್ಮಾನ್ವೇಷಣೆಯಲ್ಲಿ ಸದಾ ನಿರತರಾದ ಭಾರತೀಯ ಮಹರ್ಷಿಗಳಿಗೆ ಮೊದಲು ಪ್ರತಿಭಾತವಾದದ್ದು ವೇದರಾಶಿ. ಉಪನಿಷತ್‌ಸಹಿತವಾದ ಈ ವೇದರಾಶಿಯು ಸಮುದ್ರದಂತೆ ವಿಶಾಲವಾದದ್ದು. ಸಮುದ್ರದಂತೆ ಅತಿಗಂಭೀರವೂ ಆದದ್ದು. ಆಪಾತವಾಗಿ ತೋರುವ ವಿರೋಧಗಳನ್ನೂ ವಿಚಿತ್ರ ವಾಕ್ಯರಚನೆಯನ್ನೂ ಭೇದಿಸಿ ವೇದಗಳ ಸಾರಸರ್ವಸ್ವವನ್ನರಿಯುವುದು ಅಲ್ಪಪ್ರಜ್ಞರಿಗೆ ಶಕ್ಯವಾದ್ದಲ್ಲ. ಈ ಆತ್ಮತತ್ತ್ವವನ್ನು ವಿವರಿಸುವುದಕ್ಕಾಗಿ, ಅನಂತರ ಸಾಂಖ್ಯವೇ ಮೊದಲಾದ ಅನೇಕ ವೈದಿಕ ದರ್ಶನಗಳುದಿಸಿದವು. ಅಂತೆಯೇ ಬೌದ್ಧ ಜೈನಾದಿ ದರ್ಶನಗಳೂ ಇನ್ನೊಂದು ಬಗೆಯಲ್ಲಿ ರೂಪುಗೊಂಡವು. ಪಾಶ್ಚಾತ್ಯರಲ್ಲಿಯೂ ಕ್ರಿ.ಪೂ.ದಲ್ಲಿಯೇ ಸಾಕ್ರಟಿಸ್, ಪ್ಲೇಟೋ, ಅರಿಸ್ಟಾಟಲ್ ಪ್ರಮುಖರೂ ಅರ್ವಾಚೀನ ಕಾಲದಲ್ಲಿ ಡೆಕಾರ್ಟ್ (Descartes), ಸ್ಪಿನೋಜಾ, ಬರ್ಕ್‌ಲೆ, ಹ್ಯೂಮ್, ಕ್ಯಾಂಟ್, ಶೋಪೆನ್‌ಹಾವರ್, ಸ್ಪೆನ್ಸರ್, ವಿಲಿಯಂ ಜೇಮ್ಸ್- ಮೊದಲಾದ ಮೇಧಾವಿಗಳೂ ವಿಶ್ವರಹಸ್ಯವನ್ನು ಭೇದಿಸಲು ಪ್ರಶಂಸನೀಯವಾದ ಪ್ರಯತ್ನಗಳನ್ನು ಮಾಡಿ ತಮ್ಮ ತಮ್ಮ ಸಿದ್ಧಾಂತಗಳನ್ನು ಮಂಡಿಸಿದ್ದಾರೆ.

ಬರಿಯ ತರ್ಕದಿಂದಲೂ ಊಹಾಪೋಹಗಳಿಂದಲೂ ಅತಿ ಗಂಭೀರವಾದ ಆತ್ಮತತ್ತ್ವವು ತಿಳಿಯತಕ್ಕದ್ದಲ್ಲವೆಂದೇ ಹೇಳಬೇಕಾಗಿದೆ. ಮೊದಲನೆಯದಾಗಿ ಆತ್ಮನು ಇಂದ್ರಿಯಗಳಿಗೆ ಪ್ರತ್ಯಕ್ಷನಲ್ಲ. ಅನುಮಾನದಿಂದ ಈಶ್ವರನಿದ್ದಾನೆಂದು ತರ್ಕಿಸಬಹುದೇ ಹೊರತು, ಆತನ ಸ್ವರೂಪವೇನೆಂದು ನಿರ್ಣಯಿಸಲು ಶಕ್ಯವೇ ಅಲ್ಲ. ತರ್ಕಕ್ಕೆ ಮಿತಿಯೂ ಇಲ್ಲ. "ನೈಷಾ ತರ್ಕೇಣ ಮತಿರಾಪನೇಯಾ" ಎಂದು ಉಪನಿಷತ್ತು ಸಾರಿದೆ. ಹಾಗಾದರೆ ಬೇರೆ ಯಾವ ಪ್ರಮಾಣದಿಂದ ಆತ್ಮಪ್ರಮೆಯುಂಟಾದೀತು?ಉಳಿದಿರುವುದೊಂದು ಶಬ್ದಪ್ರಮಾಣ. ಆಪ್ತವಾಕ್ಯವೇ ಶಬ್ದವೆಂದು ತಾರ್ಕಿಕರು ನಿರ್ಣಯಿಸಿದ್ದಾರೆ. ಆಪ್ತನು ಯಾರು? ಯಥಾರ್ಥವನ್ನು ನಿರ್ವಂಚನೆಯಿಂದ ತಿಳಿಸತಕ್ಕವನು. ಅವನಿಗೆ ಆತ್ಮಸ್ವರೂಪವು ತಿಳಿದದ್ದು ಹೇಗೆ? ಪ್ರತ್ಯಕ್ಷದಿಂದ ಎಂದೇ ಉತ್ತರಿಸಬೇಕಾಗುತ್ತದೆ. "ಯಃ ಸಾಕ್ಷಾದಪರೋಕ್ಷಾದ್ ಬ್ರಹ್ಮ" ಎಂದು ಶ್ರುತಿಯೇ ಹೇಳುತ್ತದೆ. ನಮ್ಮ ಇಂದ್ರಿಯಗಳಿಗೂ ಮನಸ್ಸಿಗೂ ಗೋಚರಿಸತಕ್ಕದ್ದು ಲೌಕಿಕ ಪ್ರತ್ಯಕ್ಷ ವಿಷಯ. ಅಲೌಕಿಕ ಪ್ರತ್ಯಕ್ಷವೆಂದು ಇನ್ನೊಂದು ಪ್ರಮಾಣ ಉಂಟು. ಉಗ್ರತಪಸ್ಸಿನಿಂದ ಚಿತ್ತಶುದ್ಧಿಯನ್ನು ಪಡೆದ ಮಹರ್ಷಿಗಳಿಗೆ ಅಲೌಕಿಕ ಪ್ರತ್ಯಕ್ಷಜ್ಞಾನವಿರುತ್ತದೆ. ಅವರಿಗೆ ಆತ್ಮನು ಪ್ರತ್ಯಕ್ಷನೇ. ಅವರು ಹೇಳಿದ ವೇದವು ಆತ್ಮತತ್ತ್ವ

ನಿರ್ಧಾರಣೆಗೆ ಪ್ರಮಾಣವಾಗುತ್ತದೆ. ವೇದವೇ ಆಪ್ತವಾಕ್ಯವೆಂದು ವೈದಿಕ ದರ್ಶನಗಳ ಸಿದ್ಧಾಂತವಾಗಿದೆ. ವೇದವನ್ನು ಯಾವ ಮಾನವನೂ ರಚಿಸಲಿಲ್ಲ. ಅದು ಈಶ್ವರನಿಂದ ಋಷಿಗಳಿಗೆ ಉಪದಿಷ್ಟವಾಯಿತು ಎಂಬುದು ವೈದಿಕರ ನಿಲುವು. "ಔಪನಿಷದಂ ಪುರುಷಂ ಪೃಚ್ಛಾಮಿ" ಮುಂತಾದ ವಾಕ್ಯಗಳಿಂದ ಆತ್ಮನು ಉಪನಿಷನ್ಮಾತ್ರ ವೇದ್ಯನೆಂದು ತಿಳಿಯಬೇಕು. ಸಾಂಖ್ಯಾದಿ ದರ್ಶನಗಳಲ್ಲಿ ವೇದಾಂತ ದರ್ಶನವೇ ಪರಮಸಿದ್ಧಾಂತವಾಗಿ ನಿಂತಿದೆ. ಉಳಿದ ದರ್ಶನಗಳು ಅಧಿಕಾರ ಭೇದದಿಂದ ಪ್ರವೃತ್ತವಾಗಿವೆಯೆಂದೂ ಎಲ್ಲರಿಗೂ ವೇದಾಂತದರ್ಶನವೇ ಸಂಮತವಾದದ್ದೆಂದೂ ವಿದ್ವಾಂಸರು ಹೇಳುತ್ತಾರೆ.

ಅನಂತರ ಇತರ ದಾರ್ಶನಿಕ ಪಂಡಿತರು ತರ್ಕಬಲದಿಂದ ಕ್ರಮವನ್ನು ಆಶ್ರಯಿಸಿ, ಭವ್ಯವಾದ ವೇದಾಂತಸೌಧವನ್ನು ಆಕ್ರಮಿಸಿ ಪ್ರಯತ್ನಿಸಿದಾಗ, ಅವರೆಲ್ಲರನ್ನೂ ತಮ್ಮ ಅದ್ಭುತವಾದ ಮೇಧಾಶಕ್ತಿಯಿಂದ ತಡೆದು, ಹಿಂದಕ್ಕೆ ಸರಿಸಿ, ವೇದಾಂತ ಮಹಾಸೌಧವನ್ನು ಸಂರಕ್ಷಿಸಿದ ಕೀರ್ತಿ ಶ್ರೀಶಂಕರಭಗವತ್ಪಾದರಿಗೆ ಸಲ್ಲುತ್ತದೆ. ಆಚಾರ್ಯರ ಅಸಾಧಾರಣವಾದ ವೈದುಷ್ಯ, ಸರ್ವಾತಿಗಾಮಿಯಾದ ಪ್ರತಿಭೆ, ಅಲೌಕಿಕವಾದ ತರ್ಕಪಾಂಡಿತ್ಯಗಳನ್ನು ಕಂಡಾಗ ಯಾವ ವಿಮರ್ಶಕನ ಶಿರವಾದರೂ ಇವರ ಪಾದಗಳಿಗೆ ನಮಸ್ಕಾರ ಮಾಡುತ್ತದೆ. ಆಚಾರ್ಯರ ಈ ವೀರವಾಣಿಯುನ್ನು ಕೇಳಿ "ಏತದೇವ ವೋ ಸ್ವಸ್ತ್ಯಯನಂ ಯನ್ಮಾಮೇಕಯೋಗಿನಮನೇಕಯೋಗಿಬಹುಪ್ರತಿ ಪಕ್ಷಮಾತ್ಥ! ಅತೋ ಜೇಷ್ಯಾಮಿ ಸರ್ವಾನ್! ಆರಭೇ ಚ ಚಿಂತಾಮ್" (ಆನಂದವಲ್ಲೀ ಭಾಷ್ಯ, ಅನುವಾಕ-ಆ) "ನೀನು ಗೆಲ್ಲುವುದು ಹೇಗೆ ಎಂದು ಹೇಳುತ್ತೀಯಲ್ಲ, ಇದೇ ನನಗೆ ಸ್ವಸ್ತಿವಾಚನವೆಂದು ತಿಳಿಯುತ್ತೇನೆ. ಎಲ್ಲರನ್ನೂ ಗೆಲ್ಲುವೆನು ಇದೋ! ಚಿಂತನವನ್ನಾರಂಭಿಸುತ್ತೇನೆ!"

ಶ್ರೀಶಂಕರಾಚಾರ್ಯರ ಜನ್ಮಾದಿವೃತ್ತಾಂತವು ನಮಗೆ ಸರಿಯಾಗಿ ತಿಳಿದುಬಂದಿಲ್ಲ. ಆಚಾರ್ಯರ ಜನ್ಮಸ್ಥಳ ಕೇರಳದಲ್ಲಿರುವ ಕಾಲಟಿಯೆಂಬ ಗ್ರಾಮ. ಇವರು ನಂಬೂದರಿ ಬ್ರಾಹ್ಮಣರು. ತಂದೆಯ ಹೆಸರು ಶಿವಗುರು, ತಾಯಿ ಆರ್ಯಾಂಬೆ-ಎಂದು ಗೊತ್ತಾಗಿದೆ. ಆಚಾರ್ಯರ ಜೀವಿತಾವಧಿ 32 ವರ್ಷಗಳೆಂಬುದು ಸರ್ವಸಂಮತ. ಅವರ ಕಾಲದ ವಿಷಯವಾಗಿ ಭಿನ್ನಾಭಿಪ್ರಾಯಗಳಿವೆ. ಕ್ರಿ.ಶ. 788 ರಿಂದ 820 ರವರೆಗೆ ಅವರ ಜೀವಿತ ಕಾಲವೆಂದು ಆಧುನಿಕ ವಿದ್ವಾಂಸರ ದೃಢವಾದ ಅಭಿಪ್ರಾಯ. ಇದಕ್ಕೂ ಒಂದು ನೂರು ವರ್ಷ ಹಿಂದೆಯೇ ಆಚಾರ್ಯರ ಜೀವಿತ ಕಾಲವೆಂದು ಶ್ರೀಬಲದೇವ ಉಪಾಧ್ಯಾಯರ ಅಭಿಪ್ರಾಯವಿದೆ. (ನೋಡಿ : "ಶ್ರೀಶಂಕರಾಚಾರ್ಯರು" ಶ್ರೀ ರಾಮಚಂದ್ರಶಾಸ್ತ್ರಿಗಳ ಕನ್ನಡ ಅನುವಾದ ಪುಟ : 61). ಶ್ರೀ ಗೌಡಪಾದಾಚಾರ್ಯರ ಶಿಷ್ಯರಾದ ಶ್ರೀ ಗೋವಿಂದ ಭಗವತ್ಪಾದರು ಶಂಕರಾಚಾರ್ಯರ ಗುರುಗಳು.

ಶ್ರೀ ಶಂಕರಾಚಾರ್ಯರು ಬ್ರಹ್ಮಸೂತ್ರ, ಉಪನಿಷತ್, ಭಗವದ್ಗೀತೆ-ಎಂಬ ಪ್ರಸ್ಥಾನತ್ರಯಕ್ಕೆ ವಿಸ್ತಾರವಾದ ಭಾಷ್ಯವನ್ನು ರಚಿಸಿದ್ದಾರೆ. ಅದ್ವೈತಸಿದ್ಧಾಂತದ ಸ್ಪಷ್ಟ ವಿವರಣೆ

ಈ ಭಾಷ್ಯಗಳಲ್ಲಿ ದೊರೆಯುತ್ತದೆ. ಅಪರೋಕ್ಷಾನುಭೂತಿ, ವಿವೇಕ ಚೂಡಾಮಣಿ, ಉಪದೇಶಸಾಹಸ್ರಿ-ಮುಂತಾದ ಪ್ರಕರಣ ಗ್ರಂಥಗಳೂ ಭಕ್ತಿಪ್ರಧಾನವಾದ ಭಜಗೋವಿಂದ, ಮನೀಷಾಪಂಚಕ, ಶ್ರೀದಕ್ಷಿಣಾಮೂರ್ತಿ ಸ್ತೋತ್ರ-ಮುಂತಾದ ಸ್ತೋತ್ರಗ್ರಂಥಗಳೂ ಆಚಾರ್ಯದಿಂದ ರಚಿತವಾದವು. ಇನ್ನೂ ಹಲವಾರು ಗ್ರಂಥ'ಗಳು ಆಚಾರ್ಯಪ್ರಣೀತವಾದವುಗಳೆಂದು ನಂಬಿಕೆಯುಂಟು. ಆಚಾರ್ಯರಿಗೆ ಸಂಸ್ಕೃತ ಭಾಷೆಯ ಮೇಲೆ ಅಸಾಧಾರಣವಾದ ಪ್ರಭುತ್ವವಿದೆ. ಅವರದು ಪ್ರಸನ್ನಗಂಭೀರವಾದ ಮಧುರಶೈಲಿ. ಆಚಾರ್ಯರ ಮಹಿಮೆ-ಸಿದ್ಧಿ-ಸಾಧನಗಳು ಪ್ರಸಿದ್ಧ ಸಂಗತಿಗಳಾದ್ದರಿಂದ ಇಲ್ಲಿ ವಿಸ್ತರಿಸುವ ಆವಶ್ಯಕತೆಯಿಲ್ಲ. ಆದರೆ ಶ್ರೀಶಂಕರಾಚಾರ್ಯರ ವಿಷಯದಲ್ಲಿ ಕೆಲವು ತಪ್ಪು ತಿಳಿವಳಿಕೆಗಳೂ ಮಿಥ್ಯಾರೋಪಗಳೂ ಇವೆ. ಅವನ್ನು ಸಂಕ್ಷೇಪವಾಗಿ ಪರಿಶೀಲಿಸಬಹುದು.

೧. ಶಂಕರಾಚಾರ್ಯರು ಬೌದ್ಧಮತವನ್ನು ಈ ದೇಶದಿಂದ ಓಡಿಸಿದರೆಂದು ಕೆಲವರು ಹೇಳುತ್ತಾರೆ. ಇದು ಅಜ್ಞಾನದಿಂದ ಬಂದ ಹೇಳಿಕೆ. ಬ್ರಹ್ಮಸೂತ್ರದಲ್ಲಿ ಬಾದರಾಯಣರೇ ಬೌದ್ಧಮತವನ್ನು ಖಂಡಿಸಿದ್ದಾರೆ. ಆ ವಿಚಾರ ಭಾಷ್ಯದಲ್ಲಿಯೂ ಸಹಜವಾಗಿ ಬರಲೇಬೇಕು. ಎಲ್ಲ ಭಾಷ್ಯಕಾರರೂ ಬೌದ್ಧಮತವನ್ನು ಖಂಡಿಸಿಯೇ ಇದ್ದಾರೆ. ಇದರಲ್ಲಿ ವಿಶೇಷವೇನು? ಏಕಾಕಿಯಾದ ಒಬ್ಬ ಸಂನ್ಯಾಸಿಯು ರಾಜಾಶ್ರಯವನ್ನು ಪಡೆದಿದ್ದ ಬೌದ್ಧಮತವನ್ನು ಓಡಿಸಲು ಸಾಧ್ಯವೆ? ಜೈನಮತವು ಏಕೆ ಓಡಿ ಹೋಗಲಿಲ್ಲ? ವಾಸ್ತವವೇನೆಂದರೆ ಬೌದ್ಧರು ನೈರಾತ್ಮ್ಯವಾದಿಗಳು. ನೈರಾತ್ಮ್ಯವಾದವು ನಮ್ಮ ದೇಶದಲ್ಲಿ ಎಂದಿಗೂ ಬಾಳಲಾರದು. ಜೈನರು ವೇದಪ್ರಾಮಾಣ್ಯವನ್ನೊಪ್ಪದಿದ್ದರೂ ನೈರಾತ್ಮವಾದಿಗಳಲ್ಲ ಮತ್ತು ಮಹಮ್ಮದ್ ಬಾಖ್ತಿ ಎಂಬ ಮುಸ್ಲಿಂ ದಂಡನಾಯಕನು ಬೌದ್ಧಮತದ ಕೇಂದ್ರಗಳಾದ ನಾಲಂದಾ ಮತ್ತು ವಿಕ್ರಮಶೀಲಾ ವಿಶ್ವವಿದ್ಯಾನಿಲಯಗಳನ್ನು ಧ್ವಂಸಮಾಡಿ ಬೌದ್ಧಭಿಕ್ಷುಗಳನ್ನು ಓಡಿಸಿದರಿಂದ ಬೌದ್ಧ ಮತವು ಕ್ಷೀಣಿಸುತ್ತಾ ಬಂದಿತು. ದಕ್ಷಿಣದಲ್ಲಿ ಪೋರ್ಚುಗೀಸರು ಕನ್ಹೇರಿ ಸಂಘಾರಾಮದಲ್ಲಿದ್ದ ಬೌದ್ಧರನ್ನೆಲ್ಲ ಬಲವಂತನಾಗಿ ಕ್ರೈಸ್ತಮತಕ್ಕೆ ಸೇರಿಸಿಕೊಂಡರು. ಜೈನರು ರಾಜಾಶ್ರಯದಿಂದ ಅತ್ಯಂತ ಪ್ರಬಲರಾಗಿ ಶೂನ್ಯವಾದಿಗಳಾದ ಬೌದ್ಧರನ್ನೇ ವಿಶೇಷವಾಗಿ ದೂಷಿಸಿ ಖಂಡಿಸತೊಡಗಿದರು ಇತ್ಯಾದಿ ಕಾರಣಗಳಿಂದ ಬೌದ್ಧಮತವು ಈ ದೇಶದಲ್ಲಿ ನಶಿಸಿತು.

೨. ಶಂಕರಾಚಾರ್ಯರು ಚಾತುರ್ವರ್ಣ್ಯವನ್ನು ರೂಡಿಗೆ ತಂದು ಶೂದ್ರರನ್ನು ವಿದ್ಯೆಯಿಂದ ದೂರಮಾಡಿ "ದಬ್ಬಾಳಿಕೆ" ನಡೆಸಿದರು- ಎಂಬುದೊಂದು ಆಪಾದನೆ. ಜನರ ವಿವೇಚನಾಶಕ್ತಿಗೆ ಮಿತಿಯಿರುತ್ತದೆ. ಅವಿವೇಕಕ್ಕೆ ಮಿತಿ ಇರುವುದಿಲ್ಲ. ಚಾತುರ್ವರ್ಣ್ಯವು ಕನಿಷ್ಠ ಹತ್ತು ಸಾವಿರ ವರ್ಷಗಳಿಂದಾದರೂ ಈ ದೇಶದಲ್ಲಿ ರೂಢಿಗೆ ಬಂದಿದೆ. ಆಚಾರ್ಯರು ಅದನ್ನು ಹುಟ್ಟುಹಾಕಲಿಲ್ಲ. ಸಮಾಜವು ಆ ವ್ಯವಸ್ಥೆಯನ್ನು ಅಂಗೀಕರಿಸಿತ್ತು. ರಾಜರು

ರಾಷ್ಟ್ರಾದ್ಯಂತ ಅದನ್ನು ಸಂರಕ್ಷಿಸಿಕೊಂಡು ಬಂದರು. ಎಲ್ಲ ಧರ್ಮಶಾಸ್ತ್ರ ಪುರಾಣಾದಿಗಳೂ ಅದನ್ನು ಸಮರ್ಥಿಸಿಕೊಂಡು ಬಂದಿವೆ. ಅದು ಆ ಕಾಲದಲ್ಲಿ ಸಮಾಜದ ಹಿತಕ್ಕೆ ಬೇಕಾಗಿತ್ತು. ಇಲ್ಲದಿದ್ದರೆ ಪ್ರಜೆಗಳು ಆ ವ್ಯವಸ್ಥೆಯನ್ನು ಕಿತ್ತೊಗೆಯಲು ದಂಗೆಯೆದ್ದುಬಿಡುತ್ತಿದ್ದರು. ಮೊದಲಿನ ಮೂರು ವರ್ಣದವರಿಗೆ ವೇದಾಧಿಕಾರವಿದೆ, ನಾಲ್ಕನೆಯ ಶೂದ್ರವರ್ಣದವರಿಗೆ ವೇದಾಧಿಕಾರವಿಲ್ಲ- ಎಂಬುದು ಈ ವ್ಯವಸ್ಥೆಯ ತಿರುಳು. ಶೂದ್ರನಿಗೆ ಉಪನಯನವಿಲ್ಲದ್ದರಿಂದಲೂ ಆತನು ಶಾಸ್ತ್ರೀಯ ನಿಯಮಗಳನ್ನು ಪಾಲಿಸುವುದಿಲ್ಲವೆಂದೂ ವೇದಾಧಿಕಾರವನ್ನು ಕೊಡಲಿಲ್ಲ. ಆದ್ದರಿಂದ ಬಾದರಾಯಣರೇ ಬ್ರಹ್ಮಸೂತ್ರದಲ್ಲಿ ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ಹೇಳಿದ್ದಾರೆ. ಶಂಕರಾಚಾರ್ಯರು ಸೂತ್ರಕಾರರ ಅಭಿಪ್ರಾಯವನ್ನು ವಿವರಿಸಿದರೇ ಹೊರತು ಹೊಸದೇನನ್ನೂ ಹೇಳಲಿಲ್ಲ. ಭಾಷ್ಯಕಾರರಾದ ಶ್ರೀರಾಮಾನುಜಾಚಾರ್ಯರೂ, ಶ್ರೀಮಧ್ವಾಚಾರ್ಯರೂ ಹೀಗೆಯೇ ಅರ್ಥವನ್ನು ವಿವರಿಸಿದ್ದಾರೆ. ಉಳಿದ ವಲ್ಲಭಾಚಾರ್ಯರೇ ಮೊದಲಾದವರೂ ಇದನ್ನೇ ಅನುಮೋದಿಸಿದ್ದಾರೆ. ಹೀಗಿರುವಾಗ ಈ ಆಪಾದನೆಯನ್ನು ಶಂಕರಾಚಾರ್ಯರ ಕೊರಳಿಗೇ ಕಟ್ಟುವುದೇಕೆ?

ಹಿಂದೆ ವೇದಾಭ್ಯಾಸವು ಮಾತ್ರ ಚತುರ್ಥವರ್ಣದವರಿಗೆ ನಿಷಿದ್ಧವಾಗಿತ್ತೇ ಹೊರತು ವಿದ್ಯಾಭ್ಯಾಸವೇ ನಿಷಿದ್ಧವಾಗಿರಲಿಲ್ಲ. 'ಸರ್ವೇಷಾಮಧಿಕಾರೋ ವಿದ್ಯಾಯಾಂ' (ಶೀಕ್ಷಾ-11 ಭಾಷ್ಯ) ಎಂದು ಶಂಕರಾಚಾರ್ಯರೇ ಸ್ಪಷ್ಟವಾಗಿ ನುಡಿದಿದ್ದಾರೆ. "ಎಲ್ಲರಿಗೂ ವಿದ್ಯೆಯಲ್ಲಿ ಅಧಿಕಾರ ಉಂಟು". ತರ್ಕವ್ಯಾಕರಣಾದಿ ಸಮಸ್ತ ಶಾಸ್ತ್ರಗಳನ್ನು ಶೂದ್ರನು ಅಧ್ಯಯನ ಮಾಡಬಹುದು. ಸಂಸ್ಕೃತಭಾಷೆ ದ್ವಿಜಾತಿಯವರಿಗೇನೂ ಮೀಸಲಾಗಿರಲಿಲ್ಲ. ವಿದುರ, ಧರ್ಮವ್ಯಾಧ-ಮೊದಲಾದ ಅನ್ಯಜಾತಿಯವರು ಬ್ರಾಹ್ಮಣನಿಗೆ ಸಹ ಉಪದೇಶ ಮಾಡುವಷ್ಟು ವಿದ್ವಾಂಸರಾಗಿದ್ದರೆಂಬುದನ್ನು ಗಮನಿಸಬೇಕು. ಹಿಂದಿನ ಕಾಲದಲ್ಲಿ ಈಗಿನಂತೆ ಸರ್ಕಾರಿ ಶಾಲೆಗಳಿರಲಿಲ್ಲ. ವಿದ್ಯೆಗಾಗಿ ಬಹುದೂರ ಹೋಗಿ ಕಷ್ಟಪಡಬೇಕಾಗಿತ್ತು. "ಸುಲಭವಾಗಿ ಹಣವನ್ನು ಗಳಿಸಿ ಸುಖವಾಗಿರಬೇಕು. ವಿದ್ಯೆಯಿಂದೇನಾಗುತ್ತದೆ?"ಎಂಬ ಮನೋಭಾವವೂ ಆಲಸ್ಯವೂ ಶೂದ್ರರು ಹಿಂದುಳಿಯಲು ಕಾರಣ. ವಿದ್ಯೆಗೆ 'ಅರ್ಥಿತ್ವ'ವೇ ಮುಖ್ಯ ಕಾರಣವೆಂದೂ ಅದು ಇದ್ದವರೆಲ್ಲರೂ ವಿದ್ಯೆಗೆ ಅಧಿಕಾರಗಳೆಂದೂ ಆಚಾರ್ಯರು ಅನೇಕ ಸ್ಥಳಗಳಲ್ಲಿ ಹೇಳಿದ್ದಾರೆ. 'ಅರ್ಥಿತ್ವ'ವೆಂದರೆ ಜ್ಞಾನಾರ್ಜನೆಯಲ್ಲಿ ತೀವ್ರವಾದ ಆಸಕ್ತಿ. ಅದಿಲ್ಲದೇ ಹೋದವರಿಗೆ ಬೇರೆ ಯಾರು ಹೊಣೆಯಾಗಬೇಕು? "ಜ್ಞಾನಿಯಾದವನು ಚಂಡಾಲನಾಗಿದ್ದರೂ ನನ್ನ ಗುರುವೆಂದು ತಿಳಿಯುತ್ತೇನೆ" ಎಂದು ಘೋಷಿಸಿದ ಶಂಕರಾಚಾರ್ಯರು ಶೂದ್ರರಿಗೆ ವಿರೋಧಿಗಳೇ? ವಿಶ್ವಮಾನವರೆಲ್ಲರೂ ಪರಮಾತ್ಮ ಸ್ವರೂಪರೇ- ಎಂದು ಸಿದ್ಧಾಂತಿಸಿದವರು ಯಾರಿಗೆ ಅನ್ಯಾಯ ಮಾಡಿಯಾರು? ಆತ್ಮನ ಹೊರತಾಗಿ ಇನ್ನೊಂದು ಚೇತನವೇ ಇಲ್ಲವೆಂದು ತಿಳಿದ ಆತ್ಮಜ್ಞಾನಿಗಳು ಯಾರ ಮೇಲೆ 'ದಬ್ಬಾಳಿಕೆ' ನಡೆಸುತ್ತಾರೆ?

೩. 'ಶಂಕರಾಚಾರ್ಯರಿಂದ ಹಿಂದೂ ಧರ್ಮಕ್ಕೆ ಮಹತ್ತರವಾದ ಅಘಾತವಾಗಿ ಅದು ಒಡೆದು ಹೋಯಿತು' ಎಂಬ ಇನ್ನೊಂದು ಮಿಥ್ಯಾಪವಾದ ಉಂಟು. ಹಿಂದೂ ಧರ್ಮವೆಂದರೆ ಯಾವುದು? ಅನಾದಿಯಾಗಿ ಈ ದೇಶದಲ್ಲಿದ್ದದ್ದು ವೈದಿಕಧರ್ಮ. ಶಂಕರಾಚಾರ್ಯರು ಧರ್ಮಶಾಸ್ತ್ರಕಾರರಲ್ಲ. ಹೊಸದಾಗಿ ಯಾವ ಮತಧರ್ಮವನ್ನೂ ಬೋಧಿಸಲಿಲ್ಲ. ಯಾವ ಹೊಸ ಮತವನ್ನಾಗಲಿ ಪಂಗಡವನ್ನಾಗಲಿ ಸ್ಥಾಪಿಸಲಿಲ್ಲ. ಭಸ್ಮಧಾರಣೆ, ರುದ್ರಾಕ್ಷಧಾರಣೆ-ಇತ್ಯಾದಿ ಬಾಹ್ಯವೇಷವೊಂದನ್ನೂ ಹೇಳಲಿಲ್ಲ. ಶಿವನು ಹೆಚ್ಚು, ವಿಷ್ಣು ಅಧಿಕ-ಎಂಬ ಯಾವ ವಾದವನ್ನೂ ಹೂಡಲಿಲ್ಲ. ಬ್ರಹ್ಮ, ಶಿವ, ವಿಷ್ಣು-ಇವೆಲ್ಲವೂ ಉಪಾಸಕರು ಕಲ್ಪಿಸಿಕೊಂಡ ಸಗುಣ ರೂಪಗಳು; ಭಕ್ತಿಮಾರ್ಗದವರು ಯಾವ ಆಕೃತಿಯನ್ನಾದರೂ ಭಾವಿಸಿಕೊಳ್ಳಲಿ; ಕಲ್ಪನೆಗಳಿಗೆ ಮಿತಿ ಇಲ್ಲ; ಆಚಾರ ವ್ಯವಹಾರಗಳು ಧರ್ಮಶಾಸ್ತ್ರಕ್ಕೆ ಸಂಬಂಧಿಸಿದವು-ಎಂದು ಅದರ ಗೊಡವೆಗೆ ಆಚಾರ್ಯರು ಹೋಗಲೇ ಇಲ್ಲ. ಅವರು ಕೇವಲ ಪರಿಶುದ್ಧ ದರ್ಶನಕಾರರು, ಅದ್ವೈತ ದರ್ಶನವು ಹೊಸದೂ ಅಲ್ಲ. ವೇದಾಂತವೆಂದರೆ ಅದ್ವೈತವೇ ಎಂದು ಅವರು ತಿಳಿದಿದ್ದರು. "ಸರ್ವೋಪನಿಷತ್ಸು ಹಿ ವಿಜ್ಞಾನಾತ್ಮನಃ ಪರಮಾತ್ಮನಾ ಏಕತ್ವಪ್ರತ್ಯಯೋ ವಿಧೀಯತ ಇತಿ ಅವಿಪ್ರತಿಪತ್ತಿಃ ಸರ್ವೇಷಾಮುಪನಿಷದ್ವಾದಿನಾಮ್" ಎಂದು ಆಚಾರ್ಯರೇ ಬರೆದಿದ್ದಾರೆ (ಬ್ರಹ್ಮ. ಭಾಷ್ಯ 5-11, ಈ ಪುಸ್ತಕದ ಕ್ರಮಸಂಖ್ಯೆ 191) "ಸಮಸ್ತ ಉಪನಿಷತ್ತುಗಳಲ್ಲಿಯೂ ಜೀವಾತ್ಮ-ಪರಮಾತ್ಮರಿಗೆ ಐಕ್ಯವು ಪ್ರತಿಪಾದಿತವಾಗಿದೆ-ಎಂಬ ವಿಷಯದಲ್ಲಿ ಯಾವ ವೇದಾಂತಿಗಳಲ್ಲಿಯೂ ಮತಭೇದವಿಲ್ಲ". ಇದರಿಂದ ದ್ವೈತವೇದಾಂತಿಗಳು ಆಚಾರ್ಯರ ಕಾಲದಲ್ಲಿರಲಿಲ್ಲವೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಬೌದ್ಧ, ಜೈನ, ಸಾಂಖ್ಯ, ನೈಯಾಯಿಕಾದಿಗಳೂ ಸಹ ತಮ್ಮ ಸಿದ್ಧಾಂತದ ಮಂಡನೆಗಾಗಿ ವೇದಾಂತಿಮತವನ್ನು ದೂಷಿಸುವ ಪ್ರಸಂಗ ಬಂದಾಗ 'ವೇದಾಂತಿನಸ್ತು'ಎಂದು ಆರಂಭಿಸಿ ಅದ್ವೈತ ದರ್ಶನವನ್ನೇ ಪೂರ್ವಪಕ್ಷವಾಗಿ ತೆಗೆದುಕೊಳ್ಳುತ್ತಾರೆ. 'ವ್ಯಾಸತಾತ್ಪರ್ಯನಿರ್ಣಯ' ಎಂಬ ಗ್ರಂಥದಲ್ಲಿ ಅಯ್ಯಣ್ಣದೀಕ್ಷಿತರು ಇದನ್ನು ವಿಶದವಾಗಿ ಪ್ರತಿಪಾದಿಸಿದ್ದಾರೆ. ಯಾವ ಹೊಸ ಮತವನ್ನೂ ಸ್ಥಾಪಿಸಿದೆ, ಪ್ರಾಚೀನವಾದ ವೇದಾಂತದರ್ಶನವನ್ನು ಪ್ರತಿಪಾದಿಸಿದ ಶ್ರೀಶಂಕರಾಚಾರ್ಯರು ಸಾಂಖ್ಯರಂತೆ, ನೈಯಾಯಿಕರಂತೆ ಕೇವಲ ದರ್ಶನಕಾರರೇ ಹೊರತು ಮತಸ್ಥಾಪಕರಲ್ಲ. ಇವರ ದೆಸೆಯಿಂದ ಯಾವ ಮತವಾಗಲಿ ಹೊಸ ಪಂಗಡವಾಗಲಿ ನಿರ್ಮಿತವಾಗಲಿಲ್ಲ. ಪ್ರಾಚೀನ ಹಿಂದೂಧರ್ಮವೇ ನೆಲೆನಿಂತು ಪ್ರತಿಷ್ಠಿತವಾಯಿತು. ಹಿಂದೂ ದೇಶದಲ್ಲಿ ಹೊಸ ಹೊಸ ಜಾತಿ, ಮತ, ಪಂಥಗಳನ್ನು ಹುಟ್ಟುಹಾಕಿ, ದೀಕ್ಷೆಗಳನ್ನು ಕೊಟ್ಟು, ಬೌದ್ಧ-ಜೈನ-ಶೈವ-ವೈಷ್ಣವ-ಸಿಖ್ ಇತ್ಯಾದಿ ಪಂಗಡಗಳನ್ನು ನಿರ್ಮಿಸಿ ನಾಲ್ಕು ವರ್ಣಗಳನ್ನು ನಾನೂರು ಜಾತಿಗಳನ್ನಾಗಿ ಮಾಡಿದವರಿಗೇ ಈ ಖ್ಯಾತಿಯೋ ಅಪಖ್ಯಾತಿಯೋ ಸಲ್ಲಬೇಕು.

ಇರಲಿ; ಶ್ರೀ ಶಂಕರಭಗವತ್ಪಾದರು ವೇದಾಂತದ ಮುಖ್ಯಪ್ರಮೇಯಗಳನ್ನು ಯಾವ

ರೀತಿಯಲ್ಲಿ ಪ್ರತಿಪಾದಿಸಿದ್ದಾರೆ. ಅನುಷಂಗಿಕವಾಗಿ ಯಾವ ಯಾವ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ-ಎಂಬುದನ್ನರಿಯುವ ಕುತೂಹಲವಿದ್ದವರಿಗೆ ಈ ಗ್ರಂಥವು ಉಪಯುಕ್ತವಾಗುತ್ತದೆಯೆಂದು ನಾನು ನಂಬಿದ್ದೇನೆ. ಪ್ರಸ್ಥಾನತ್ರಯ ಭಾಷ್ಯಗಳನ್ನು ಅಧ್ಯಯನ ಮಾಡುವುದು ಸುಲಭವಲ್ಲ. ಸಮರ್ಥರಾದ ಗುರುಗಳ ನೆರವಿಲ್ಲದೆ ಅಲ್ಲಿರುವ ವಾದ-ವಿವಾದಗಳನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ. ವೇದಾಂತದ ಸಾರವನ್ನು ಗ್ರಹಿಸಿ ಅದನ್ನು ಮತ್ತೆ ಮತ್ತೆ ಮನನ ಮಾಡಲು ಜಿಜ್ಞಾಸುಗಳಿಗೆ ಸಹಾಯವಾಗುತ್ತದೆಯೆಂದು ಆಚಾರ್ಯರ ಪ್ರಸ್ಥಾನತ್ರಯ ಭಾಷ್ಯಗಳಿಂದ ಆಯ್ದ ಸೂಕ್ತಿಗಳನ್ನು ಕನ್ನಡ ಅರ್ಥಸಹಿತವಾಗಿ ಇದರಲ್ಲಿ ನಿರೂಪಿಸಲಾಗಿದೆ. ಪ್ರತಿಪಾದಿತ ವಿಷಯಗಳಿಗೆ ಪ್ರಾಮಾಣ್ಯವನ್ನು ತೋರಿಸುವುದಕ್ಕಾಗಿ ಆಚಾರ್ಯರ ವಚನಗಳನ್ನೇ ಉದಾಹರಿಸಲಾಗಿದೆ.

ವೇದಾಂತವನ್ನು ಅಭ್ಯಾಸ ಮಾಡತಕ್ಕವರಿಗೂ ಮನನ ಮಾಡತಕ್ಕವರಿಗೂ ಈ ಪುಸ್ತಕದಿಂದ ಪ್ರಯೋಜನವಾಗುವುದೆಂದು ನನ್ನ ಎಣಿಕೆ. ಈ ಗ್ರಂಥವನ್ನು ಪ್ರಕಟಿಸಲು ಮುಂದೆ ಬಂದ ಹೆಬ್ಬೂರಿನ ಅದ್ವೈತ ವಿದ್ಯಾ ಪ್ರತಿಷ್ಠಾನಕ್ಕೂ ಇದಕ್ಕಾಗಿ ವಿಶೇಷವಾಗಿ ಶ್ರಮಿಸಿದ ಅದರ ಕಾರ್ಯದರ್ಶಿಗಳಾದ ಡಾ|| ಬಿ.ಎಸ್. ರಾಮಕೃಷ್ಣರಾವ್ ಅವರಿಗೂ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳು ಸಲ್ಲುತ್ತವೆ.

ಬೆಂಗಳೂರು
ಶಂಕರಜಯಂತೀ
20.4.1999

ಇತಿ
ಸಜ್ಜನ ವಿಧೇಯ
ಎನ್. ರಂಗನಾಥಶರ್ಮಾ

## ದ್ವಿತೀಯ ಮುದ್ರಣ

ಹೆಬ್ಬೂರು ಶ್ರೀಮಠದ ಅದ್ವೈತ ಪ್ರತಿಷ್ಠಾನವು ಈ ಗ್ರಂಥದ ಪ್ರಥಮ ಮುದ್ರಣವನ್ನು ಮಾಡಿ ಪ್ರಕಾಶನ ಗೊಳಿಸಿತು. ಈಗ ಆ ಪ್ರತಿಷ್ಠಾನವು ಇಲ್ಲ. ಆದ್ದರಿಂದ ಇದರ ದ್ವಿತೀಯ ಮುದ್ರಣವನ್ನು ಮಾಡಿ ಪ್ರಕಾಶನಗೊಳಿಸಿರುವ ಮೈಸೂರು ಜಯನಗರದ ಕಾವ್ಯಾಲಯ ಪ್ರಕಾಶನದ ಒಡೆಯರಾದ ಶ್ರೀ ಚಿದಂಬರಂ ಕೂಡಲಿ ಕೃಷ್ಣಮೂರ್ತಿ ಮತ್ತು ಶ್ರೀಮತಿ ಸಿ.ಕೆ. ಪ್ರಭಾ ಅವರಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳು ಸಲ್ಲುತ್ತವೆ.

ಬೆಂಗಳೂರು
05.9.2008

ಇತಿ
ಸಜ್ಜನ ವಿಧೇಯ
ಎನ್. ರಂಗನಾಥಶರ್ಮಾ

# ಶ್ರೀಶಾಂಕರಸೂಕ್ತಿ ಮಣಿಹಾರ

## ೧ ಪರಬ್ರಹ್ಮ

ಯಾವುದೇ ಒಂದು ವಸ್ತುವನ್ನು ಶಬ್ದದಿಂದ ತಿಳಿಸಬೇಕಾದರೆ ಆ ವಸ್ತುವಿನಲ್ಲಿ ಒಂದಾನೊಂದು ಧರ್ಮವನ್ನು ಪುರಸ್ಕರಿಸಿಯೇ ತಿಳಿಸಬೇಕಾಗುತ್ತದೆ. ಅಂತಹ ಧರ್ಮಕ್ಕೆ ಪ್ರವೃತ್ತಿನಿಮಿತ್ತವೆನ್ನುತ್ತಾರೆ. ಪ್ರವೃತ್ತಿ = ಶಬ್ದಪ್ರಯೋಗ; ಶಬ್ದಪ್ರಯೋಗಕ್ಕೆ ಕಾರಣವಾದ ಧರ್ಮ ಅದು. ಅದನ್ನು ಜಾತಿ, ಗುಣ, ಕ್ರಿಯೆ ಸಂಜ್ಞೆ ಎಂದು ನಾಲ್ಕು ಬಗೆಯಾಗಿ ವಿಂಗಡಿಸಿದ್ದಾರೆ. ಜಾತಿಯೆಂದರೆ ಇಲ್ಲಿ ಒಂದು ದ್ರವ್ಯದಲ್ಲಿರುವ ಧರ್ಮ-ವಿಶೇಷ. ಘಟ, ಪಟ, ವೃಕ್ಷ-ಮುಂತಾದವುಗಳಲ್ಲಿ ಘಟತ್ವ, ಪಟತ್ವ, ವೃಕ್ಷತ್ವ ಮುಂತಾದ ಸಾಮಾನ್ಯಧರ್ಮಗಳಿವೆ. ಮನುಷ್ಯನಲ್ಲಿ ಮನುಷ್ಯತ್ವ, ಸ್ತ್ರೀಯಲ್ಲಿ ಸ್ತ್ರೀತ್ವ ಇತ್ಯಾದಿ. ಮೃದು, ಕಠಿಣ, ದೀರ್ಘ -ಮೊದಲಾದ ವಿಶೇಷಣ ಶಬ್ದಗಳನ್ನು ಬಳಸುವಾಗ ಮೃದುತ್ವ, ಕಠಿಣತ್ವ, ದೀರ್ಘತ್ವ-ಮೊದಲಾದ ಧರ್ಮಗಳನ್ನು ಪುರಸ್ಕರಿಸುತ್ತೇವೆ. ಇವು ಗುಣಗಳು, ಪಾಚಕ, ಪಾಠಕ, ಶಾಸಕ ಮೊದಲಾದವುಗಳಲ್ಲಿ ಪಾಚನ, ಪಠನ, ಶಾಸನ ಇತ್ಯಾದಿ ಧರ್ಮಗಳಿವೆ. ಇವು ಕ್ರಿಯೆಗಳು. ಹೀಗೆ ಜಾತಿ, ಗುಣ, ಕ್ರಿಯೆಗಳ ಮೂಲಕವೇ ಸಕಲ ಶಬ್ದವ್ಯವಹಾರವು ನಡೆಯುತ್ತದೆ. ಚೈತ್ರ, ಮೈತ್ರ, ದೇವದತ್ತ ಇತ್ಯಾದಿ ಶಬ್ದಗಳು ಸಂಜ್ಞಾಶಬ್ದಗಳು. ಆ ಪದಾರ್ಥಗಳಲ್ಲಿ ಜಾತಿ, ಗುಣ, ಕ್ರಿಯೆಗಳಲ್ಲೊಂದು ಇದ್ದೇ ಇರುತ್ತದೆ. ಆದರೆ ಚೈತ್ರ ಮೊದಲಾದ ಶಬ್ದಗಳಿಂದ ಆ ಧರ್ಮವು ಸ್ಪಷ್ಟವಾಗಿ ಗೊತ್ತಾಗುವುದಿಲ್ಲ. ಇಂತಹ ಶಬ್ದಗಳಲ್ಲಿ ಬರಿಯ ಸಂಜ್ಞೆಯೇ -ಹೆಸರೇ ಪ್ರವೃತ್ತಿನಿಮಿತ್ತವೆನ್ನುತ್ತಾರೆ. ಯಾವ ಹೆಸರನ್ನಾದರೂ ಪದಾರ್ಥಕ್ಕೆ ಇಡಲು ಸಾಧ್ಯ. ಅದರಿಂದ ಪದಾರ್ಥದ ನಿಜಸ್ವರೂಪವೇನೂ ಗೊತ್ತಾಗುವುದಿಲ್ಲ. ಆದಕಾರಣ ಜಾತಿ, ಗುಣ, ಕ್ರಿಯೆಗಳೊಂದೂ ಇಲ್ಲದ ಪದಾರ್ಥವನ್ನು ಶಬ್ದಕ್ಕೆ ಅಗೋಚರವೆಂದೇ ಹೇಳಬೇಕು. ಪರಬ್ರಹ್ಮದಲ್ಲಿ ಯಾವುದೇ ಒಂದು ಧರ್ಮವೂ ಇಲ್ಲ. ಅದನ್ನು ಶಬ್ದದಿಂದ ನಿರ್ದೇಶಿಸಲು ಆಗುವುದಿಲ್ಲ. ಅದನ್ನು ಬೋಧಿಸುವುದಕ್ಕಾಗಿ ಒಂದಾನೊಂದು ಶಬ್ದವನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ. ಬ್ರಹ್ಮ, ಆತ್ಮ-ಎಂಬಿವು ಈ ರೀತಿ ಕಲ್ಪಿತ ಶಬ್ದಗಳು. ಈ ಕಲ್ಪಿತ ನಾಮಗಳಿಂದಲೂ ವ್ಯವಹಾರದಲ್ಲಿ ಒಂದಾನೊಂದು ಧರ್ಮವು ತೋರಬಹುದು. ಅದು ಅನಿವಾರ್ಯವಾಗಿ ಆರೋಪಿತವಾದದ್ದೇ ಹೊರತು ವಿವಕ್ಷಿತ ಧರ್ಮವಲ್ಲ. ಉದಾಹರಣೆಗೆ ಬ್ರಹ್ಮವೆಂದರೆ ದೊಡ್ಡದು ಎಂದರ್ಥ. ಯಾವುದಕ್ಕಿಂತ ದೊಡ್ಡದು? ಇನ್ನೊಂದು ವಸ್ತುವೇ ಇಲ್ಲದೆ ಬ್ರಹ್ಮವು ಅದ್ವಿತೀಯಾವಾಗಿರುವಾಗ ಯಾವುದಕ್ಕಿಂತ? -ಎಂಬ ಪ್ರಶ್ನೆಗೆ ಉತ್ತರವೇ ದೊರಕುವುದಿಲ್ಲ. ಆಕಾಶಾದಿಗಳೂ ಬ್ರಹ್ಮದಲ್ಲಿ ಕಲ್ಪಿತವಾದ್ದರಿಂದ ಅವು ಪರಮಾರ್ಥದಲ್ಲಿ ಬ್ರಹ್ಮಾತಿರಿಕ್ತವಾಗುವುದೇ ಇಲ್ಲ. ಹೀಗೆ ನಿರ್ಗುಣವಾದದ್ದು ಬ್ರಹ್ಮ. ನಿರ್ಗುಣವೆಂದರೆ

ನಿರ್ವಿಶೇಷವೆಂದೂ ಯಾವ ಧರ್ಮವೂ ಇಲ್ಲದ್ದು ಎಂದು ಅರ್ಥ. ಇದನ್ನು ಪರಬ್ರಹ್ಮವೆಂದೂ ಮಾಯೆಯೆಂಬ ಉಪಾಧಿಯಿಂದ ಸಗುಣವಾದಾಗ ಸಗುಣವೆಂದೂ ಹೇಳುತ್ತಾರೆ. ಬ್ರಹ್ಮ, ವಿಷ್ಣು, ಮಹೇಶ್ವರರು ಸಗುಣ ಬ್ರಹ್ಮರು. ಇವರನ್ನು ಶಬ್ದಗಳಿಂದ ವರ್ಣಿಸಲು ಬರುತ್ತದೆ. ಪರಬ್ರಹ್ಮವನ್ನು ವರ್ಣಿಸಲಾಗುವುದಿಲ್ಲ. ಅದು ವಾಚಾಮಗೋಚರ. ಆದ್ದರಿಂದ ಮನಸ್ಸಿಗೂ ಅತೀತವಾದದ್ದು.

**1**

**ಶ್ರುತ್ಯವಗಾಹ್ಯಮೇವೇದಮತಿಗಂಭೀರಂ ಬ್ರಹ್ಮ, ನ ತರ್ಕಾವಗಾಹ್ಯಮ್ |**

**-ಸೂ. ಭಾ. 2-1-31**

ಅತಿ ಗಂಭೀರವಾದ ಈ ಬ್ರಹ್ಮವು ಶ್ರುತಿಯಿಂದ ಮಾತ್ರ ಗೋಚರವಾಗ ತಕ್ಕದ್ದು, ತರ್ಕಕ್ಕೆ ನಿಲುಕತಕ್ಕದ್ದಲ್ಲ.

**2**

**ಶಬ್ದಮೂಲಂ ಚ ಬ್ರಹ್ಮ ಶಬ್ದಪ್ರಮಾಣಕಂ ನೇಂದ್ರಿ ಯಾದಿ-ಪ್ರಮಾಣ ಕಮ್ | ತದ್ಯಥಾಶಬ್ದಮಭ್ಯುಪಗಂತವ್ಯಮ್ | ಶಬ್ದಶ್ಚೋಭಯಮಪಿ ಬ್ರಹ್ಮಣಃ ಪ್ರತಿಪಾದಯತ್ಯಕೃತ್ಸ್ನಪ್ರಸಕ್ತಿಂ ನಿರವಯವತ್ವಂ ಚ |**

**- ಸೂ. ಭಾ. 2-1-27**

ಬ್ರಹ್ಮವು ಶಬ್ದಮೂಲವಾದದ್ದು ಎಂದರೆ ಶಬ್ದವೇ (=ವೇದವೇ) ಅದಕ್ಕೆ ಪ್ರಮಾಣವಾಗಿರುತ್ತದೆ. ಇಂದ್ರಿಯಾದಿಗಳು ಅದಕ್ಕೆ ಪ್ರಮಾಣವಲ್ಲ. ಆದ್ದರಿಂದ ಶಬ್ದವು ಹೇಗೆ ಹೇಳುತ್ತದೆಯೋ ಹಾಗೆ ಬ್ರಹ್ಮವಿದೆಯೆಂದು ಒಪ್ಪಬೇಕು. ಶಬ್ದವಾದರೋ ಬ್ರಹ್ಮವೆಲ್ಲವೂ ಜಗತ್ತಾಗುವುದೂ ಇಲ್ಲ, ನಿರವಯವವೂ ಆಗಿದೆ ಎಂದು ಎರಡನ್ನೂ ಬ್ರಹ್ಮಕ್ಕೆ ಹೇಳುತ್ತದೆ.

**'ಸತಾ ಸೌಮ್ಯ ತದಾ ಸಂಪನ್ನೋ ಭವತಿ' (ಛಾಂ. 6-8-1)** ಇತ್ಯಾದಿ ಶ್ರುತಿಯು ಬ್ರಹ್ಮವೆಲ್ಲವೂ ಜಗತ್ತಾಗಿಲ್ಲ ಎಂದು ತಿಳಿಸುತ್ತದೆ. **'ನಿಷ್ಕಲಂ ನಿಷ್ಕ್ರಿಯಂ ಶಾಂತಂ' (ಶ್ವೇತಾ. 6-11)** ಇತ್ಯಾದಿ ಶ್ರುತಿಯು ಬ್ರಹ್ಮವು ನಿರವಯವ ಎಂದು ಹೇಳುತ್ತದೆ.

**3**

**ದಿಗ್‌ದೇಶಗುಣಗತಿಫಲಭೇದಶೂನ್ಯಂ ಹಿ ಪರಮಾರ್ಥಸದದ್ವಯಂ ಬ್ರಹ್ಮ**

**ಮಂದಬುದ್ಧೀನಾಮ್ ಅಸದಿವ ಪ್ರತಿಭಾತಿ|** **-ಛಾಂ. 8-1-1**

ದಿಕ್ಕು, ದೇಶ, ಗುಣ, ಗತಿ, ಫಲ, ಕಾಲಾದಿಭೇದ-ಇವುಗಳೊಂದೂ ಇಲ್ಲದ, ಪರಮಾರ್ಥವೂ ಸದ್ರೂಪವೂ ಅದ್ವಯವೂ ಆದ ಬ್ರಹ್ಮವು ಅಲ್ಪಬುದ್ಧಿಯವರಿಗೆ 'ಅಸತ್-ಇಲ್ಲ' ಎಂಬಂತೆ ತೋರುತ್ತದೆ.

**4**

**ಯದ್ವಿಷಯಾ ಬುದ್ಧಿಃ ನ ವ್ಯಭಿಚರತಿ ತತ್ ಸತ್, ಯದ್ವಿಷಯಾ ವ್ಯಭಿಚರತಿ ತದಸತ್ ||** **-ಗೀತಾ 2-16**

ಯಾವ ವಸ್ತುವಿನ ಬುದ್ಧಿ ಬದಲಾಯಿಸುವುದಿಲ್ಲವೋ ಆ ವಸ್ತು ಸತ್. ಯಾವ ವಸ್ತುವಿನ ಬುದ್ಧಿ ಬದಲಾಯಿಸುತ್ತದೆಯೋ ಅದು ಅಸತ್.

ವಸ್ತುಸ್ವರೂಪವು ಬದಲಾಯಿಸಿದರೆ ಅದರ ವಿಷಯದ ಬುದ್ಧಿಯೂ ವಸ್ತು-ಸ್ವರೂಪದಂತೆ ಬದಲಾಯಿಸುತ್ತದೆ. ಘಟಾದಿವಿಷಯಕ ಬುದ್ಧಿಯು ಬದಲಾಯಿಸುತ್ತದೆ. ಏಕೆಂದರೆ ಘಟವು ನಷ್ಟವಾದ ಮೇಲೆ ಆ ಬುದ್ಧಿ ಇರುವುದಿಲ್ಲ. ವಿಕಾರವೆಲ್ಲವೂ ಅನೃತವೆಂದು ತಾತ್ಪರ್ಯ. ಘಟವು ಮಣ್ಣಿನ ವಿಕಾರ.

**5**

**ಸರ್ವಾಸು ಹಿ ಉಪನಿಷತ್ಸು ಜ್ಞೇಯಂ ಬ್ರಹ್ಮ "ನೇತಿ ನೇತಿ" (ಬೃ. 2-3-6) "ಅಸ್ಥೂಲಮನಣು" (ಬೃಹ. 3-8-8) ಇತ್ಯಾದಿ ವಿಶೇಷ ಪ್ರತಿಷೇಧೇನೈವ ನಿರ್ದಿಶ್ಯತೇ ನ "ಇದಂ ತತ್" ಇತಿ | ವಾಚಃ ಅಗೋಚರತ್ವಾತ್|** **-ಗೀತಾ 13-12**

ಸಮಸ್ತ ಉಪನಿಷತ್ತುಗಳಲ್ಲಿಯೂ ಜ್ಞೇಯವಾದ ಬ್ರಹ್ಮವು- 'ಇದಲ್ಲ' 'ಸ್ಥೂಲವಲ್ಲ ಅಣುವಲ್ಲ' ಈ ರೀತಿಯಲ್ಲಿ ವಿಶೇಷವನ್ನು ನಿಷೇಧಿಸುವುದರ ಮೂಲಕವೇ ನಿರ್ದಿಷ್ಟವಾಗಿರುತ್ತದೆ. 'ಇಂತಹದು ಆ ಬ್ರಹ್ಮ' ಎಂದು ಎಲ್ಲಿಯೂ ಹೇಳಿಲ್ಲ. ವಾಕ್ಕಿಗೆ ಅಗೋಚರವಾಗಿರುವುದೇ ಅದಕ್ಕೆ ಕಾರಣ.

**"ಅಪೂರ್ವಮನಪರಮ್, ಅಸಂಗೋ ಹ್ಯಯಂ ಪುರುಷಃ, ನಾಸದಾಸೀತ್ ನೋ ಸದಾಸೀತ್, ಅಪಾಣಿಪಾದಮ್"** ಇತ್ಯಾದಿ ಶ್ರುತಿಗಳು ನಿಷೇಧ ಮುಖವಾಗಿಯೇ ಇವೆ. 'ಸತ್' ಎಂಬ ಶಬ್ದಕ್ಕೆ ಅದು ವಾಚ್ಯವಲ್ಲ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ ವಾಕ್ಯಗಳಲ್ಲಿ ಸಹ ಲಕ್ಷಣೆಯಿಂದಲೇ ಬ್ರಹ್ಮವನ್ನು ಗ್ರಹಿಸಬೇಕಾಗುತ್ತದೆ.

**6**

**ಯದಾ ಪುನಃ ಸ್ವರೂಪಮೇವ ನಿರ್ದಿದಿಕ್ಷಿತಂ ಭವತಿ ನಿರಸ್ತ-ಸರ್ವೋಪಾಧಿವಿಶೇಷಮ್, ತದಾ ನ ಶಕ್ಯತೇ ಕೇನಚಿದಪಿ ಪ್ರಕಾರೇಣ ನಿರ್ದೇಷ್ಟುಮ್| ತದಾ ಅಯಮೇವಾಭ್ಯುಪಾಯೋ ಯದುತ ಪ್ರಾಪ್ತ-ನಿರ್ದೇಶಪ್ರತಿಕ್ಷೇಪದ್ವಾರೇಣ 'ನೇತಿ ನೇತಿ' ಇತಿ ನಿರ್ದೇಶಃ| -ಬೃಹ. 2-3-6**

ಪರಬ್ರಹ್ಮದ ನಿಜವಾದ ಸ್ವರೂಪವನ್ನೇ ನಿರ್ದೇಶಿಸಬೇಕಾದರೆ ಅದರಲ್ಲಿ ಸಕಲೋಪಾಧಿಗಳೂ ಇಲ್ಲವಾದ್ದರಿಂದ ಇನ್ನು ಯಾವ ಪ್ರಕಾರದಿಂದಲೂ ವರ್ಣಿಸಲಾಗುವುದಿಲ್ಲ. ಅದನ್ನು ತಿಳಿಸಿಕೊಡುವುದಕ್ಕೆ ಇರುವುದೊಂದೇ ಉಪಾಯ. ಏನೆಂದರೆ (ಮನುಷ್ಯಾದಿಗಳಂತೆ) ಯಾವ ಯಾವುದು ಪ್ರಾಪ್ತವಾಗುತ್ತದೆಯೋ ಅದು 'ಇಲ್ಲ, ಇಲ್ಲ' ಎಂದು 'ನೇತಿ' ಗಳೆಯುವುದೇ ಉಪಾಯ.

**7**

**ತಸ್ಮಾದೇವ ಚ ನ ಜ್ಞಾನಶಬ್ದವಾಚ್ಯಮಪಿ ತದ್ಬ್ರಹ್ಮ |ತಥಾಪಿ ತದಾಭಾಸವಾಚಕೇನ ಬುದ್ಧಿಧರ್ಮವಿಷಯೇಣ ಜ್ಞಾನಶಬ್ದೇನ ತಲ್ಲಕ್ಷ್ಯತೇ | ನ ತು ಉಚ್ಯತೇ | ಶಬ್ದಪ್ರವೃತ್ತಿಹೇತುಜಾತ್ಯಾದಿಧರ್ಮರಹಿತತ್ವಾತ್, ಸತ್ಯಾನಂತ ಶಬ್ದಾಭ್ಯಾಂ ಸಾಮಾನಾಧಿಕರಣ್ಯಾತ್ | -ತೈತ್ತಿ. ಆನಂದವಲ್ಲಿ-1**

ಬ್ರಹ್ಮವು ಜ್ಞಾನಪದವಾಚ್ಯವಾದ ಲೌಕಿಕಜ್ಞಾನಕ್ಕಿಂತ ವಿಲಕ್ಷಣವಾದ್ದರಿಂದಲೇ ಜ್ಞಾನಶಬ್ದಕ್ಕೆ ವಾಚ್ಯವಲ್ಲ. ಆದರೂ ಸಹ ಜ್ಞಾನಾಭಾಸವಾಚಕವೂ ಬುದ್ಧಿಧರ್ಮವನ್ನು ಹೇಳುವುದೂ ಆದ ಜ್ಞಾನಶಬ್ದಕ್ಕೆ ಲಕ್ಷ್ಯವಾಗಿರುತ್ತದೆ. ವಾಚ್ಯವಾಗಿರುವುದಿಲ್ಲ. ಏಕೆಂದರೆ ಶಬ್ದಪ್ರಯೋಗಕ್ಕೆ ಕಾರಣವಾದ ಜಾತಿಯೇ ಮೊದಲಾದ ಪ್ರವೃತ್ತಿ ನಿಮಿತ್ತವಾದ ಧರ್ಮ ಬ್ರಹ್ಮದಲ್ಲಿಲ್ಲ. ಏಕೆಂದರೆ ಸತ್ಯ, ಅನಂತ ಎಂಬ ಶಬ್ದಗಳೊಡನೆ ಸಾಮಾನಾಧಿಕರಣ್ಯದಿಂದ ಪ್ರಯೋಗಿಸಲಾಗಿದೆ.

**'ಸತ್ಯಂ ಜ್ಞಾನಮನಂತಂ ಬ್ರಹ್ಮ'** - ಎಂಬುದು ಶ್ರುತಿವಾಕ್ಯ.

**8**

**ತದ್ಬ್ರಹ್ಮ ಸರ್ವಜ್ಞಂ ಸರ್ವಶಕ್ತಂ ಜಗದುತ್ಪತ್ತಿಸ್ಥಿತಿಲಯಕಾರಣಂ ವೇದಾಂತಶಾಸ್ತ್ರಾದೇವಾವಗಮ್ಯತೇ | -ಸೂ. ಭಾ. 1-1-4**

ಸರ್ವಜ್ಞವೂ ಸರ್ವಶಕ್ತಿಯುಳ್ಳದ್ದೂ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣವೂ ಆದ ಆ ಬ್ರಹ್ಮವಸ್ತು ವೇದಾಂತಶಾಸ್ತ್ರದಿಂದ ಮಾತ್ರ ತಿಳಿಯಲ್ಪಡುತ್ತದೆ.

**9**

**ಯೋ ಮೂಲಪ್ರಕೃತಿರಭ್ಯುಪಗಮ್ಯತೇ ತದೇವ ಚ ನೋ ಬ್ರಹ್ಮೇತ್ಯ-ವಿರೋಧಃ |**

**-ಸೂ. ಭಾ. 2-3-9**

ಯಾವುದನ್ನು ಮೂಲಪ್ರಕೃತಿಯೆಂದು ಒಪ್ಪುತ್ತೀರೋ ಅದೇ ನಮ್ಮ ಮತದಲ್ಲಿ ಬ್ರಹ್ಮವೆನಿಸುತ್ತದೆ. ಆದ್ದರಿಂದ ವಿರೋಧವಿಲ್ಲ.

ಸಾಂಖ್ಯರು ಜಗತ್ತಿಗೆ ಜಡವಾದ ಮೂಲಪ್ರಕೃತಿಯು ಆದಿಕಾರಣವೆಂದು ಒಪ್ಪುತ್ತಾರೆ. ಅದು ಚೇತನವೇ ಆಗಿರಬೇಕೆಂದು ಬ್ರಹ್ಮವಾದಿಗಳ ಸಿದ್ಧಾಂತ. ಮೂಲ ಕಾರಣವೆಂಬ ಹೋಲಿಕೆಯಿಂದ ಮೂಲಪ್ರಕೃತಿಯೇ ಬ್ರಹ್ಮ ಎಂದು ಇಲ್ಲಿ ಹೇಳಿದೆ. ಸಾಂಖ್ಯಕಲ್ಪಿತವಾದ ಜಡ ಮೂಲಪ್ರಕೃತಿ ಇಲ್ಲಿ ವಿವಕ್ಷಿತವಲ್ಲ.

**10**

**ನ ಹ್ಯನಾಧಾರಸ್ಯ ಸ್ವಮಹಿಮಪ್ರತಿಷ್ಠಸ್ಯ ಸರ್ವವ್ಯಾಪಿನಃ ಪರಮೇಶ್ವರಸ್ಯಾಧಾರ ಉಪಾದಿಶ್ಯೇತ |** **- ಸೂ. ಭಾ. 1-1-20**

ಆಧಾರವಿಲ್ಲದೆಯೇ ಇರತಕ್ಕವನೂ ತನ್ನ ಮಹಿಮೆಯಲ್ಲಿಯೇ ಪ್ರತಿಷ್ಠಿತನೂ ಸರ್ವವ್ಯಾಪಿಯೂ ಆದ ಪರಮೇಶ್ವರನಿಗೆ ಒಂದು ಆಧಾರವನ್ನು ಹೇಳಲು ಶಕ್ಯವಿಲ್ಲವಷ್ಟೆ?

'**ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ (ಛಾಂ. 7-24-1)** ಎನ್ನುತ್ತದೆ ಶ್ರುತಿ.

**11**

**ಜ್ಞಾನಕರ್ತೃತ್ವೇನ ಹಿ ವಿಕ್ರಿಯಮಾಣಂ ಕಥಂ ಸತ್ಯಂ ಭವೇತ್ ಅನಂತಂ ಚ |**

**- ತೈತ್ತಿ. ಆನಂದ-1**

ಜ್ಞಾನಕ್ಕೆ ಕರ್ತೃವಾಗಿ ವಿಕಾರಹೊಂದತಕ್ಕ ವಸ್ತು ಸತ್ಯ ಹೇಗಾದೀತು? ಅನಂತ ಹೇಗಾದೀತು?

ಜ್ಞಾನಕ್ಕೆ ಕರ್ತೃವಾಗಬೇಕಾದರೆ ಜ್ಞಾನವನ್ನೂ ಜ್ಞಾನಕ್ಕೆ ಅನುಕೂಲವಾದ ಕ್ರಿಯೆಯನ್ನೂ ಹೊಂದಬೇಕಾಗುತ್ತದೆ. ಆಗ ಅದು ವಿಕಾರವನ್ನು ಹೊಂದುತ್ತದೆ ಎಂದಾಯಿತು. ವಿಕಾರ ಹೊಂದತಕ್ಕದ್ದು ಜಡವೇ ಸರಿ. ಅದು ಸತ್ಯಸ್ವರೂಪವೂ ಆಗುವುದಿಲ್ಲ. ಜ್ಞಾನಕರ್ತೃವಾದರೆ ಜ್ಞಾನ-ಜ್ಞೇಯಗಳಿಂದ ವಿಭಕ್ತವಾಗಲೇಬೇಕಾಗುತ್ತದೆ. ವಿಭಕ್ತವಾದದ್ದು ಅನಂತವಲ್ಲ.

**12**

**ಯದ್ರೂಪೇಣ ಯನ್ನಿಶ್ಚಿತಂ ತತ್ ತದ್ರೂಪಂ ನ ವ್ಯಭಿಚರತಿ, ತತ್ ಸತ್ಯಮ್| ಯದ್ರೂಪೇಣ ಯನ್ನಿಶ್ಚಿತಂ ತತ್ ತದ್ರೂಪಂ ವ್ಯಭಿಚರತಿ, ತದನೃತ ಮಿತ್ಯುಚ್ಯತೇ| ಅತೋ ವಿಕಾರೋಽನೃತಮ್|**

**-ತೈತ್ತಿ. - ಆನಂದ -1**

ಯಾವುದು ಯಾವ ಸ್ವರೂಪವುಳ್ಳದ್ದೆಂದು ನಿಶ್ಚಿತವಾಗಿದೆಯೋ ಅದು ಆ ಸ್ವರೂಪವನ್ನು ಎಂದಿಗೂ ಬದಲಾಯಿಸದಿದ್ದರೆ ಸತ್ಯ ಎನ್ನಿಸುತ್ತದೆ. ಯಾವುದು ತನ್ನ ಸ್ವರೂಪವನ್ನು ಬದಲಾಯಿಸುತ್ತದೆಯೋ ಅದು ಅನೃತವೆನಿಸುತ್ತದೆ. ವಿಕಾರವು ಅನೃತವೇ (ಆದ್ದರಿಂದ ಬ್ರಹ್ಮಕ್ಕೆ ಯಾವ ವಿಕಾರವೂ ಸಂಭವಿಸುವುದಿಲ್ಲ).

**13**

**ಉತ್ಪತ್ತಿ-ಸ್ಥಿತಿ-ಲಯಕಾಲೇಷು ಯದಾತ್ಮತಾಂ ನ ಜಹತಿ ಭೂತಾನಿ ತದೇತದ್ ಬ್ರಹ್ಮಣೋ ಲಕ್ಷಣಮ್|** **- ತೈತ್ತಿ-ಭೃಗು-1**

ಉತ್ಪತ್ತಿ, ಸ್ಥಿತಿ, ಪ್ರಳಯಗಳಲ್ಲಿ ಪ್ರಾಣಿಗಳು ಯಾವುದರ ಸ್ವರೂಪವನ್ನು ಬಿಡುವುದಿಲ್ಲವೋ ಅದು ಬ್ರಹ್ಮದ ಲಕ್ಷಣ.

**14**

**ಸತ್ಯತ್ವಂ ಸ್ವಮಹಿಮಪ್ರತಿಷ್ಠಿತತ್ವಂ ಸರ್ವಾತ್ಮತ್ವಮಿತಿ ಚೈತೇ ಧರ್ಮಾಃ ಶ್ರೂಯಮಾಣಾಃ ಪರಮಾತ್ಮನ್ಯೇವೋಪಪದ್ಯಂತೇ ನಾನ್ಯತ್ರ|** **-ಸೂ. ಭಾ. 1-3-9**

ಸತ್ಯತ್ವ, ಮಹಿಮ ಪ್ರತಿಷ್ಠಿತತ್ವ, ಸರ್ವಾತ್ಮತ್ವ-ಎಂಬ ಶ್ರುತ್ಯುಕ್ತ ಧರ್ಮಗಳು ಪರಮಾತ್ಮನಲ್ಲಿ ಮಾತ್ರ ಯುಕ್ತವಾಗಿ ಕೂಡಿಕೊಳ್ಳುತ್ತವೆಯೇ ಹೊರತು, ಇನ್ನೊಂದರಲ್ಲಲ್ಲ.

**15**

**ನಿರ್ಗುಣಮಪಿ ಸದ್‌ಬ್ರಹ್ಮ ನಾಮರೂಪಗತೈರ್ಗುಣೈಃ ಸಗುಣಮುಪಾಸ ನಾರ್ಥಂ ತತ್ರ ತತ್ರ ಉಪದಿಶ್ಯತೇ | ಸರ್ವಗತಸ್ಯಾಪಿ ಬ್ರಹ್ಮಣಃ ಉಪಲಬ್ಧ್ಯರ್ಥಂ ಸ್ಥಾನ ವಿಶೇಷೋ ನ ವಿರುಧ್ಯತೇ, ಶಾಲಗ್ರಾಮ ಇವ ವಿಷ್ಣೋಃ -ಸೂ. ಭಾ. 1-2-14**

ಬ್ರಹ್ಮವು ನಿರ್ಗುಣವಾಗಿದ್ದರೂ ಸಹ ನಾಮ-ರೂಪ ಸಂಬಂಧಿಗಳಾದ ಗುಣಗಳಿಂದ ಸಹಿತವಾಗಿ ಉಪಾಸನೆಗೋಸ್ಕರ ಅಲ್ಲಲ್ಲಿ ಉಪದಿಷ್ಟವಾಗಿರುತ್ತದೆ. ಬ್ರಹ್ಮವು ಸರ್ವಗತವಾದರೂ ಸಹ, ಸಾಲಗ್ರಾಮದಲ್ಲಿ ವಿಷ್ಣು ಹೇಗೋ ಹಾಗೆ, (ಉಪಾಸನೆಗೋಸ್ಕರ) ಸ್ಥಾನವಿಶೇಷವನ್ನು ಹೇಳುವುದು ವಿರುದ್ಧವಲ್ಲ.

**16**

**ಅಧ್ಯಾರೋಪಿತನಾಮರೂಪಕರ್ಮದ್ವಾರೇಣ ಬ್ರಹ್ಮ ನಿರ್ದಿಶ್ಯತೇ 'ವಿಜ್ಞಾನಮಾನಂದಂ ಬ್ರಹ್ಮ' 'ವಿಜ್ಞಾನಘನ ಏವ' 'ಬ್ರಹ್ಮ' 'ಆತ್ಮಾ' ಇತ್ಯೇವಮಾದಿಶಬ್ದೈಃ |**

**-ಬೃಹ. 2-3-6**

'ವಿಜ್ಞಾನಮಾನಂದಂ ಬ್ರಹ್ಮ' 'ವಿಜ್ಞಾನಘನ ಏವ', 'ಬ್ರಹ್ಮ, ಆತ' - ಇತ್ಯಾದಿ ಶಬ್ದಗಳಿಂದ ಬ್ರಹ್ಮವನ್ನು ನಿರ್ದೇಶಿಸುವುದು ಕೂಡ ನಾಮ, ರೂಪ, ಕರ್ಮಗಳನ್ನು ಅದರಲ್ಲಿ ಅಧ್ಯಾರೋಪಮಾಡಿಯೇ ಆಗಿರುತ್ತದೆ.

ಬ್ರಹ್ಮವು ವಿಜ್ಞಾನಸ್ವರೂಪ, ಆನಂದಸ್ವರೂಪ, ವಿಜ್ಞಾನದ ರಾಶಿ ಎನ್ನುವುದು ಗುಣಗಳನ್ನು ಆರೋಪಿಸಿ. ಬ್ರಹ್ಮ (ದೊಡ್ಡದು) ಎನ್ನುವುದು ಸಹ ಗುಣಾರೋಪದಿಂದಲೇ. ಆತ್ಮಾ (ಸರ್ವಗಾಮಿ) ಎನ್ನುವುದು ಕ್ರಿಯೆಯ ಆರೋಪದಿಂದ. ಬ್ರಹ್ಮ, ಆತ್ಮಾ ಎನ್ನುವುದು ನಾಮದ ಆರೋಪವೇ ಆಗಿದೆ.

**17**

**ಉಪಾಧಿಕೃತಂ ಮಿಥ್ಯಾರೂಪಮಪಿ ಅಸ್ತಿತ್ವಾಧಿಗಮಾಯ ಜ್ಞೇಯ ಧರ್ಮವತ್ ಪರಿಕಲ್ಪ್ಯ ಉಚ್ಯತೇ 'ಸರ್ವತಃ ಪಾಣಿಪಾದಮ್' ಇತ್ಯಾದಿ|**

**-ಗೀತಾ 13-13**

ಪರಮಾತ್ಮನು 'ಸರ್ವತಃ ಪಾಣಿಪಾದಂ' ಎಲ್ಲಾ ಕಡೆಗೂ ಕೈಕಾಲುಗಳುಳ್ಳವನು ಇತ್ಯಾದಿಯಾಗಿ ವರ್ಣಿಸಿರುವುದು ಉಪಾಧಿಕೃತವಾದ ಮಿಥ್ಯಾರೂಪವನ್ನು, ಜ್ಞೇಯವಾದ

ಮನುಷ್ಯನ ಧರ್ಮವನ್ನು - ಆತ್ಮನಲ್ಲಿ ಆರೋಪಿಸಿ ಹೇಳಲಾಗಿದೆ. 'ಆತ್ಮನಿದ್ರಾನೆ' ಎಂದು ತಿಳಿಸಿಕೊಡುವುದಕ್ಕಾಗಿ ಈ ಕಲ್ಪನೆ.

'ಅಧ್ಯಾರೋಪಾಪವಾದನ್ಯಾಯ'ವನ್ನಿಲ್ಲಿ ಬಳಸಿಕೊಳ್ಳಬೇಕು.

**18**

ಅಶನಾಯಾದಿಮತ್ಸರ್ವಂ ಸಂಸಾರ ಏವ | ಪರಸ್ಯ ತು ಬ್ರಹ್ಮಣೋಽಶನಾಯಾದ್ಯತ್ಯಯಶ್ರುತೇಃ | - ಐತರೇಯ-ಉಪೋದ್ಘಾತ-3

ಹಸಿವು ಬಾಯರಿಕೆಗಳುಳ್ಳದ್ದು ಯಾವುದೋ ಅದೆಲ್ಲವೂ ಸಂಸಾರದಲ್ಲಿರತಕ್ಕದ್ದೇ ಸರಿ. ಏಕೆಂದರೆ ಪರಬ್ರಹ್ಮಕ್ಕೆ ಹಸಿವು ಮುಂತಾದವು ಇಲ್ಲವೆಂದು ಶ್ರುತಿ ಇದೆ.

ಹಸಿವು ಮೊದಲಾದವು ದುಃಖವನ್ನುಂಟುಮಾಡುತ್ತವೆ. ಪರಬ್ರಹ್ಮವು ದುಃಖರಹಿತವಾಗಿ ನಿರತಿಶಯಾನಂದಸ್ವರೂಪವಾದದ್ದು.

**19**

ದ್ವಿರೂಪಂ ಹಿ ಬ್ರಹ್ಮಾವಗಮ್ಯತೇ, ನಾಮರೂಪವಿಕಾರಭೇದೋಪಾಧಿ ವಿಶಿಷ್ಟಂ ತದ್ವಿಪರೀತಂ ಚ ಸರ್ವೋಪಾಧಿವಿವರ್ಜಿತಮ್ | -ಸೂ. ಭಾ. 1-1-12

ನಾಮರೂಪಗಳ ವಿಕಾರವಾದ ಬೇರೆ ಬೇರೆ ಉಪಾಧಿಗಳಿಂದ ಕೂಡಿದ ರೂಪ, ಮತ್ತು ಅದಕ್ಕೆ ವಿರುದ್ಧವಾಗಿ ಯಾವ ಉಪಾಧಿಯೂ ಇಲ್ಲದ ರೂಪ- ಈ ಪ್ರಕಾರವಾಗಿ ಎರಡು ರೂಪಗಳ ಬ್ರಹ್ಮವು ಶ್ರುತಿಗಳಲ್ಲಿ ವಿದಿತವಾಗಿದೆ.

ಸಗುಣ, ನಿರ್ಗುಣ- ಎಂದು ಬ್ರಹ್ಮ ಎರಡು ವಿಧವಾಗಿದೆ. ಸಗುಣವೇ ಉಪಾಧಿಸಹಿತವಾದದ್ದು. ನಿರ್ಗುಣವು ಉಪಾಧಿರಹಿತವಾದದ್ದು. "ಸಹಸ್ರಶೀರ್ಷಾ ಪುರಷಃ" ಇತ್ಯಾದಿ ಸಗುಣ. "ನಿಷ್ಕ್ರಿಯಂ ಶಾಂತಂ" ಇತ್ಯಾದಿ ನಿರ್ಗುಣ.

**20**

ಸ ಏವ ನಿರುಪಾಧಿಃ ಕೇವಲಃ ಶುದ್ಧಃ ಸ್ವೇನ ಸ್ವಭಾವೇನ ಅಕ್ಷರಂ ಪರ ಉಚ್ಯತೇ | ತಥಾ ಹಿರಣ್ಯಗರ್ಭಾವ್ಯಾಕೃತ ದೇವತಾ ಜಾತಿ ಪಿಂಡ ಮನುಷ್ಯ ತಿರ್ಯಕ್ ಪ್ರೇತಾದಿ ಕಾರ್ಯಕರಣೋಪಾಧಿಭಿರ್ವಿಶಿಷ್ಟಃ ತದಾಖ್ಯಸ್ತದ್ರೂಪೋ ಭವತಿ |

-ಬೃಹ. 5-8-12

ಅವನೇ ಯಾವ ಉಪಾಧಿಯೂ ಇಲ್ಲದೆ ಕೇವಲ ಶುದ್ಧನಾಗಿ ತನ್ನ ಸ್ವರೂಪದಲ್ಲಿರುವಾಗ ಅಕ್ಷರನೆಂದೂ ಪರಮಾತ್ಮನೆಂದೂ ಕರೆಸಿಕೊಳ್ಳುತ್ತಾನೆ. ಹಾಗೆಯೇ ಹಿರಣ್ಯಗರ್ಭ, ಅವ್ಯಾಕೃತ, ದೇವತೆ, ಜಾತಿ, ಪಿಂಡ, ಮನುಷ್ಯ, ತಿರ್ಯಗ್‌ಜಂತು, ಪ್ರೇತ ಮೊದಲಾದವುಗಳ ಶರೀರೇಂದ್ರಿಯೋಪಾಧಿಗಳಿಂದ ಕೂಡಿದಾಗ ಹಿರಣ್ಯಗರ್ಭ ಮುಂತಾದ ಹೆಸರನ್ನು ಪಡೆದು ಆಯಾ ಸ್ವರೂಪದವನಾಗಿ ಕಾಣುತ್ತಾನೆ.

ಒಂದೇ ಚೈತನ್ಯಕ್ಕೆ ಬೇರೆ ಬೇರೆ ಉಪಾಧಿಗಳಿಂದ ಬೇರೆ ಬೇರೆ ನಾಮರೂಪಗಳಿರುವಂತೆ ತೋರುತ್ತದೆ. ಪರಮಾರ್ಥವಾಗಿ ಚೈತನ್ಯ ಒಂದೇ.

## 21

**ನ ಹಿ ಆತ್ಮನೋऽನ್ಯತ್ ಅನಾತ್ಮಭೂತಂ ತತ್ಪ್ರವಿಭಕ್ತದೇಶಕಾಲಂ ಸೂಕ್ಷ್ಮಂ ವ್ಯವಹಿತಂ ವಿಪ್ರಕೃಷ್ಟಂ ಭೂತಂ ಭವಿಷ್ಯದ್ವಾ ವಸ್ತು ವಿದ್ಯತೇ | ಅತೋ ನಾಮರೂಪೇ ಸರ್ವಾವಸ್ಥೇ ಬ್ರಹ್ಮಣೈವ ಆತ್ಮವತೀ | ನ ಬ್ರಹ್ಮ ತದಾತ್ಮಕಮ್|**

**-ತೈತ್ತಿ. ಆನಂದ-6**

ಆತ್ಮನಿಗಿಂತ ಅನ್ಯವಾಗಿ ಆತ್ಮನಲ್ಲದ್ದೂ ಆತ್ಮನಿಗಿಂತ ಭಿನ್ನದೇಶ ಕುಲಗಳಲ್ಲಿರತಕ್ಕದ್ದೂ ಆದ ಯಾವುದೇ ಒಂದು ಸೂಕ್ಷ್ಮ ವಸ್ತುವು ವ್ಯವಹಿತವಾಗಿ ವಿಪ್ರಕೃಷ್ಟವಾಗಿ ಭೂತ ವರ್ತಮಾನ ಭವಿಷ್ಯತ್ಕಾಲಗಳಲ್ಲಿ ಇಲ್ಲ. ಆದ್ದರಿಂದ ಸರ್ವಾವಸ್ಥೆಗಳಲ್ಲಿರುವ ನಾಮರೂಪಗಳೆಲ್ಲವೂ ಬ್ರಹ್ಮವಿದ್ದದ್ದರಿಂದಲೇ ಅಸ್ತಿತ್ವವನ್ನು ಪಡೆದಿದೆ. ಆ ಬ್ರಹ್ಮವು ಮಾತ್ರ ನಾಮರೂಪಾತ್ಮಕವಲ್ಲ.

## 22

**ಪ್ರತಿಷಿದ್ಧಸರ್ವವಿಶೇಷಸ್ಯಾಪಿ ಬ್ರಹ್ಮಣಃ ಸರ್ವಶಕ್ತಿಯೋಗಃ ಸಂಭವತೀತ್ಯೇತದಪ್ಯವಿದ್ಯಾಕಲ್ಪಿತ ರೂಪಭೇದೋಪನ್ಯಾಸೇನೋಕ್ತಮೇವ |**

**-ಸೂ. ಭಾ. 2-1-31**

ಎಲ್ಲ ವಿಶೇಷಗಳನ್ನೂ ಬ್ರಹ್ಮದಲ್ಲಿಲ್ಲವೆಂದು ಅಲ್ಲಗಳೆದಿದ್ದರೂ ಅದಕ್ಕೆ ಸರ್ವಶಕ್ತಿಯೋಗವು ಸಂಭವಿಸಬಹುದು. ಇದನ್ನು ಅವಿದ್ಯಾಕಲ್ಪಿತ ರೂಪಭೇಧವನ್ನು ತಿಳಿಸುವುದರ ಮೂಲಕ ಹಿಂದೆ ಹೇಳಿದ್ದಾಗಿದೆ. (ಸೂ. ಭಾ. 2-1-25)

## 23

**ನ ತು ಪರಮಾರ್ಥತೋ ನಿರ್ವಿಕಲ್ಪೇ ಬ್ರಹ್ಮಣಿ ಕಶ್ಚಿದಪಿ ವಿಕಲ್ಪ ಉಪಪದ್ಯತೇ |**

**-ತೈತ್ತಿ. ಆನಂದ -8**

ನಿಜವಾಗಿಯೂ ವಿಕಲ್ಪರಹಿತವಾದ ಬ್ರಹ್ಮದಲ್ಲಿ ಯಾವ ವಿಕಲ್ಪವೂ ಹೊಂದುವುದಿಲ್ಲ.

ಬಹು ಭವನ, ಸೃಷ್ಟಿ, ಅನುಪ್ರವೇಶ, ಸಂಕ್ರಮಣ-ಮೊದಲಾದ ವಿಕಲ್ಪಗಳು ನಿರ್ವಿಶೇಷ ಬ್ರಹ್ಮವನ್ನು ತಿಳಿಸುವುದಕ್ಕಾಗಿ ವ್ಯವಹಾರಭಾಷೆಯಿಂದ ಕಲ್ಪಿತವಾದವು.

**24**

**ಅಸ್ತಿ ಚಾಯಮಪರೋ ದೃಷ್ಟಾಂತೋ ಯಥಾ ಸ್ವಯಂ ಪ್ರಸಾರಿತಯಾ ಮಾಯಯಾ ಮಾಯಾವೀ ತ್ರಿಷ್ವಪಿ ಕಾಲೇಷು ನ ಸಂಸ್ಪೃಶ್ಯತೇ, ಅವಸ್ತುತ್ವಾತ್, ಏವಂ ಪರಮಾತ್ಮಾऽಪಿ ಸಂಸಾರಮಾಯಯಾ ನ ಸಂಸ್ಪೃಶ್ಯತ ಇತಿ |**

**-ಸೂ. ಭಾ. 2-1-9**

ಕಾರ್ಯದ ಧರ್ಮವು ಕಾರಣದಲ್ಲಿ ಸೇರಿಕೊಳ್ಳುವುದಿಲ್ಲವೆಂಬುದಕ್ಕೆ ಇನ್ನೊಂದು ದೃಷ್ಟಾಂತ ಉಂಟು. ಯಾವುದೆಂದರೆ ಮಾಯಾವಿಯು ತಾನೇ ಪ್ರಸಾರಗೊಳಿಸಿದ ಮಾಯೆಗೆ ತ್ರಿಕಾಲಗಳಲ್ಲಿಯೂ ಸಿಕ್ಕಿಕೊಳ್ಳುವುದಿಲ್ಲ. ಏಕೆಂದರೆ, ಮಾಯೆಯೆಂಬುದು ಯಥಾರ್ಥವಾದ ವಸ್ತುವಲ್ಲ. ಹೀಗೆಯೇ ಪರಮಾತ್ಮನು ಸಹ ಸಂಸಾರಮಾಯೆಯ ಸ್ಪರ್ಶವಿಲ್ಲದವನಾಗಿರುತ್ತಾನೆ.

**25**

**ಸರ್ವತ್ರ ಹಿ ಬ್ರಹ್ಮಸ್ವರೂಪಪ್ರತಿಪಾದನಪರೇಷು ವಾಕ್ಯೇಷು 'ಅಶಬ್ದಮ್ ಅಸ್ಪರ್ಶಮರೂಪಮವ್ಯಯಂ' (ಕಠ 1-3-15) ಇತ್ಯಾದಿಷ್ವಪಾಸ್ತಸಮಸ್ತ ವಿಶೇಷ ಮೇವ ಬ್ರಹ್ಮೋಪದಿಶ್ಯತೇ |** **-ಸೂ. ಭಾ. 3-2-11**

ಬ್ರಹ್ಮಸ್ವರೂಪವನ್ನು ಪ್ರತಿಪಾದಿಸತಕ್ಕ 'ಅಶಬ್ದಮಸ್ಪರ್ಶಮರೂಪಮವ್ಯಯಮ್' (ಕಠ 1-3-15) ಮುಂತಾದ ವಾಕ್ಯಗಳಲ್ಲಿ ಬ್ರಹ್ಮವು ವಿಶೇಷವೂ ಇಲ್ಲದ್ದೆಂದು ಉಪದಿಷ್ಟವಾಗಿದೆ.

**26**

**ಕಾರ್ಯಂ ಹಿ ವಸ್ತು ಕಾಲೇನ ಪರಿಚ್ಛಿದ್ಯತೇ | ಅಕಾರ್ಯಂ ಚ ಬ್ರಹ್ಮ |**

**- ತೈತ್ತಿ. ಆನಂದ -1**

ಕಾರ್ಯವಾದ ವಸ್ತುವಿಗೆ ಕಾಲದಿಂದ ಪರಿಚ್ಛೇದ ಬರುತ್ತದೆ. ಬ್ರಹ್ಮವಾದರೋ ಅಕಾರ್ಯ.

ಜನ್ಯ ವಸ್ತುವಿಗೆ ಭೂತ-ಭವಿಷ್ಯದ್- ವರ್ತಮಾನ ಕಾಲಗಳ ಸಂಬಂಧ ಬರುತ್ತದೆ. ಬ್ರಹ್ಮವು ಜನ್ಯವಲ್ಲವಾದ್ದರಿಂದ ಅದು ಕಾಲದಿಂದ ಅಪರಿಚ್ಛಿನ್ನ. ಕಾಲದ ಅಳತೆಗೆ ಸಿಗತಕ್ಕದ್ದಲ್ಲ.

**27**

**ನ ಹಿ ಕಾರಣವ್ಯತಿರೇಕೇಣ ಕಾರ್ಯಂ ನಾಮ ವಸ್ತುತೋऽಸ್ತಿ |**

**-ತೈತ್ತಿ. ಆನಂದ 1-1**

ಕಾರಣಕ್ಕಿಂತ ಬೇರೆಯಾಗಿ ಕಾರ್ಯವೆಂಬುದು ನಿಜವಾಗಿ ಇಲ್ಲವಷ್ಟೆ.

ಸರ್ವಕಾರಣವೂ ಬ್ರಹ್ಮವೇ ಆದ್ದರಿಂದ ಬ್ರಹ್ಮಕ್ಕಿಂತ ಅತಿರಿಕ್ತವಾದದ್ದು ಯಾವುದು ಇಲ್ಲ.

**28**

**ಸನ್ಮಾತ್ರಂ ಹಿ ಬ್ರಹ್ಮ | ನ ತಸ್ಯ ಸನ್ಮಾತ್ರಾದೇವೋತ್ಪತ್ತಿಃ ಸಂಭವತಿ | ಅಸತ್ಯತಿಶಯೇ ಪ್ರಕೃತಿವಿಕಾರಭಾವಾನುಪಪತ್ತೇಃ |** **- ಸೂ. ಭಾ. 2-3-9**

ಬ್ರಹ್ಮವು ಸನ್ಮಾತ್ರವಾದದ್ದು. ಅದಕ್ಕೆ ಇನ್ನೊಂದು ಸನ್ಮಾತ್ರದಿಂದ ಉತ್ಪತ್ತಿಯೆಂಬುದು ಘಟಿಸುವುದಿಲ್ಲ. ಏಕೆಂದರೆ ಯಾವ ಅತಿಶಯವೂ ಇಲ್ಲದೆ ಪ್ರಕೃತಿ-ವಿಕೃತಿಭಾವವು ಯುಕ್ತವಾಗುವುದಿಲ್ಲ.

ಸದ್ವಿಶೇಷದಿಂದಲೂ ಸನ್ಮಾತ್ರವು ಹುಟ್ಟಲಾರದು. ಏಕೆಂದರೆ ಅದು ಎಲ್ಲಿಯೂ ಕಂಡಿರದ ವಿಪರೀತವಾಗಿರುತ್ತದೆ. ಹೇಗೆಂದರೆ ಸಾಮಾನ್ಯವಾಗಿ ಮಣ್ಣೇ ಮೊದಲಾದುದರಿಂದ ಮಡಕೆಯೇ ಮೊದಲಾದವುಗಳು ಹುಟ್ಟುತ್ತವೆಯೇ ಹೊರತು, ಘಟದಿಂದ ಮಣ್ಣು ಉತ್ಪತ್ತಿಯಾಗುವುದು ಕಂಡು ಬಂದಿಲ್ಲ. (ವಿಶೇಷದಿಂದ ಸಾಮಾನ್ಯವು ಹುಟ್ಟುವುದು ಕಂಡು ಬಂದಿಲ್ಲ). ಅಸತ್ತಿನಿಂದಲೂ ಹುಟ್ಟುವ ಹಾಗಿಲ್ಲ. ಅಸತ್ತಾದ ಶೂನ್ಯದಿಂದ ಸದ್ವಸ್ತುವಾದ ಬ್ರಹ್ಮವು ಹುಟ್ಟಲಾರದು.

ಕೇವಲ ಸದ್ರೂಪವಾದದ್ದು ಬ್ರಹ್ಮ, ಅದು ಅನಾದಿ, ಯಾವುದರಿಂದಲೂ ಅದರ ಹುಟ್ಟು ಶಕ್ಯವಿಲ್ಲವೆಂದು ಅಭಿಪ್ರಾಯ. ಕಾರಣಕ್ಕಿಂತ ಬೇರೆಯಾಗಿ ಒಂದು ವಿಶೇಷವಿದ್ದರೆ ಮಾತ್ರ 'ಅದು ಹುಟ್ಟಿತು' ಎಂದು ಹೇಳಲು ಸಾಧ್ಯ.

**29**

**ನಾಸ್ಯಾತ್ಮನೋಽಂತರ್ಬಹಿರ್ವಾ ಚೈತನ್ಯಾದನ್ಯದ್ರೂಪಮಸ್ತಿ | ಚೈತನ್ಯ ಮೇವ ತು ನಿರಂತರಮಸ್ಯ ಸ್ವರೂಪಮ್ | ಯಥಾ ಸೈಂಧವಘನಸ್ಯಾಂತರ್ಬಹಿಶ್ಚ ಲವಣರಸ ಏವ ನಿರಂತರೋ ಭವತಿ ನ ರಸಾಂತರಂ ತಥೈವೇತಿ |**

**-ಸೂ. ಭಾ. 3-2-16**

ಈ ಆತ್ಮನಿಗೆ ಒಳಗಾಗಲಿ, ಹೊರಗಾಗಲಿ ಚೈತನ್ಯಕ್ಕಿಂತ ಬೇರೆಯಾದ ರೂಪವಿಲ್ಲ. ಹೇಗೆ ಉಪ್ಪಿನ ಒಳಗೂ ಹೊರಗೂ ಉಪ್ಪಿನ ರಸವೇ ನಿರಂತರವಾಗಿರುತ್ತದೆಯೋ ಬೇರೊಂದು ರುಚಿ ಇರುವುದಿಲ್ಲವೋ ಹಾಗೆ ಬ್ರಹ್ಮವು ಚೈತನ್ಯಘನವಾಗಿರುತ್ತದೆ.

**30**

**ಯದ್ಧಿ ಕರಣಗೋಚರಂ ತದನ್ಯಸ್ಮೈ ಉಪದೇಷ್ಟುಂ ಶಕ್ಯಂ ಜಾತಿ ಗುಣಕ್ರಿಯಾವಿಶೇಷಣೈಃ | ನ ತಜ್ಜಾತ್ಯಾದಿ ವಿಶೇಷಣವದ್ ಬ್ರಹ್ಮ | - ಕೇನ 1-3**

ಯಾವುದು ಇಂದ್ರಿಯಗಳಿಗೆ ಗೋಚರವಾಗುತ್ತದೆಯೋ ಅದನ್ನು ಜಾತಿ, ಗುಣ, ಕ್ರಿಯಾ ಮುಂತಾದ ವಿಶೇಷಣಗಳನ್ನಿಟ್ಟು ಉಪದೇಶಿಸುವುದಕ್ಕೆ ಶಕ್ಯವಾಗುತ್ತದೆ. ಬ್ರಹ್ಮವಾದರೋ ಅಂತಹ ಜಾತಿಯೇ ಮೊದಲಾದ ವಿಶೇಷಣಗಳಿಂದ ಕೂಡಿದ್ದಲ್ಲ.

**31**

**ವಾಙ್ಮನಸಾತೀತಮವಿಷಯಾಂತಃಪಾತಿ ಪ್ರತ್ಯಗಾತ್ಮಭೂತಂ ನಿತ್ಯಶುದ್ಧ ಬುದ್ಧ ಮುಕ್ತ ಸ್ವಭಾವಂ ಬ್ರಹ್ಮೇತಿ | - ಸೂ. ಭಾ. 3-2-22**

ವಾಙ್ಮನಸ್ಸುಗಳಿಗೆ ಸಿಲುಕದ, ವಿಷಯಗಳಲ್ಲಿ ಸೇರದಿರುವ, ಪ್ರತ್ಯಗಾತ್ಮವಾಗಿ, ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವವುಳ್ಳದ್ದೇ ಬ್ರಹ್ಮ.

**32**

**ಯತ್ತು ವಿಧ್ವಸ್ತಸರ್ವೋಪಾಧಿವಿಶೇಷಂ ಶಾಂತಮನಂತಮೇಕಮದ್ವೈತಂ ಭೂಮಾಖ್ಯಂ ನಿತ್ಯಂ ಬ್ರಹ್ಮ, ನ ತತ್ ಸುವೇದ್ಯಮ್ | -ಕೇನ. 2-1**

ಎಲ್ಲ ಉಪಾಧಿಗಳಿಂದಲೂ ಮುಕ್ತವಾಗಿ ಶಾಂತವೂ ಅನಂತವೂ ಅದ್ವಿತೀಯವೂ ಬಹುದೊಡ್ಡದೂ ನಿತ್ಯವೂ ಆದ ಬ್ರಹ್ಮವನ್ನು ತಿಳಿಯುವುದು ಸುಲಭವಲ್ಲ.

## 33

**ಬ್ರಹ್ಮ ಚೈವಮಾಚಾರ್ಯೋಪದೇಶಪರಂಪರಯೈವಾಧಿಗಂತವ್ಯಂ ತರ್ಕತಃ ಪ್ರವಚನ-ಮೇಧಾ-ಬಹುಶ್ರು ತ-ತಪೋ-ಯಜ್ಞಾದಿಭ್ಯಶ್ಚೇತ್ಯೇವಂ ಶುಶ್ರುಮ ಶ್ರುತವಂತೋ ವಯಂ ಪೂರ್ವಾಚಾರ್ಯಾಣಾಂ ವಚನಮ್ | -ಕೇನ 1-3**

ಪರಬ್ರಹ್ಮವನ್ನು ಈ ರೀತಿಯಾಗಿ ಪರಂಪರೆಯಿಂದ ಬಂದ ಆಚಾರ್ಯರ ಉಪದೇಶದಿಂದಲೇ ತಿಳಿದುಕೊಳ್ಳಬಹುದು ತರ್ಕದಿಂದಲ್ಲ, ಉಪನ್ಯಾಸಶ್ರವಣ, ಸ್ವಬುದ್ಧಿಶಕ್ತಿ, ಬಹುಗ್ರಂಥಗಳ ಅಧ್ಯಯನ, ತಪಸ್ಸು, ಯಜ್ಞ, ಇತ್ಯಾದಿಗಳಿಂದಲೂ ಅಲ್ಲ-ಎಂದು ಪೂರ್ವಾಚಾರ್ಯರು ಹೇಳಿದ್ದನ್ನು ನಾವು ಕೇಳಿದ್ದೇವೆ.

ಬ್ರಹ್ಮವು ವಿದಿತವೂ ಅಲ್ಲ ಅವಿದಿತವೂ ಅಲ್ಲ, ಇಂದ್ರಿಯಗಳು ಅದನ್ನು ಮುಟ್ಟಲಾರವು, ಬ್ರಹ್ಮವನ್ನು ತಿಳಿದಿದ್ದೇನೆ ಎಂದು ಹೇಳತಕ್ಕವನು

ಅದನ್ನು ತಿಳಿದಿಲ್ಲ-ಇತ್ಯಾದಿಯಾಗಿ ಶ್ರುತಿಯು ಹೇಳಿದೆ. ಆದ್ದರಿಂದ ತರ್ಕಾದಿಶಾಸ್ತ್ರಗಳು ಆತ್ಮನ ವಿಷಯದಲ್ಲಿ ಮಿಥ್ಯಾದರ್ಶನಗಳು. ವೇದಾಂತವು ಮಾತ್ರ ಸತ್ಯದರ್ಶನ, ಗುರುವಿನಿಂದಲೇ ಬ್ರಹ್ಮವನ್ನರಿಯಬಹುದು.

## 34

**ಪರಿಪೂರ್ಣಶಕ್ತಿಕಂ ತು ಬ್ರಹ್ಮ | ನ ತಸ್ಯ ಅನ್ಯೇನ ಕೇನಚಿತ್ ಪೂರ್ಣತಾ ಸಂಪಾದಯಿತವ್ಯಾ | - ಬ್ರ. ಸೂ. 2-1-24**

ಬ್ರಹ್ಮವು ಪರಿಪೂರ್ಣ ಶಕ್ತಿಯುಳ್ಳದ್ದು. ಅದಕ್ಕೆ ಇನ್ನು ಯಾವುದೂ ಪೂರ್ಣತೆಯನ್ನು ತಂದುಕೊಡಬೇಕಾಗಿಲ್ಲ.



# ೨ ತರ್ಕ - ಅನುಮಾನ

ವೇದಾಂತಿಗಳು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿ-ಎಂಬ ಆರು ಪ್ರಮಾಣಗಳನ್ನು ಒಪ್ಪಿದ್ದಾರೆ. ಇವುಗಳಲ್ಲಿ ಶಬ್ದವೆಂದರೆ ವೇದ ಮತ್ತು ವೇದಾನುಸಾರಿಗಳಾದ ಸ್ಮೃತ್ಯಾದಿ ಗ್ರಂಥಗಳು. ಆತ್ಮನ ವಿಷಯವಾಗಿ ಶಬ್ದವೇ ಮುಖ್ಯವಾದ ಪ್ರಮಾಣ. ಆತ್ಮನು ಇಂದ್ರಿಯಗಳಿಗೆ ಪ್ರತ್ಯಕ್ಷನಲ್ಲ. ಉಳಿದ ಅನುಮಾನಾದಿಗಳಿಂದ ಆತ್ಮಸ್ವರೂಪವನ್ನು ನಿಶ್ಚಯಿಸಲಾಗುವುದಿಲ್ಲ. ಆದರೆ ಶ್ರುತಿಗೆ ಅನುಕೂಲವಾದ ತರ್ಕವನ್ನು ಸ್ವೀಕರಿಸಬಹುದು. ಶ್ರುತಿ ವಿರುದ್ಧವಾದ ತರ್ಕವು ಶುಷ್ಕ ತರ್ಕವೆನಿಸುತ್ತದೆ. ಪ್ರತ್ಯಕ್ಷ, ಶಬ್ದ ಪ್ರಮಾಣ-ಇವೆರಡನ್ನು ಬಿಟ್ಟು ಉಳಿದವುಗಳಿಂದ ನಿಶ್ಚಯಿಸಲು ಹೋಗತಕ್ಕವರನ್ನು ತಾರ್ಕಿಕರೆಂದೂ ಅವರ ಕಲ್ಪನೆಗಳು ಪ್ರಾಮಾಣಿಕವಲ್ಲವೆಂದೂ ಆಚಾರ್ಯರ ನಿಲುವು. ಆದರೆ ವೇದಾನುಗುಣವಾಗಿ ಉಳಿದ ಪ್ರಮಾಣಗಳನ್ನು ಬಳಸಿ ನಿಶ್ಚಯಿಸಲು ಬರುತ್ತದೆ. ಅದಕ್ಕೆ ಮನನವೆಂದು ಹೆಸರು. ಅಲ್ಲದೆ ತರ್ಕಕ್ಕೆ ನಿಲುಗಡೆ ಇಲ್ಲ.

ಯತ್ನೇನಾನುಮಿತೋಽಪ್ಯರ್ಥಃ ಕುಶಲೈರನುಮಾತೃಭಿಃ |
ಅಭಿಯುಕ್ತತರೈರನ್ಯೈರನ್ಯಥೈವೋಪಪಾದ್ಯತೇ ||

– ವಾಕ್ಯಪದೀಯ -1-34

"ಅನುಮಾನದಿಂದ ನಿಶ್ಚಯಿಸುವುದರಲ್ಲಿ ಕುಶಲರಾದವರು ಪ್ರಯತ್ನಪೂರ್ವಕವಾಗಿ ನಿರ್ಣಯ ಮಾಡಿದ್ದನ್ನು, ಇನ್ನೂ ಅಧಿಕ ಬುದ್ಧಿಶಾಲಿಗಳು ತಳ್ಳಿಹಾಕಿ ಬೇರೆ ವಿಧದಲ್ಲಿ ನಿರ್ಣಯಿಸಿಬಿಡುತ್ತಾರೆ". ಹೇಗೆಂದರೆ, ಪರಮಾಣುಗಳಿಂದ ಪೃಥಿವೀ ಮೊದಲಾದವು ಹುಟ್ಟುತ್ತವೆಯೆಂದು ತಾರ್ಕಿಕರು ಹೇಳುತ್ತಾರೆ. ಪರಮಾಣುಗಳಿಗೆ ಸಂಯೋಗವಾಗಲಾರದಾದ್ದರಿಂದ ಪ್ರಕೃತಿಯು ಕಾರಣವೆಂದು ಸಾಂಖ್ಯರ ನಿರ್ಣಯ. ಆಕಾಶವು ವಿಭುವೆಂದು ತಾರ್ಕಿತರ ಹೇಳಿಕೆ. ವಿಭುವೆಂದರೆ ಅಪರಿಚ್ಛಿನ್ನವಾಗಿರಬೇಕು. ಪೃಥಿವ್ಯಾದಿಗಳಿಂದ ಅದು ಪರಿಚ್ಛಿನ್ನವಾಗುತ್ತದೆಯಾದ್ದರಿಂದ ವಿಭುವಲ್ಲವೆಂದು ವೇದಾಂತಿಗಳ ನಿರ್ಣಯ.

35

ಅಯಮೇವ ತರ್ಕಸ್ಯಾಲಂಕಾರೋ ಯದಪ್ರತಿಷ್ಠಿತತ್ವಂ ನಾಮ |

– ಸೂ. ಭಾ. 2-1-11

ತರ್ಕಕ್ಕೆ ನಿಲುಗಡೆ ಇಲ್ಲವೆಂಬುದೇ ತರ್ಕಕ್ಕೆ ಭೂಷಣ.

ಆದ್ದರಿಂದ ಶುಷ್ಕತರ್ಕವನ್ನು ಪರಿತ್ಯಜಿಸಿ ಸರಿಯಾದ ಶಾಸ್ತ್ರಸಂಮತವಾದ (ಅನುಭವಕ್ಕೆ ಸಂಮತವಾದ) ತರ್ಕದಿಂದ ಸಿದ್ಧಾಂತವನ್ನು ಪೋಷಿಸಬಹುದು.

36

**ತಾರ್ಕಿಕೋ ಹ್ಯನಾಗಮಜ್ಞಃ ಸ್ವಬುದ್ಧಿಪರಿಕಲ್ಪಿತಂ ಯತ್ಕಿಂಚಿದೇವ ಕಥಯತಿ| - ಕಠ. 1-2-9**

ತಾರ್ಕಿಕನು ವೇದಜ್ಞನಲ್ಲ. ಅವನು ತನ್ನ ಬುದ್ಧಿಯಿಂದ ಪರಿಕಲ್ಪಿಸಿದ ಏನನ್ನಾದರೂ ಹೇಳಿಬಿಡುತ್ತಾನೆ.

37

**ಅತಃ ಸದಾತ್ಮನಾ ಸರ್ವವ್ಯವಹಾರಾಣಾಂ ಸರ್ವವಿಕಾರಾಣಾಂ ಚ ಸತ್ಯತ್ವಂ ಸತೋಽನ್ಯತ್ವೇ ಚಾನೃತತ್ವಮಿತಿ ನ ಕಶ್ಚಿದ್ದೋಷಸ್ತಾರ್ಕಿಕೈರಿಹಾನುವಕ್ತುಂ ಶಕ್ಯಃ || -ಛಾಂ. 6-3-3**

ಸರ್ವವ್ಯವಹಾರಗಳೂ ಸರ್ವವಿಕಾರಗಳೂ ಸದ್ರೂಪದಿಂದ ಸತ್ಯವಾದವು ಸತ್ತಿಗಿಂತ ಭಿನ್ನವಾದ ರೂಪದಲ್ಲಿ ಅನೃತವಾದವು. ಆದ್ದರಿಂದ ತಾರ್ಕಿಕರು ಯಾವುದೇ ಒಂದು ದೋಷವನ್ನು ಈ ಸಿದ್ಧಾಂತದಲ್ಲಿ ಹೇಳಲು ಶಕ್ಯವಿಲ್ಲ.

ಪ್ರಪಂಚವು ಮಿಥ್ಯೆಯಾದರೆ ಬೌದ್ಧಮತ ಪ್ರವೇಶವಾಗುತ್ತದೆ. ಸತ್ಯವಾದರೆ ಅದ್ವೈತಕ್ಕೆ ಭಂಗ ಬರುತ್ತದೆ ಎಂಬ ತಾರ್ಕಿತರ ಹೇಳಿಕೆ ಸರಿಯಲ್ಲ. ಸದ್‌ರೂಪವಾದ ಬ್ರಹ್ಮವನ್ನು ಅಂಗೀಕರಿಸಿರುವುದರಿಂದ ಬೌದ್ಧಮತ ಪ್ರವೇಶವಾಗುವುದಿಲ್ಲ. ಪ್ರಪಂಚವು ಸತ್ಯವಲ್ಲವಾದ್ದರಿಂದ ಅದ್ವೈತಕ್ಕೆ ಭಂಗವೂ ಇಲ್ಲ.

38

**ನ ಚ ಪ್ರಮಾಣಾಂತರವಿರುದ್ಧವಿಷಯೇ ಶ್ರುತೇಃ ಪ್ರಾಮಾಣ್ಯಂ ಕಲ್ಪ್ಯತೇ ಯಥಾ ಶೀತೋಽಗ್ನಿಃ ಕ್ಲೇದಯತೀತಿ| - ಬೃಹ. 3-3-1**

"ಬೆಂಕಿ ತಣ್ಣಗಿರುತ್ತದೆ. ಅದು ಒದ್ದೆ ಮಾಡುತ್ತದೆ" ಎಂದೇನಾದರೂ ಶ್ರುತಿಯೂ

ಹೇಳುವುದಾದರೆ, ಅದು ಪ್ರತ್ಯಾಕ್ಷಾದಿ ಪ್ರಮಾಣಾಂತರ ವಿರುದ್ಧವಾದ್ದರಿಂದ ಪ್ರಮಾಣ ವಾಗುವುದಿಲ್ಲ. (ಅಂತಹ ಸಂದರ್ಭದಲ್ಲಿ ಶ್ರುತಿವಾಕ್ಯಕ್ಕೂ ಬೇರೆ ಅರ್ಥವನ್ನು ಹೇಳಬೇಕು)

'ಅಪಾಮ ಸೋಮಮ್, ಅಮೃತಾ ಅಭೂಮ' ಎಂಬ ವೇದವಾಕ್ಯ ಉಂಟು. 'ಸೋಮಪಾನ ಮಾಡಿದ್ದರಿಂದ ನಾವು ಮರಣರಹಿತವಾದೆವು' ಎಂದು ಅದರ ಅರ್ಥ. ಇದು 'ಯತ್ ಕೃತಕಂ ತದನಿತ್ಯಂ' ಎಂಬ ಅನುಮಾನಪ್ರಮಾಣಕ್ಕೆ ವಿರುದ್ಧವಾದದ್ದು. 'ನ ಹ್ಯಕೃತಃ ಕೃತೇನ' ಎಂಬ ಯುಕ್ತಿಪೂರ್ವಕವಾದ ಇನ್ನೊಂದು ಶ್ರುತಿವಾಕ್ಯಕ್ಕೂ ವಿರುದ್ಧವಾಗುತ್ತದೆ. ಆದ್ದರಿಂದ 'ಅಮೃತಾ ಅಭೂಮ' ಎನ್ನುವುದು ಅರ್ಥವಾದ. ಬಹಳ ಕಾಲ ಮರಣರಹಿತರಾದೆವು ಎಂದು ಮಾತ್ರ ಅದರ ಅರ್ಥ.

**39**

**ಯೇನೈವ ಹಿ ವಿಶೇಷೇಣ ಪೃಥಿವ್ಯಾದಿಭ್ಯೋ ವ್ಯತಿರಿಚ್ಯಮಾನಂ ನಭಃ ಸ್ವರೂಪಮಿದಾನೀಮಧ್ಯವಸೀಯತೇ, ಸ ಏವ ವಿಶೇಷಃ ಪ್ರಾಗುತ್ಪತ್ತೇರ್ನಾಸೀದಿತಿ ಗಮ್ಯತೇ|**

**- ಸೂ. ಭಾ. 2-3-7**

ಯಾವ ವಿಶೇಷದಿಂದ ಆಕಾಶವು ಪೃಥಿವ್ಯಾದಿಗಳಿಗಿಂತ ಭಿನ್ನವಾಗಿ ಈಗ ಸ್ವರೂಪವುಳ್ಳದ್ದಾಗಿದೆಯೆಂದು ನಿರ್ಣಯಸಲ್ಪಡುತ್ತದೆಯೋ ಅದೇ ವಿಶೇಷವು ಆಕಾಶದ ಉತ್ಪತ್ತಿಗೆ ಪೂರ್ವದಲ್ಲಿ ಇರಲಿಲ್ಲ ಎಂದು ಗೊತ್ತುಮಾಡಬಹುದು.

ಅವಕಾಶ ಪ್ರದಾನ ಮತ್ತು ಶಬ್ದಾಶ್ರಯತ್ವ ಇದು ಆಕಾಶದ ವಿಶೇಷಧರ್ಮ. ಆಕಾಶ ಹುಟ್ಟುವುದಕ್ಕೆ ಮೊದಲು ಈ ವಿಶೇಷ ಇರಲಿಲ್ಲವೆಂದು ಅಭಿಪ್ರಾಯ. ವೇದಾಂತ ಸಿದ್ಧಾಂತದಲ್ಲಿ ಆಕಾಶ ಹುಟ್ಟುತ್ತದೆ ಮತ್ತು ನಾಶವಾಗುತ್ತದೆ. ಅದು ಅನಿತ್ಯ.

**40**

**ಆಕಾಶಾದೀನಾಮಪಿ ವಿಭುತ್ವಂ ಬ್ರಹ್ಮವಾದಿನೋಽಸಿದ್ಧಂ ಕಾರ್ಯತ್ವಾಭ್ಯುಪಗಮಾತ್ |**

**- ಸೂ. ಭಾ. 2-3-53**

ಆಕಾಶಾದಿಗಳು ವಿಭುಗಳೆಂಬುದೂ ಬ್ರಹ್ಮವಾದಿಯ ಮತದಲ್ಲಿ ಸಿದ್ಧವಲ್ಲ. ಏಕೆಂದರೆ ಅವು ಜನ್ಮವಾದವುಗಳೆಂದು ಬ್ರಹ್ಮವಾದಿಯು ಒಪ್ಪಿರುತ್ತಾನೆ.

ಜನ್ಯ (ಕಾರ್ಯ)ವಾದದ್ದು ಪರಿಚ್ಛಿನ್ನವಾಗಿರುತ್ತದೆ. ಪರಿಚ್ಛಿನ್ನವಾದದ್ದು ವಿಭುವಲ್ಲ.

41

**ನ ಹಿ ಕಾರಣವ್ಯತಿರೇಕೇಣ ಕಾರ್ಯಂ ನಾಮ ವಸ್ತುತೋಽಸ್ತಿ |**

**-ತೈತ್ತಿ. ಆನಂದ-1**

ಕಾರಣಕ್ಕಿಂತ ಬೇರೆಯಾಗಿ ಕಾರ್ಯ ಎಂಬುದು ನಿಜವಾಗಿ ಇಲ್ಲ.

ಇಲ್ಲಿ ಕಾರಣವೆಂದರೆ 'ಉಪಾದಾನ ಕಾರಣ'. ಮಣ್ಣಿಗಿಂತ ಪ್ರತ್ಯೇಕವಾಗಿ ಗಡಿಗೆ ಎಂಬುದಿಲ್ಲ.

42

**ನ ಚ ಅನುಮಾನಂ ಪ್ರತ್ಯಕ್ಷ ವಿರೋಧೇ ಪ್ರಾಮಾಣ್ಯಂ ಲಭತೇ |**

**-ಬೃಹ. 2-1-20**

ಪ್ರತ್ಯಕ್ಷ ಪ್ರಮಾಣಕ್ಕೆ ವಿರುದ್ಧವಾದಾಗ ಅನುಮಾನಕ್ಕೆ ಪ್ರಾಮಾಣ್ಯ ಸಲ್ಲುವುದಿಲ್ಲ. ಅನುಮಾನಕ್ಕಿಂತ ಪ್ರತ್ಯಕ್ಷ ಪ್ರಮಾಣವು ಪ್ರಬಲವಾದದ್ದು.

43

**ಪ್ರತ್ಯಕ್ಷಂ ಶ್ರುತಿಃ, ಪ್ರಾಮಾಣ್ಯಂ ಪ್ರತ್ಯನಪೇಕ್ಷತ್ವಾತ್| ಅನುಮಾನಂ ಸ್ಮೃತಿಃ | ಪ್ರಾಮಾಣ್ಯಂ ಪ್ರತಿ ಸಾಪೇಕ್ಷತ್ವಾತ್ |**

**- ಸೂ. ಭಾ. 1-3-28**

ಪ್ರತ್ಯಕ್ಷವೆಂದರೆ ಶ್ರುತಿ. ಏಕೆಂದರೆ ತನ್ನ ಪ್ರಾಮಾಣ್ಯಕ್ಕಾಗಿ ಇನ್ನೊಂದು ಪ್ರಮಾಣವನ್ನು ಅಪೇಕ್ಷಿಸುವುದಿಲ್ಲ. ಅನುಮಾನವೆಂದರೆ ಸ್ಮೃತಿ. ಏಕೆಂದರೆ, ಅದು ತನ್ನ ಪ್ರಾಮಾಣ್ಯಕ್ಕಾಗಿ ಇನ್ನೊಂದು ಪ್ರಮಾಣವನ್ನು (ಶ್ರುತಿಯನ್ನು) ಅಪೇಕ್ಷಿಸುತ್ತದೆ.

ಈ ಬ್ರಹ್ಮ ಸೂತ್ರದಲ್ಲಿಯೇ ಇರುವ ಎರಡು ಶಬ್ದಗಳಿಗೆ ಮೇಲ್ಕಂಡಂತೆ ಅರ್ಥ ಮಾಡಲಾಗಿದೆ. ಚಾಕ್ಷುಷವಾದ ಘಟಪ್ರತ್ಯಕ್ಷವು ಸ್ವತಃ ಪ್ರಮಾಣ. 'ಪರ್ವತೋ ವಹ್ನಿಮಾನ್, ಧೂಮಾತ್' ಎಂಬಲ್ಲಿ ಅನುಮಾನವು ಪ್ರತ್ಯಕ್ಷಸಾಪೇಕ್ಷವಾದದ್ದು. ಧೂಮಪ್ರತ್ಯಕ್ಷವಾಗದೆ ಈ ಅನುಮಾನ ಹೊರಡುವುದಿಲ್ಲ. ಶ್ರುತಿಯು ಸ್ವತಃ ಪ್ರಮಾಣ. ಸ್ಮೃತಿಯು ಪ್ರಮಾಣವಾಗಬೇಕಾದರೆ ಶ್ರುತಿಯ ಬೆಂಬಲ ಬೇಕು.

**44**

**ನ ಹಿ ದೃಷ್ಟೇ ಅನುಪಪನ್ನಂ ನಾಮ, ದೃಷ್ಟತ್ವಾದೇವ |**

**-ಸೂ. ಭಾ. 4-1-2**

ಪ್ರತ್ಯಕ್ಷವಾಗಿ ಒಂದು ವಸ್ತುವನ್ನು ಕಂಡಮೇಲೆ ಅದು ಉಪಪನ್ನವಲ್ಲವೆಂದು ಸಾಧಿಸಲಾಗುವುದಿಲ್ಲ. ಏಕೆಂದರೆ ಸಾಕ್ಷಾತ್ ಕಂಡಿರುತ್ತೇವೆ.

**45**

**ನಹಿ ಪ್ರತ್ಯಕ್ಷಮನುಮಾನೇನ ಬಾಧಿತುಂ ಶಕ್ಯತೇ |** **-ಬೃಹ. 4-3-6**

ಪ್ರತ್ಯಕ್ಷವನ್ನು ಅನುಮಾನದಿಂದ ಬಾಧಿಸಲು ಸಾಧ್ಯವಿಲ್ಲ.

ಅನುಮಾನಕ್ಕಿಂತ ಪ್ರತ್ಯಕ್ಷ ಪ್ರಮಾಣವು ಪ್ರಬಲವಾದದ್ದು.

**46**

**ಸ್ವವಿಷಯಶೂರಾಣಿ ಹಿ ಪ್ರಮಾಣಾನಿ ಶ್ರೋತ್ರಾದಿವತ್ |**

**-ಬೃಹ. 2-1-20**

ಪ್ರಮಾಣಗಳು ತಮ್ಮ ತಮ್ಮ ವಿಷಯಗಳನ್ನು ತೋರಿಸಿಕೊಡುವುದರಲ್ಲಿ ಶ್ರೋತ್ರಾದಿ ಇಂದ್ರಿಯಗಳಂತೆ ಸಮರ್ಥವಾಗಿರುತ್ತವೆ.

**47**

**ಸತ್ಯಾಂ ಚ ಗತೌ ಮುಖ್ಯ ಏವಾರ್ಥ ಆಶ್ರಯಿತವ್ಯೋ ನ ಭಾಕ್ತಃ |**

**- ಸೂ. ಭಾ. 3-3-24**

ಗತಿಯಿದ್ದಾಗ ಮುಖ್ಯಾರ್ಥವನ್ನು ಆಶ್ರಯಿಸಬೇಕೇ ಹೊರತು ಗೌಣಾರ್ಥವನ್ನಲ್ಲ.

ಮುಖ್ಯಾರ್ಥವು ಬಾಧಿತವಾದಾಗ ಮಾತ್ರ ಗೌಣಾರ್ಥವನ್ನು ಸ್ವೀಕರಿಸಬೇಕು. 'ಸಿಂಹೋ ಮಾಣವಕಃ' ಎಂದಾಗ ಮಾಣವಕನು ಸಿಂಹಸದೃಶನೆಂಬ ಗೌಣಾರ್ಥವನ್ನು ಹೇಳಬೇಕು. 'ಸಿಂಹೋ ಗರ್ಜತಿ' ಎಂದಾಗ ಮುಖ್ಯಾರ್ಥವನ್ನು ಗ್ರಹಿಸಬೇಕು.

48

ತಾನ್ಯಪಿ ತರ್ಕೋಪಪತ್ತಿಭ್ಯಾಂ ತತ್ತ್ವಜ್ಞಾನಾಯೋಪಕುರ್ವಂತೀತಿ ಚೇದುಪಕುರ್ವಂತು ನಾಮ | ತತ್ತ್ವಜ್ಞಾನಂ ತು ವೇದಾಂತವಾಕ್ಯೇಭ್ಯ ಏವ ಭವತಿ | "ನಾವೇದವಿನ್ಮನುತೇ ತಂ ಬೃಹಂತಮ್" (ತೈ. ಬ್ರಾ. 3-12-9-7) "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ" (ಬೃಹ. 3-9-26) ಇತ್ಯೇವಮಾದಿಶ್ರುತಿಭ್ಯಃ ||

-ಸೂ. ಭಾ. 2-1-4

ಆ ಕಪಿಲಾದಿ ಪ್ರಣೀತ ಗ್ರಂಥಗಳೂ ತರ್ಕ ಮತ್ತು ಉಪಪತ್ತಿಗಳಿಂದ ತತ್ತ್ವಜ್ಞಾನಕ್ಕೆ ಉಪಕರಿಸುತ್ತವೆಯೆಂದಾದರೆ ಆಗಲಿ. ತತ್ತ್ವಜ್ಞಾನವು ಮಾತ್ರ ವೇದಾಂತ ವಾಕ್ಯಗಳಿಂದ ಮಾತ್ರ ಆಗುತ್ತದೆ. "ವೇದವಿದನಲ್ಲದವನು ಆ ಬೃಹತ್ತಾದ ಆತ್ಮನನ್ನು ತಿಳಿಯಲಾರ", "ಉಪನಿಷನ್ಮಾತ್ರಗಮ್ಯನಾದ ಆ ಪುರುಷನ ವಿಷಯವಾಗಿ ಪ್ರಶ್ನೆ ಮಾಡುತ್ತೇನೆ" ಇತ್ಯಾದಿ ಶ್ರುತಿಗಳಿಂದ ಆ ರೀತಿ ಒಪ್ಪಬೇಕಾಗುತ್ತದೆ.

49

ನಾನೇನ ಮಿಷೇಣ ಶುಷ್ಕತರ್ಕಸ್ಯಾತ್ರಾತ್ಮಲಾಭಃ ಸಂಭವತಿ| ಶ್ರುತ್ಯನುಗೃಹೀತ ಏವ ಹ್ಯತ್ರ ತರ್ಕೋऽನುಭವಾಂಗತ್ವೇನ ಆಶ್ರೀಯತೇ|

- ಸೂ. ಭಾ. 2-1-6

ಈ ನೆವದಿಂದ (ಮನನವನ್ನು ವಿಧಿಸಿದೆಯೆಂಬ ನೆಪದಿಂದ) ಶುಷ್ಕತರ್ಕಕ್ಕೆ ಇಲ್ಲಿ ಪ್ರವೇಶವು ಸಂಭವಿಸುವುದಿಲ್ಲ. ಶ್ರುತ್ಯನುಗೃಹೀತವಾದ ತರ್ಕವನ್ನು ಮಾತ್ರ ಇಲ್ಲಿ ಅನುಭವಾಂಗವೆಂದು ಆಶ್ರಯಿಸಲಾಗಿದೆ.

'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬ ಶ್ರುತಿಯಲ್ಲಿ ಮನನವನ್ನು ವಿಧಿಸಲಾಗಿದೆ. ಮನನವೆಂದರೆ ತರ್ಕದಿಂದ ಮಾಡುವ ವಿಚಾರ. ಶ್ರುತ್ಯನುಗೃಹೀತ ತರ್ಕ = ಶ್ರುತಿಯು ತತ್ತ್ವವನ್ನು ತಿಳಿಸಿದ ಮೇಲೆ ಅದರ ದೃಢತೆಗಾಗಿ ಮಾಡುವ ಅನುಕೂಲ ತರ್ಕ. ಶುಷ್ಕತರ್ಕ = ಶ್ರುತಿ ವಿರುದ್ಧವಾದ ತರ್ಕ.

50

ಅನುಮಾನಮಪಿ ವೇದಾಂತವಾಕ್ಯಾವಿರೋಧಿ ಪ್ರಮಾಣಂ ಭವನ್ನ ನಿವಾರ್ಯತೇ| ಶ್ರುತ್ಯೈವ ಚ ಸಹಾಯತ್ವೇನ ತರ್ಕಸ್ಯಾಭ್ಯುಪೇತತ್ವಾತ್| ತಥಾಹಿ 'ಶ್ರೋತವ್ಯೋ ಮಂತವ್ಯಃ

**' (ಬೃಹ. 2-4-5) ಇತಿ ಶ್ರುತಿಃ | 'ಆಚಾರ್ಯವಾನ್ ಪುರುಷೋ ವೇದ' (ಛಾಂ. 6-14-2) ಇತಿ ಚ ಪುರುಷಬುದ್ಧಿಸಾಹಾಯ್ಯ. ಮಾತ್ಮನೋ ದರ್ಶಯತಿ | - ಸೂ. ಭಾ. 1-1-2**

ಉಪನಿಷದ್ವಾಕ್ಯಗಳಿಗೆ ವಿರೋಧವಾಗದ ಅನುಮಾನವೂ ನಮಗೆ ಪ್ರಮಾಣವಾಗುತ್ತದೆ. ಅದನ್ನೇನೂ ತಪ್ಪಿಸಲಾಗುವುದಿಲ್ಲ. ಬ್ರಹ್ಮವನ್ನು ಅರಿಯಲು ಶ್ರುತಿಯೇ ತರ್ಕದ ಸಹಾಯವನ್ನು ಒಪ್ಪಿಕೊಂಡಿದೆ. "ಶ್ರೋತವ್ಯೋ ಮಂತವ್ಯಃ" "ಆಚಾರ್ಯವಾನ್ ಪುರುಷೋ ವೇದ" ಇತ್ಯಾದಿ ಶ್ರುತಿಗಳು ಆತ್ಮದರ್ಶನಕ್ಕೆ ಮನುಷ್ಯಬುದ್ಧಿಯ ಸಹಾಯವನ್ನು ಒಪ್ಪಿಕೊಂಡಿದೆ.

**51**

**ನ ಧರ್ಮಜಿಜ್ಞಾಸಾಯಾಮಿವ ಶ್ರುತ್ಯಾದಯ ಏವ ಪ್ರಮಾಣಂ ಬ್ರಹ್ಮ ಜಿಜ್ಞಾಸಾಯಾಮ್ | ಕಿಂತು ಶ್ರುತ್ಯಾದಯೋಽನುಭವಾದಯಶ್ಚ ಯಥಾ ಸಂಭವಮಿಹ ಪ್ರಮಾಣಂ ಅನುಭವಾವಸಾನತ್ವಾದ್ಭೂತವಸ್ತುವಿಷಯತ್ವಾಚ್ಚ ಬ್ರಹ್ಮಜ್ಞಾನಸ್ಯ |**
**- ಸೂ. ಭಾ. 1-1-2**

ಧರ್ಮ ಜಿಜ್ಞಾಸೆಯಲ್ಲಿ ಶ್ರುತ್ಯಾದಿಗಳೇ ಹೇಗೆ ಪ್ರಮಾಣವೋ ಹಾಗೆ ಬ್ರಹ್ಮ ಜಿಜ್ಞಾಸೆಯಲ್ಲಿ ಅಷ್ಟೇ ಅಲ್ಲ. ಮತ್ತೇನೆಂದರೆ, ಇದರಲ್ಲಿ ಅನುಭವವೂ ಯಥಾಸಂಭವವಾಗಿ ಪ್ರಮಾಣವಾಗಿರುತ್ತದೆ. ಏಕೆಂದರೆ ಬ್ರಹ್ಮಜ್ಞಾನವು ಅನುಭವದಲ್ಲಿ ಪರ್ಯವಸಾನವಾಗತಕ್ಕದ್ದು ಮತ್ತು ಭೂತವಸ್ತುವೇ ಇದಕ್ಕೆ ವಿಷಯವಾಗಿರುತ್ತದೆ.

ಶ್ರುತ್ಯಾದಿಗಳು = ಶ್ರುತಿ, ಸ್ಮೃತಿ, ಪುರಾಣಾದಿಗಳು. ಅನುಭವಾದಿಗಳು = ಅನುಭವ, ತರ್ಕ ಮೊದಲಾದವು. ಭೂತವಸ್ತು = ಇರತಕ್ಕ ವಸ್ತು. ಧರ್ಮವು ಇರತಕ್ಕದ್ದಲ್ಲ. ಕರ್ಮದಿಂದ ಮುಂದೆ ಹುಟ್ಟತಕ್ಕದ್ದು.

**52**

**ಶ್ರುತಿವಿರೋಧೇ ನ್ಯಾಯಾಭಾಸತ್ವೋಪಗಮಾತ್ |**

**-ಬೃಹ. 4-3-22**

ವೇದಕ್ಕೆ ವಿರುದ್ಧವಾದ ಹೇತುವನ್ನು ಹೇತ್ವಾಭಾಸವೆಂದು ಅಂಗೀಕರಿಸಬೇಕು.

ವೇದವು ಪರಮಪ್ರಮಾಣವಾದ್ದರಿಂದ ಅದಕ್ಕೆ ವಿರುದ್ಧವಾಗಿ ಹೇತುವನ್ನು ಕೊಟ್ಟು ವಾದಿಸುವುದು ಯುಕ್ತವಲ್ಲ.

**53**

**ಅಯಂ ತು ಪರಮಾಣುಕಾರಣವಾದೋ ನ ಕೈಶ್ಚಿದಪಿ ಶಿಷ್ಟೈಃ ಕೇನ ಚಿದಪ್ಯಂಶೇನ ಪರಿಗೃಹೀತ ಇತ್ಯತ್ಯಂತಮೇವಾನಾದರಣೀಯೋ ವೇದವಾದಿಭಿಃ**

**- ಸೂ. ಭಾ. 2-3-17**

ಈ ಪರಮಾಣು ಕಾರಣವಾದವನ್ನು (ಮನು-ವ್ಯಾಸಾದಿ) ಶಿಷ್ಟರು ಏಕಾಂಶದಲ್ಲಿಯೂ ಒಪ್ಪಿಲ್ಲ. ಆದ್ದರಿಂದ ಈ ವಾದವು ವೇದಾನುಸಾರಿಗಳಿಗೆ ಅತ್ಯಂತ ತಿರಸ್ಕಾರಕ್ಕೆ ಅರ್ಹವಾದದ್ದು.

ವೈಶೇಷಿಕರೂ ನೈಯಾಯಿಕರೂ ಪರಮಾಣುಗಳಿಂದ ಪೃಥ್ವೀ ಮೊದಲಾದವು ಹುಟ್ಟಿವೆಯನ್ನುತ್ತಾರೆ. ಈ ವಾದವು ಪ್ರಾಮಾಣಿಕವಲ್ಲ.

**54**

**ನ ಹಿ ಆತ್ಮನಃ ಸ್ವಾತ್ಮನಿ ಪ್ರವರ್ತಕಪ್ರಮಾಣಾಪೇಕ್ಷಾ| ಆತ್ಮತ್ವಾದೇವ | ತದನ್ತತ್ವಾಚ್ಚ ಸರ್ವಪ್ರಮಾಣಾನಾಂ ಪ್ರಮಾಣತ್ವಸ್ಯ | ಗೀತಾ 2-69**

ಆತ್ಮನಿಗೆ ತನ್ನ ಆತ್ಮನ ವಿಷಯದಲ್ಲಿ ಪ್ರವರ್ತಕವಾದ ಪ್ರಮಾಣದ ಅಪೇಕ್ಷೆಯಿಲ್ಲ. ಏಕೆಂದರೆ, ಆತ್ಮನು ಪ್ರಮಾತನ ಸ್ವರೂಪವೇ ಆಗಿರುತ್ತಾನೆ.

ಸರ್ವಪ್ರಮಾಣಗಳೂ ಪ್ರಮಾಣವೆನಿಸಿರುವುದು ಆತ್ಮಸ್ವರೂಪವನ್ನು ಅರಿತುಕೊಳ್ಳುವವರೆಗೆ ಮಾತ್ರ.

ತನ್ನ ಸ್ವರೂಪವು ಅತ್ಯಂತ ಪ್ರಸಿದ್ಧವಾದ್ದರಿಂದ ಅದನ್ನರಿತುಕೊಳ್ಳಲು ಪ್ರವರ್ತಕವಾದ ವಿಧಿಯು ಬೇಕಿಲ್ಲ. ಏಕೆಂದರೆ ಆತ್ಮಜ್ಞಾನವು ವಿಧಿ ಸಾಧ್ಯವಲ್ಲ. ಆತ್ಮವು ನಿಷ್ಪಾದ್ಯವೂ ಅಲ್ಲ. 'ಆತ್ಮಾವಾ ಅರೇ ದ್ರಷ್ಟವ್ಯಃ' ಇತ್ಯಾದಿ ಶ್ರುತಿ ವಾಕ್ಯಗಳು ಅಜ್ಞಾನ ನಿವೃತ್ತಿಗಾಗಿ ಯತ್ನಿಸಬೇಕೆಂದು ಬೋಧಿಸುತ್ತವೆ. ಆತ್ಮಜ್ಞಾನವಾದ ಮೇಲೆ ಎಲ್ಲ ವ್ಯವಹಾರಗಳೂ ನಿಂತುಹೋಗುವುದರಿಂದ ವ್ಯವಹಾರ ನಿಯಾಮಕವಾದ ವಿಧಿಯು ಜ್ಞಾನಿಗೆ ಬೇಕಿಲ್ಲ.



# ೩ ಶಾಸ್ತ್ರ

**ಪ್ರವೃತ್ತಿರ್ವಾ ನಿವೃತ್ತಿರ್ವಾ ನಿತ್ಯೇನ ಕೃತಕೇನ ವಾ |**
**ಪುಂಸಾಂ ಯೇನೋಪದಿಶ್ಯೇತ ತಚ್ಛಾಸ್ತ್ರಮಭಿಧೀಯತೇ ||**

-ಎಂದು ಅಭಿಯುಕ್ತ ವಚನವಿದೆ. "ನಿತ್ಯವಾದ ಗ್ರಂಥದಿಂದಲೋ ಅಥವಾ ಪುರುಷ ನಿರ್ಮಿತವಾದ ಗ್ರಂಥದಿಂದಲೋ ಜನರಿಗೆ ಪ್ರವೃತ್ತಿಯಾಗಲಿ ನಿವೃತ್ತಿಯಾಗಲಿ ಉಪದಿಷ್ಟವಾದಲ್ಲಿ ಆ ಗ್ರಂಥಕ್ಕೆ ಶಾಸ್ತ್ರವೆಂದು ಹೆಸರು." ನಿತ್ಯವಾದ ಗ್ರಂಥವೆಂದರೆ ವೇದೋಪನಿಷತ್ತುಗಳು. ಕೃತಕವೆಂದರೆ ಮನುಸ್ಮೃತಿಯೇ ಮೊದಲಾದ ಮನುಷ್ಯ ನಿರ್ಮಿತ ಗ್ರಂಥಗಳು. ವೈದಿಕ ಸಂಪ್ರದಾಯದಲ್ಲಿ ವೇದವೇ ಮುಖ್ಯವಾದ ಶಾಸ್ತ್ರ. ವೇದಾನುಸಾರಿಯಾದ್ದರಿಂದ ಮನುಸ್ಮೃತಿ ಮೊದಲಾದದ್ದೂ ಶಾಸ್ತ್ರವೆನಿಸುತ್ತದೆ. ವಿಧಿಶಾಸ್ತ್ರವು ಪ್ರವೃತ್ತಿಯನ್ನೂ ನಿಷೇಧಶಾಸ್ತ್ರವು ನಿವೃತ್ತಿಯನ್ನೂ ಬೋಧಿಸುತ್ತವೆ. ಏವಂಚ ವಿಧಿನಿಷೇಧಾತ್ಮಕವಾದದ್ದು ಶಾಸ್ತ್ರವೆಂದು ಅಭಿಪ್ರಾಯ. "ಶಾಸನಾತ್ ಶಂಸನಾಚ್ಚಾಪಿ ಶಾಸ್ತ್ರಮಿತ್ಯಭಿಧೀಯತೇ" ಎಂದು ಇನ್ನೊಂದು ವಚನವಿದೆ. "ಶಾಸನ ಮಾಡುವುದರಿಂದಲೂ ಶಂಸನಮಾಡುವುದರಿಂದಲೂ ಶಾಸ್ತ್ರವೆನಿಸುತ್ತದೆ" ಎಂದು ಅದರ ಅರ್ಥ.

ಶಾಸ್ತ್ರವು ಕಾರಕವೆ ಅಥವಾ ಜ್ಞಾಪಕವೆ?-ಎಂಬ ಜಿಜ್ಞಾಸೆ ಇದೆ. ಕಾರಕವೆಂದರೆ ಕರ್ತನನ್ನು ಒಂದು ಕಾರ್ಯದಲ್ಲಿ ನಿಯೋಜಿಸಿ ಅದನ್ನು ಮಾಡುವಂತೆ ಪ್ರೇರಿಸುವುದು ಅಥವಾ ಅದನ್ನು ಮಾಡದಂತೆ ತಡೆಯುವುದು. ಜ್ಞಾಪಕವೆಂದರೆ ವಸ್ತುಸ್ಥಿತಿಯನ್ನು ಯಥಾರ್ಥವಾಗಿ ತಿಳಿಸಿಕೊಡುವುದು. ಅನಂತರ ಅದನ್ನು ಮಾಡುವುದಾಗಲಿ ಬಿಡುವುದಾಗಲಿ ಕರ್ತನಿಗೆ ಸೇರಿದ್ದು. ಅಥವಾ ವಸ್ತುತತ್ತ್ವವನ್ನು ತಿಳಿದು ತೃಪ್ತನಾಗುವುದೂ ಆಗಬಹುದು.

ಶಾಸ್ತ್ರವು ಜ್ಞಾಪಕವೇ ಹೊರತು ಕಾರಕವಲ್ಲ-ಎಂಬುದು ಆಚಾರ್ಯರ ಸಿದ್ಧಾಂತ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ಏಕಮೇವಾದ್ವಿತೀಯಂ ಬ್ರಹ್ಮ' ಮುಂತಾದ ಉಪನಿಷದ್ವಾಕ್ಯಗಳು ವಿಧಿನಿಷೇಧಗಳನ್ನು ಮಾಡುವುದಿಲ್ಲ. ಬ್ರಹ್ಮವಸ್ತುವಿನ ಯಥಾರ್ಥತೆಯನ್ನು. ತಿಳಿಸಿಕೊಡುತ್ತವೆ. ಇವು ಕೇವಲ ಜ್ಞಾಪಕಗಳಾದ್ದರಿಂದ ಶಾಸ್ತ್ರವೆನಿಸುತ್ತದೆ. ಉಳಿದ ಕರ್ಮವಿಷಯದಲ್ಲಿಯೂ ವಿಧಿನಿಷೇಧಗಳಂತೆ ತೋರುವ ವಾಕ್ಯಗಳು ಜ್ಞಾಪಕಗಳೇ. ಪ್ರವೃತ್ತಿ ಅಥವಾ ನಿವೃತ್ತಿ ಆಯಾ ಕರ್ತೃವಿನ ಇಚ್ಛೆಯಂತೆ ನಡೆಯುತ್ತದೆ. ಧರ್ಮಾಧರ್ಮಗಳ ಸ್ವರೂಪವನ್ನು ಶಾಸ್ತ್ರದಿಂದಲೇ ತಿಳಿಯಬೇಕು. ತರ್ಕದಿಂದ ಇವುಗಳ ವ್ಯವಸ್ಥೆ ಎಂದಿಗೂ ಸಾಧ್ಯವಿಲ್ಲ. ನಮಗೆ ಗೊತ್ತಿಲ್ಲದ್ದನ್ನು ತಿಳಿಸಿಕೊಡುವ ವಾಕ್ಯವೇ ಶಾಸ್ತ್ರ. ಅದು ಒಂದು ವಸ್ತುವಿನ ವಿಷಯದಲ್ಲಿರುವ ನಮ್ಮ ಅಜ್ಞಾನವನ್ನು ಹೋಗಲಾಡಿಸಿ ತಟಸ್ಥವಾಗುತ್ತದೆ.

ಶಾಸ್ತ್ರದಿಂದ ಯಾವ ಒಂದು ವಸ್ತುವಿನ ಸೃಷ್ಟಿಯೂ ಆಗುವುದಿಲ್ಲ. ವಸ್ತುವಿಗೆ ಸಂಬಂಧಿಸಿದ ಅಜ್ಞಾನವು ಮಾತ್ರ ಹೋಗುತ್ತದೆ. ರಾಗಾದಿದೋಷಗಳಿರತಕ್ಕವರು ಶಾಸ್ತ್ರವನ್ನು ಉಲ್ಲಂಘಿಸಿ ನಡೆಯುತ್ತಾರೆ. ಅಂತಹ ದೋಷವಿಲ್ಲದವರು ವಿಧಿವಾಕ್ಯವನ್ನು ಪಾಲಿಸುತ್ತಾರೆ. ನಿಷೇಧ ವಾಕ್ಯವನ್ನು ಮನ್ನಿಸುತ್ತಾರೆ. ಶಾಸ್ತ್ರೋಕ್ತವಾದದ್ದೆಲ್ಲವೂ ಕರ್ತವ್ಯವೇ. ಸಂಪ್ರದಾಯ ಪೂರ್ವಕವಾಗಿ ಗುರುವಿನಿಂದ ಶಾಸ್ತ್ರಾರ್ಥವನ್ನರಿತುಕೊಳ್ಳಬೇಕು. ಸ್ವಬುದ್ಧಿಯಿಂದ ಅರ್ಥಮಾಡುವುದು ತಪ್ಪು.

**55**

**ಜ್ಞಾಪಕಂ ಹಿ ಶಾಸ್ತ್ರಂ ನ ತು ಕಾರಕಮಿತಿ ಸ್ಥಿತಿಃ |** **-ಬೃಹ. 1-4-10**

ಶಾಸ್ತ್ರವು ಜ್ಞಾಪಕವೇ ಹೊರತು ಕಾರಕವಲ್ಲವೆಂಬುದು ವಸ್ತುಸ್ಥಿತಿಯಾಗಿರುತ್ತದೆ.

ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಗೊತ್ತಾಗದ ವಿಷಯವನ್ನು ಶಾಸ್ತ್ರವು ತಿಳಿಸಿ ಕೊಡುತ್ತದೆ. ಹೀಗೆ ಮಾಡಬೇಕು-ಎಂದು ಮಾಡಿಸುವುದು ಶಾಸ್ತ್ರದ ಕೆಲಸವಲ್ಲ. ಧರ್ಮಶಾಸ್ತ್ರವೂ ಸಹ ಹೀಗೆ ಆಚರಿಸಿದರೆ ಈ ಫಲ ಉಂಟು ಎಂದು ತಿಳಿಸಿಕೊಡುತ್ತದೆ. ಆಚರಿಸುವುದು ಮನುಷ್ಯನ ಇಚ್ಛೆಗೆ ಒಳಪಟ್ಟಿದ್ದು. ಹೀಗೆ ಆಚರಿಸಿದರೆ ಕೆಟ್ಟಫಲವಿದೆಯೆಂದು ನಿಷೇಧಶಾಸ್ತ್ರವು ತಿಳಿಸಿ ಸುಮ್ಮನಾಗುತ್ತದೆ.

**56**

**ಅಸಂಪ್ರದಾಯವಿತ್ ಸರ್ವಶಾಸ್ತ್ರವಿದಪಿ ಮೂರ್ಖವದೇವ ಉಪೇಕ್ಷಣೀಯಃ |**
**-ಗೀತಾ 13-2**

ಸಂಪ್ರದಾಯವನ್ನರಿಯದವನು ಸರ್ವಶಾಸ್ತ್ರಗಳನ್ನು ಬಲ್ಲವನಾಗಿದ್ದರೂ ಸಹ ಮೂರ್ಖನೆಂದು ಅವನನ್ನು ಉಪೇಕ್ಷಿಸಬೇಕು.

ಅನುಭವಿಗಳಾದ ಆಚಾರ್ಯರಿಂದ ಪಡೆದ ಶಿಕ್ಷಣಪದ್ಧತಿಯು ಸಂಪ್ರದಾಯವು. ಸ್ವಬುದ್ಧಿಬಲದಿಂದ ಅರ್ಥಾಂತರವನ್ನು ಕಲ್ಪಿಸುವುದು ಅಸಂಪ್ರದಾಯ. ವೇದಾಂತವು ಅನುಭವಶಾಸ್ತ್ರವಾದ್ದರಿಂದ ಸಂಪ್ರದಾಯಕ್ಕೆ ವಿಶೇಷವಾದ ಪ್ರಾಶಸ್ತ್ಯ ಉಂಟು.

**57**

**ಯಾ ಹಿ ಪುರಷಸ್ಯ ಪ್ರಕೃತಿಃ ಸಾ ರಾಗದ್ವೇಷಪುರಸ್ಸರೈವ ಸ್ವಕಾರ್ಯೇ ಪುರುಷಂ**

**ಪ್ರವರ್ತಯತಿ | ತದಾ ಸ್ವಧರ್ಮಪರಿತ್ಯಾಗಃ ಪರಧರ್ಮಾನುಷ್ಠಾನಂ ಚ ಭವತಿ | ಯದಾ ಪುನಃ ರಾಗದ್ವೇಷೌ ತತ್ಪ್ರತಿಪಕ್ಷೇಣ ನಿಯಮಯತಿ ತದಾ ಶಾಸ್ತ್ರದೃಷ್ಟಿರೇವ ಪುರುಷೋ ಭವತಿ ನ ಪ್ರಕೃತಿವಶಃ |** **- ಗೀತಾ 3-34**

ಪುರುಷನ ಪ್ರಕೃತಿಯು ರಾಗದ್ವೇಷಗಳನ್ನು ಮುಂದುಮಾಡಿಕೊಂಡೇ ಪುರುಷನನ್ನು ತನ್ನ ಕಾರ್ಯದಲ್ಲಿ ತೊಡಗಿಸುತ್ತದೆ. ಆಗ ಪುರುಷನು ತನ್ನ ಧರ್ಮವನ್ನು ಬಿಟ್ಟು ಪರಧರ್ಮವನ್ನು ಆಚರಿಸುವನು. ಆದರೆ ಯಾವಾಗ ರಾಗದ್ವೇಷಗಳನ್ನು ಅವಕ್ಕೆ ವಿರೋಧವಾದ ವಿವೇಕದಿಂದ ತಡೆಗಟ್ಟುವನೋ ಆಗ ಪುರುಷನು ಶಾಸ್ತ್ರದೃಷ್ಟಿಯುಳ್ಳವನೇ ಆಗುತ್ತಾನೆ. ಆಗ ಅವನು ಪ್ರಕೃತಿಗೆ ವಶವಾಗುವುದಿಲ್ಲ.

**58**

**ನ ಚ ಧರ್ಮಾಧರ್ಮಯೋಃ ಸ್ವರೂಪಫಲಸಾಧನಾದಿಸಮಧಿಗಮೋ ಶಾಸ್ತ್ರಾದತಿರಿಕ್ತಂ ಕಾರಣಂ ಶಕ್ಯಂ ಸಂಭಾವಯಿತುಮ್ |**

**- ಸೂ. ಭಾ. 3-1-8**

ಧರ್ಮ-ಅಧರ್ಮಗಳ ಸ್ವರೂಪ-ಫಲಸಾಧನ ಮೊದಲಾದವುಗಳನ್ನರಿಯುವುದಕ್ಕೆ ಶಾಸ್ತ್ರಕ್ಕಿಂತ ಇನ್ನೊಂದು ಮಾರ್ಗವಿದೆಯೆಂದು ಊಹಿಸುವುದಕ್ಕೂ ಸಾಧ್ಯವಿಲ್ಲ.

**59**

**ಶಾಸ್ತ್ರಂ ತು ಅಂತ್ಯಂ ಪ್ರಮಾಣಮ್ | ಅತದ್ಧರ್ಮಾಧ್ಯಾರೋಪಣ ಮಾತ್ರ ನಿವರ್ತಕತ್ವೇನ ಪ್ರಾಮಾಣ್ಯಮ್ ಆತ್ಮನಃ ಪ್ರತಿಪದ್ಯತೇ, ನ ತು ಅಜ್ಞಾತಾರ್ಥಜ್ಞಾಪಕತ್ವೇನ**

**- ಗೀತಾ 2-18**

ಶಾಸ್ತ್ರವು ಅಂತ್ಯಪ್ರಮಾಣ. ಆತ್ಮನಲ್ಲಿಲ್ಲದ ಧರ್ಮಗಳ ಆರೋಪವನ್ನು ತೆಗೆದು ಹಾಕುವುದರಿಂದ ಅದು ಆತ್ಮನ ವಿಷಯದಲ್ಲಿ ಪ್ರಮಾಣವೇ ಹೊರತು ಅಜ್ಞಾತಾರ್ಥ ಜ್ಞಾಪಕವಾಗಿ ಅಲ್ಲ.

ಪ್ರತ್ಯಕ್ಷಾದಿಪ್ರಮಾಣಗಳು ಎಲ್ಲಿ ಕೆಲಸ ಮಾಡುವುದಿಲ್ಲವೋ ಅಲ್ಲಿ ಶಾಸ್ತ್ರದ ಪ್ರವೃತ್ತಿಯಾದ್ದರಿಂದ ಅದು ಅಂತ್ಯ ಪ್ರಮಾಣ. ಶಾಸ್ತ್ರವು ಅಜ್ಞಾತಾರ್ಥಜ್ಞಾಪಕವಾದರೂ 'ಆತ್ಮನಿದ್ದಾನೆ' ಎಂಬ ವಿಷಯದಲ್ಲಿ ಅದು ಪ್ರಮಾಣವಾಗಬೇಕಾಗಿಲ್ಲ. ಆದರೆ 'ನಾನು' ಎಂಬ ಆತ್ಮನ ನಿಜಸ್ವರೂಪವು ತಿಳಿದಿಲ್ಲ. ಅದನ್ನು ಶಾಸ್ತ್ರವು ತಿಳಿಸಿ ಕೊಡುತ್ತದೆ. ಆತ್ಮನು ಸ್ವಸಂವೇದ್ಯ.

60

ಶಾಸ್ತ್ರಾದಿದಮೇವ ಭವತಿ, ಇದಮಿಷ್ಟಸಾಧನಂ, ಇದಮನಿಷ್ಟಸಾಧನಮಿತಿ ಸಾಧ್ಯಸಾಧನಸಂಬಂಧಾಭಿವ್ಯಕ್ತಿಃ | -ಬೃಹ. 2-1-20

'ಇದೇ ಆಗುತ್ತದೆ. ಇದು ಇಷ್ಟ ಸಾಧನ, ಇದು ಅನಿಷ್ಟಸಾಧನ' ಎಂದು ಸಾಧ್ಯವಾದ ಫಲವನ್ನೂ ಅದರ ಸಾಧನವನ್ನೂ ಶಾಸ್ತ್ರವು ತೋರಿಸಿಕೊಡುತ್ತದೆ.

61

ನ ತು ಶಾಸ್ತ್ರಂ ಭೃತ್ಯಾನಿವ ಬಲಾನ್ನಿವರ್ತಯತಿ ನಿಯೋಜಯತಿ ವಾ |
-ಬೃಹ. 2-1-20

ಶಾಸ್ತ್ರವಾದರೋ ತಟಸ್ಥ. ಅದು ಸೇವಕರನ್ನು ತಡೆಯುವಂತೆ ಅಥವಾ ಪ್ರೇರಿಸುವಂತೆ ಜನರನ್ನು ತಡೆಯುವುದೂ ಇಲ್ಲ, ಪ್ರೇರಿಸುವುದೂ ಇಲ್ಲ.

62

ಪುರುಷಾಃ ಸ್ವಯಮೇವ ಯಥಾರುಚಿ ಸಾಧನವಿಶೇಷೇಷು ಪ್ರವರ್ತಂತೇ |
ಶಾಸ್ತ್ರಂ ತು ಸವಿತೃಪ್ರಕಾಶವತ್ ಉದಾಸ್ತ ಏವ | -ಬೃಹ. 2-1-20

ಮನುಷ್ಯರು ತಮ್ಮ ಅಭಿರುಚಿಗೆ ಅನುಗುಣವಾಗಿ ಬೇರೆ ಬೇರೆ ಫಲಸಾಧನಗಳಲ್ಲಿ ತಾವಾಗಿ ಪ್ರವರ್ತಿಸುತ್ತಾರೆ. ಸೂರ್ಯಪ್ರಕಾಶದಂತೆ ಶಾಸ್ತ್ರವು ತಟಸ್ಥವಾಗಿರುತ್ತದೆ.

"ಸ್ವರ್ಗಕಾಮೋ ಯಜೇತ" ಮುಂತಾದ ಶಾಸ್ತ್ರವು ಇಂತಹ ಕರ್ಮಕ್ಕೆ ಈ ಫಲ ಎಂಬುದನ್ನು ತಿಳಿಸಿಕೊಡುತ್ತದೆ. ಅದೇನೂ ಪ್ರವರ್ತಕವಲ್ಲ. ಸೂರ್ಯಪ್ರಕಾಶವು ಬೆಳಗುತ್ತದೆ. ಜನರು ತಾವಾಗಿ ತಮ್ಮ ತಮ್ಮ ಕಾರ್ಯದಲ್ಲಿ ತೊಡಗುತ್ತಾರೆ.

63

ನ ಶಾಸ್ತ್ರಂ ಪದಾರ್ಥಾನ್ ಕರ್ತುಂ ಪ್ರವೃತ್ತಮ್ | ಕಿಂ ತರ್ಹಿ ಯಥಾಭೂತಾನಾಮಜ್ಞಾತಾನಾಂ ಜ್ಞಾಪನೇ | -ಬೃಹ. 2-1-20

ಪದಾರ್ಥಗಳನ್ನು ಇನ್ನೊಂದು ರೀತಿಯಲ್ಲಿ ಪರಿವರ್ತಿಸುವುದಕ್ಕಾಗಿ ಶಾಸ್ತ್ರವು ಪ್ರವೃತ್ತವಾಗಿಲ್ಲ. ಮತ್ತೇನೆಂದರೆ ನಮಗೆ ಅಜ್ಞಾತವಾಗಿ ಯಥಾಸ್ವಭಾವದಲ್ಲಿರುವ ಪದಾರ್ಥಗಳನ್ನು ತಿಳಿಸಿಕೊಡುವುದಕ್ಕಾಗಿ ಪ್ರವೃತ್ತವಾಗಿದೆ.

ಶಾಸ್ತ್ರವು ಜ್ಞಾಪಕವೇ ಹೊರತು ಕಾರಕವಲ್ಲ.

**64**

**ಯದ್ಧಿ ಸ್ವತೋಽಪ್ರಾಪ್ತಂ ತಚ್ಛಾಸ್ತ್ರೇಣ ಬೋಧಯಿತವ್ಯಮ್ |**
**-ಐತರೇಯ ಉಪೋದ್ಘಾತ**

ಯಾವುದು ಸ್ವತಃ ಪ್ರಾಪ್ತವಾಗಿಲ್ಲವೋ ಅದನ್ನು ಶಾಸ್ತ್ರವು ಬೋಧಿಸಬೇಕಾಗುತ್ತದೆ.

**65**

**ದೃಶ್ಯಂತೇ ಹಿ ಪುರುಷಾಃ ರಾಗಾದಿಗೌರವಾತ್ ಶಾಸ್ತ್ರಮತಿಕ್ರಾಮಂತಃ |**
**- ಬೃಹ. 2-1-20**

ರಾಗದ್ವೇಷಾದಿಗಳಿಗೆ ವಶರಾಗುವುದರಿಂದ ಜನರು ಶಾಸ್ತ್ರವಿಧಿಯನ್ನು ಅತಿಕ್ರಮಿಸಿ ನಡೆಯುವುದು ಕಂಡುಬರುತ್ತದೆ.

**66**

**ಆಮ್ನಾತಸ್ಯಾರ್ಥಂ ಪ್ರತಿಪತ್ತುಂ ಪ್ರಭವಾಮೋ ನಾಮ್ನಾತಂ ಪರ್ಯನುಯೋಕ್ತುಮ್ |** **-ಸೂ. ಭಾ. 1-4-3**

ಶಾಸ್ತ್ರ ವಚನಕ್ಕೆ ಅರ್ಥವೇನೆಂದು ತಿಳಿಯಲು ನಮಗೆ ಸಾಧ್ಯವಿದೆ. ಹಾಗೆ ಏಕೆ ಹೇಳಿದ್ದಾರೆಂದು ಆಕ್ಷೇಪವೆತ್ತಲಾರೆವು.

**67**

**ನ ಹಿ ಶಾಸ್ತ್ರವಿಹಿತಂ ಕಿಂಚಿದಕರ್ತವ್ಯತಾಮೀಯಾತ್ |** **-ಈಶ - 9**

ಶಾಸ್ತ್ರವಿಹಿತವಾದದ್ದು ಯಾವುದೂ ಅಕರ್ತವ್ಯವಾಗುವುದಿಲ್ಲ. ಎಲ್ಲವೂ ಕರ್ತವ್ಯವೇ.

**68**

**ನ ಹಿ ಶಾಸ್ತ್ರಮಿದಂತಯಾ ವಿಷಯಭೂತಂ ಬ್ರಹ್ಮ ಪ್ರತಿಪಿಪಾದಯಿಷತಿ | ಕಿಂ ತರ್ಹಿ? ಪ್ರತ್ಯಗಾತ್ಮತ್ವೇನ ಅವಿಷಯತಯಾ ಪ್ರತಿಪಾದಯತ್ ಅವಿದ್ಯಾಕಲ್ಪಿತಂ ವೇದ್ಯ-ವೇದಿತೃ-ವೇದನಾದಿ-ಭೇದಮಪನಯತಿ|**

**-ಸೂ. ಭಾ. 1-1-4**

'ಇದು ಬ್ರಹ್ಮ' ಎಂಬುದಾಗಿ ಜ್ಞಾನಕ್ಕೆ ವಿಷಯವಾಗುವಂತೆ ಶಾಸ್ತ್ರವು ಬ್ರಹ್ಮವನ್ನು ಪ್ರತಿಪಾದಿಸುವುದಿಲ್ಲ. ಹಾಗಾದರೆ ಇನ್ನು ಹೇಗೆ? 'ಬ್ರಹ್ಮವು ಪ್ರತ್ಯಗಾತ್ಮವೇ ಸರಿ. ಅದು ಯಾವುದೇ ಜ್ಞಾನಕ್ಕೆ ವಿಷಯವಾಗತಕ್ಕದ್ದಲ್ಲ' ಎಂದು ಪ್ರತಿಪಾದಿಸುತ್ತ, ಜ್ಞೇಯ, ಜ್ಞಾತೃ, ಜ್ಞಾನ-ಎಂಬ ಅವಿದ್ಯಾಕಲ್ಪಿತ ಭೇದವನ್ನು ತೊಡೆದು ಹಾಕುತ್ತದೆ.

ನಮ್ಮ ಆತ್ಮಸ್ವರೂಪವಾದ ಬ್ರಹ್ಮವು ಮನಸ್ಸು, ಇಂದ್ರಿಯಗಳಿಗೆ ತಿಳಿಯುವ ಶಕ್ತಿಯನ್ನು ಕೊಟ್ಟು ಅವುಗಳನ್ನೇ ಬೆಳಗಿಸುತ್ತದೆ. ಹೀಗಿರುವಾಗ ಅವು ಯಾವ ಶಕ್ತಿಯಿಂದ ಆತ್ಮವನ್ನು ಬೆಳಗಿಸಿ ತೋರಿಸಬಲ್ಲವು? ಅದು ಸಾಧ್ಯವಿಲ್ಲದ್ದು. ಶಾಸ್ತ್ರವು ಅವಿದ್ಯಾಕಲ್ಪಿತ ಭೇಧಬುದ್ಧಿಯನ್ನು ತೊಡೆದು ಹಾಕುತ್ತದೆ. ಆಗ ಬ್ರಹ್ಮವು ತಾನಾಗಿಯೇ ತೋರಿಕೊಳ್ಳುತ್ತದೆ.

**69**

**ಅಯಂ ಧರ್ಮೋಽಯಮಧರ್ಮ ಇತಿ ಶಾಸ್ತ್ರಮೇವ ವಿಜ್ಞಾನೇ ಕಾರಣಮ್| ಅತೀಂದ್ರಿಯತ್ವಾತ್ತಯೋಃ ಅನಿಯತ ದೇಶಕಾಲ ನಿಮಿತ್ತತ್ವಾಚ್ಚ|**

**-ಸೂ. ಭಾ. 3-1-25**

'ಇದು ಧರ್ಮ, ಇದು ಅಧರ್ಮ' ಎಂದು ತಿಳಿಯುವುದಕ್ಕೂ ಶಾಸ್ತ್ರವೇ ಸಾಧನ. ಏಕೆಂದರೆ ಧರ್ಮಾಧರ್ಮಗಳು ಇಂದ್ರಿಯಗೋಚರಗಳಲ್ಲ ಮತ್ತು ದೇಶ, ಕಾಲ, ನಿಮಿತ್ತಗಳು ಅವುಗಳಿಗೆ ನಿಯತವಾಗಿಲ್ಲ.

ಇದು ಧರ್ಮ, ಇದು ಅಧರ್ಮ-ಎಂಬುದನ್ನು ಏಕರೂಪವಾಗಿ ನಿಶ್ಚಯಿಸಲಾಗುವುದಿಲ್ಲ. ದೇಶ, ಕಾಲ, ನಿಮಿತ್ತಗಳಿಂದ ಧರ್ಮವು ಅಧರ್ಮವೆನಿಸಬಹುದು. ಅಧರ್ಮವು ಧರ್ಮವೆನಿಸಬಹುದು. ಅಶುಚಿಯಾದ ಸ್ಥಳದಲ್ಲಿ ಮಾಡುವ ಹೋಮವು ಅಧರ್ಮ. ಹಗಲಿನಲ್ಲಿ ಮಾಡಬೇಕಾದ ಶ್ರಾದ್ಧವನ್ನು. ರಾತ್ರಿ ಮಾಡಿದರೆ ಅಧರ್ಮ. ಹಿಂಸೆಯು ಅಧರ್ಮವಾದರೂ ಅಜ್ಞಾನಿಯಾದ ಬಾಲಕನು ಮಾಡಿದ ಪ್ರಾಣಿಹಿಂಸೆ ಅಧರ್ಮವಲ್ಲ. ಆದ್ದರಿಂದ ಇದರ ವ್ಯವಸ್ಥೆಯನ್ನು ಶಾಸ್ತ್ರದಿಂದಲೇ

ತಿಳಿಯಬೇಕು. ತರ್ಕವು ಯಾವ ಪ್ರಯೋಜನಕ್ಕೂ ಬರುವುದಿಲ್ಲ.

**70**

**ನನು ಆತ್ಮಾ ಅಹಂ-ಪ್ರತ್ಯಯ-ವಿಷಯತ್ವಾತ್ ಉಪನಿಷತ್ಸ್ವೇವ ವಿಜ್ಞಾಯತೇ ಇತ್ಯನುಪಪನ್ನಮ್ | ನ | ತತ್ಸಾಕ್ಷಿತ್ವೇನ ಪ್ರತ್ಯುಕ್ತತ್ವಾತ್ |**

**-ಸೂ. ಭಾ. 1-1-4**

ಆತ್ಮನು 'ಅಹಂ' ಎಂಬ ಜ್ಞಾನಕ್ಕೆ ವಿಷಯನಾಗುವುದರಿಂದ ಉಪನಿಷತ್ತುಗಳಿಂದಲೇ ಅವನನ್ನು ತಿಳಿಯಬೇಕೆಂಬುದು ಯುಕ್ತವಲ್ಲ ಎಂಬ ಆಕ್ಷೇಪವು ಸರಿಯಲ್ಲ. ಆ ಬಗೆಯ ಜ್ಞಾನಕ್ಕೆ ವಿಷಯವಾಗತಕ್ಕದ್ದು ಆತ್ಮ ಎಂದುಕೊಳ್ಳುವ ಕರ್ತೃ ಅವನು. ಪರಮಾತ್ಮನಾದರೋ ಅದಕ್ಕೆ ಸಾಕ್ಷಿಯಾದವನು.

'ನಾನು' ಎಂದರೆ ದೇಹಾದಿಗಳೆಂದು ಕೆಲವರು ತಿಳಿದು ಕೊಂಡಿರುತ್ತಾರೆ. ಬೌದ್ಧರು ಆತ್ಮನನ್ನೇ ಒಪ್ಪದೆ ಕ್ಷಣಿಕ ವಿಜ್ಞಾನವನ್ನು ಆತ್ಮ ಎನ್ನುತ್ತಾರೆ. ಆದರೆ 'ನಾನು-ನಾನು' ಎಂದುಕೊಳ್ಳುವುದಕ್ಕೆ ಸಾಕ್ಷಿಯಾದ ಕೂಟಸ್ಥನೂ ಸರ್ವಭೂತಸ್ಥನೂ ಆದ ಆತ್ಮನೊಬ್ಬನಿದ್ದಾನೆಂಬುದು, ಉಪನಿಷತ್ತುಗಳಿಂದಲೇ ತಿಳಿದು ಬರುತ್ತದೆ. ಆದ್ದರಿಂದ 'ಔಪನಿಷದಃ ಪುರುಷ' ಎಂದು ವೇದಾಂತವು ತಿಳಿಸದೆ. ಸಾಕ್ಷಿ ಎಂದರೆ ಎಲ್ಲವನ್ನೂ ವಿಕಾರವಿಲ್ಲದೆ ನೋಡುತ್ತಿರುವ ಪ್ರತ್ಯಗಾತ್ಮ.

**71**

**ಬಾಹ್ಯವಿಷಯರಾಗಾದ್ಯಪಹೃತಚೇತಸೋ ನ ಶಾಸ್ತ್ರಂ ನಿವರ್ತಯಿತುಂ ಶಕ್ತಮ್ |**

**-ಬೃಹ 2-1-20**

ಬಾಹ್ಯವಾದ ವಿಷಯಗಳಲ್ಲಿರುವ ರಾಗದ್ವೇಷಾದಿಗಳಿಂದ ಯಾರ ಮನಸ್ಸು ಅಪಹರಿಸಲ್ಪಟ್ಟಿರುತ್ತದೆಯೋ ಅವರನ್ನು ಹಿಂದಿರುಗಿಸಲು ಶಾಸ್ತ್ರವು ಶಕ್ತವಲ್ಲ.

**72**

**ಅಜ್ಞಾಶ್ರದ್ಧಧಾನೌ ಯದ್ಯಪಿ ವಿನಶ್ಯತಃ ತಥಾಪಿ ನ ತಥಾ ಯಥಾ ಸಂಶಯಾತ್ಮಾ | ಸಂಶಯಾತ್ಮಾತು ಪಾಪಿಷ್ಠಃ ಸರ್ವೇಷಾಮ್ |** **-ಗೀತಾ 4-40**

ಅಜ್ಞನೂ ಶ್ರದ್ಧಾಹೀನನೂ ಕೆಡುವುದು ನಿಜ. ಆದರೆ ಸಂಶಯಾತ್ಮನು ಕೆಡುವಷ್ಟು

ಅವರು ಕೆಡುವುದಿಲ್ಲ. ಇವರೆಲ್ಲರಲ್ಲಿ ಸಂಶಯಾತ್ಮನು ತೀರ ಕೆಟ್ಟವನು.

ಆತ್ಮಜ್ಞಾನವಿಲ್ಲದವನು ಅಜ್ಞ. ಅವನು ಸತ್ಕರ್ಮಶೀಲನಾದರೆ ಇಹದಲ್ಲಿಯೂ ಪರದಲ್ಲಿಯೂ ಸುಖವನ್ನು ಪಡೆಯಬಹುದು. ಮೋಕ್ಷವು ಮಾತ್ರ ಅವನಿಗಿಲ್ಲ. ಶಾಸ್ತ್ರದಲ್ಲಿ ನಂಬಿಕೆಯಿಲ್ಲದ ನಾಸ್ತಿಕನು ಈ ಲೋಕದಲ್ಲಾದರೂ ಸುಖವನ್ನು ಪಡೆದಾನು. ಸಂಶಯಾತ್ಮನಿಗೆ ಇಹಪರಗಳೆರಡರಲ್ಲೂ ಸುಖವಿಲ್ಲ.

## 73

**ಶಾಸ್ತ್ರಾದೇವ ಪ್ರಮಾಣಾತ್ ಜಗತೋ ಜನ್ಮಾದಿಕಾರಣಂ ಬ್ರಹ್ಮ ಅಧಿಗಮ್ಯತೇ |**
**- ಸೂ. ಭಾ. 1-1-3**

ಶಾಸ್ತ್ರ ಪ್ರಾಮಾಣ್ಯದಿಂದಲೇ ಜಗತ್ತಿನ ಜನ್ಮ, ಸ್ಥಿತಿ, ಲಯಗಳಿಗೆ ಬ್ರಹ್ಮವು ಕಾರಣವೆಂದು ಗೊತ್ತಾಗುತ್ತದೆ.



# ೪ ವೇದ - ಉಪನಿಷತ್

ವೇದವೆಂದರೆ ಜ್ಞಾನಸಾಧನವೆಂದರ್ಥ. ಅತೀಂದ್ರಿಯವಾದ ವಸ್ತುವಿನ ಜ್ಞಾನವು ಯಾವುದರಿಂದ ಆಗುವುದೋ ಅದು ವೇದ. ಇದನ್ನು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ- ಎಂದು ನಾಲ್ಕು ವಿಭಾಗಗಳನ್ನಾಗಿ ಮಾಡಿದ್ದಾರೆ. ಸಂಹಿತಾ, ಬ್ರಾಹ್ಮಣ, ಆರಣ್ಯಕ ಎಂದು ಇವುಗಳಲ್ಲಿ ಒಳಭೇದಗಳುಂಟು. ಇವು ಪ್ರತಿಪಾದಿಸುವ ವಿಷಯಗಳನ್ನವಲಂಬಿಸಿ ಒಂದೊಂದು ವೇದವಿಭಾಗದಲ್ಲಿಯೂ ಕರ್ಮಕಾಂಡ, ಉಪಾಸನಾಕಾಂಡ, ಜ್ಞಾನಕಾಂಡ ಎಂದು ವಿಭಾಗಿಸಲೂ ಬರುತ್ತದೆ. ಉಪಾಸನೆಯು ಒಂದು ರೀತಿಯಲ್ಲಿ ಮಾನಸಕರ್ಮವೇ ಆದ್ದರಿಂದ ಕರ್ಮಕಾಂಡ, ಜ್ಞಾನಕಾಂಡ ಎಂದು ಎರಡು ವಿಭಾಗಗಳೆಂದೂ ಹೇಳುವುದುಂಟು. ಕರ್ಮ, ಉಪಾಸನೆಗಳೆರಡೂ ಚಿತ್ತಶುದ್ಧಿಯ ಮೂಲಕ ಬ್ರಹ್ಮಜ್ಞಾನಕ್ಕೆ ಉಪಯುಕ್ತವಾದವು. ಆದ್ದರಿಂದ ಜ್ಞಾನಕಾಂಡವೇ ಪ್ರಧಾನವಾದದ್ದು. ಪರಬ್ರಹ್ಮದ ಸಮ್ಯಗ್‌ಜ್ಞಾನವನ್ನುಂಟುಮಾಡತಕ್ಕವು ಉಪನಿಷತ್ತುಗಳು. ಮನುಷ್ಯನ ಅಜ್ಞಾನವನ್ನು ನೀಗಿಸಿ, ಸಂಸಾರಬಂಧನವನ್ನು ತೊಡೆದು ಹಾಕಿ, ಆತ್ಮ ಜ್ಞಾನವನ್ನುಂಟುಮಾಡಿ ಪರಮಾತ್ಮನೊಡನೆ ಸೇರಿಸತಕ್ಕದ್ದು- ಎಂದು ಉಪನಿಷತ್ ಶಬ್ದದ ಅರ್ಥ.

ಉಪನಿಷತ್ತುಗಳನ್ನು ವೇದಾಂತಗಳೆಂದು ಕರೆಯುತ್ತಾರೆ. ಅಂತವೆಂದರೆ ಸಿದ್ಧಾಂತ. ವೇದದ ಸಿದ್ಧಾಂತವೇ ವೇದಾಂತ ಅಥವಾ ಉಪನಿಷತ್ತು ಎನ್ನಿಸುತ್ತದೆ. ಉಪನಿಷತ್ತು ವೇದವೇ ಆದರೂ ಅದಕ್ಕಿರುವ ಪ್ರಾಧಾನ್ಯದೃಷ್ಟಿಯಿಂದ ವೇದೋಪನಿಷತ್ತುಗಳೆಂದು ವ್ಯವಹರಿಸುವ ವಾಡಿಕೆ ಇದೆ. ಇವೆಲ್ಲವೂ ಪರಮಾತ್ಮನಿಂದ, ಅವನ ಉಸಿರಿನಂತೆ ಪ್ರಕಾಶಗೊಂಡವು ಎಂದು ಭಾರತೀಯರ ದೃಢವಾದ ನಂಬಿಕೆ. ಆದ್ದರಿಂದ ಅವು ಅಪೌರುಷೇಯಗಳು. ಮನುಷ್ಯರಚಿತಗಳಲ್ಲವೆಂದರ್ಥ. ಮನುಷ್ಯನ ಬುದ್ಧಿದೋಷವು ಸೇರಿಲ್ಲವಾದ್ದರಿಂದ ವೇದವು ಪರಮಪ್ರಮಾಣವೆನಿಸುತ್ತದೆ. ಪ್ರತ್ಯಕ್ಷದಿಂದಾಗಲಿ, ತರ್ಕದಿಂದಾಗಲಿ ನಿಶ್ಚಯಿಸಲು ಸಾಧ್ಯವಿಲ್ಲದ ಅತೀಂದ್ರಿಯ ಜ್ಞಾನವನ್ನು ವೇದವು ಬೋಧಿಸುತ್ತದೆ. ವೇದಾಂತಿಗಳು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿ-ಎಂಬ ಆರು ಪ್ರಮಾಣಗಳನ್ನು ಒಪ್ಪುತ್ತಾರೆ. ವೇದವು ಶಬ್ದವೆಂಬ ಪ್ರಮಾಣದಲ್ಲಿ ಸೇರುತ್ತದೆ.

ಶ್ರೀ ಶಂಕರಾಚಾರ್ಯರು ವೇದವನ್ನೇ ಪರಮ ಪ್ರಮಾಣವೆಂದು ಒಪ್ಪಿ, ಅದ್ವೈತ ದರ್ಶನವೇ ವೈದಿಕದರ್ಶನವೆಂದೂ ಇದೇ ಸಮ್ಯಗ್ ದರ್ಶನವೆಂದೂ ಹೇಳಿದ್ದಾರೆ. ಸಾಂಖ್ಯ

ವೈಶೇಷಿಕಾದಿಮತಗಳು ವೇದವಿರುದ್ಧವಾದವುಗಳೆಂದೂ ಸ್ವಬುದ್ಧಿ ಪರಿಕಲ್ಪಿತವಾದ ತಾರ್ಕಿಕಮತಗಳೆಂದೂ ಜರಿಯುತ್ತಾರೆ. ತರ್ಕವನ್ನು ವೇದಕ್ಕೆ ಅನುಗುಣವಾಗಿ ಬಳಸಬೇಕು. ವೇದಕ್ಕೆ ವಿರುದ್ಧವಾಗಿ ತರ್ಕವನ್ನು ಬಳಸಿದರೆ ಅದು ಹೇತ್ವಾಭಾಸವಾಗಿ ಯಥಾರ್ಥಜ್ಞಾನವನ್ನುಂಟುಮಾಡುವುದಿಲ್ಲ. ಈಶ್ವರನಿದ್ದಾನೆಂದು ತರ್ಕದಿಂದ ನಿಶ್ಚಯಿಸಿದರೂ ಈಶ್ವರನೂ ಸಾಕಾರನೆ, ನಿರಾಕಾರನೆ? - ಇತ್ಯಾದಿ ನಿಜ ಸ್ವರೂಪವನ್ನು ತರ್ಕದಿಂದ ಎಂದಿಗೂ ನಿಶ್ಚಯಿಸಲಾಗುವುದಿಲ್ಲ. ಅದನ್ನು ನಿಶ್ಚಯಿಸಲು ಉಪನಿಷತ್ತನ್ನು ಬಿಟ್ಟು ಇನ್ನೊಂದು ದಾರಿಯಿಲ್ಲ. ಬ್ರಹ್ಮವೊಂದೇ ಪರಮಾರ್ಥ ಸತ್ಯ, ಉಳಿದುದೆಲ್ಲ ಮಿಥ್ಯೆಯೆಂಬುದು ವೇದಾನುಶಾಸನ. ಜಗನ್ಮೂಲವಾದ ಬ್ರಹ್ಮವನ್ನು ತಿಳಿಯುವುದೊಂದೇ ಮೋಕ್ಷಕ್ಕೆ ಸಾಧನವೆಂಬುದು ಸರ್ವೋಪನಿಷತ್ತುಗಳ ಸಿದ್ಧಾಂತವಾಗಿದೆ. ಆದ್ದರಿಂದ ಉಪನಿಷತ್ತಿಗೆ ಬ್ರಹ್ಮವಿದ್ಯೆಯೆಂಬ ಹೆಸರು ಬಂದಿದೆ.

**74**

**ನಿಯತರಚನಾವತೋ ವಿದ್ಯಮಾನಸ್ಯೈವ ವೇದಸ್ಯ ಅಭಿವ್ಯಕ್ತಿಃ ಪುರುಷನಿಃಶ್ವಾಸವತ್, ನ ಚ ಪುರುಷಬುದ್ಧಿಪ್ರಯತ್ನಪೂರ್ವಕಃ | ಅತಃ ಪ್ರಮಾಣ ನಿರಪೇಕ್ಷ ಏವ ಸ್ವಾರ್ಥೇ |**

**- ಬೃಹ. 2-4-10**

ಅನುಪೂರ್ವೀವಿಶಿಷ್ಟವಾಗಿ ಮೊದಲೇ ಇದ್ದ ವೇದವು, ಮನುಷ್ಯನ ನಿಃಶ್ವಾಸದಂತೆ, ಪರಮಾತ್ಮನಿಂದ ಅಭಿವ್ಯಕ್ತವಾಯಿತು. ಅದು ಯಾವನೊಬ್ಬ ಪುರುಷನ ಬುದ್ಧಿ ಪ್ರಯತ್ನಗಳಿಂದ ರಚಿತವಾದದ್ದಲ್ಲ. ಆದ್ದರಿಂದ ವೇದವು ತಾನು ಬೋಧಿಸುವ ವಿಷಯದಲ್ಲಿ ಅನ್ಯನಿರಪೇಕ್ಷವಾಗಿ ಪ್ರಮಾಣವಾಗುತ್ತದೆ.

'ತಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸಃ ಎಂಬ ಉಪನಿಷದ್ವಚನಕ್ಕೆ ವಿವರಣೆ.

**75**

**ವೇದಸ್ಯ ಹಿ ನಿರಪೇಕ್ಷಂ ಸ್ವಾರ್ಥೇ ಪ್ರಾಮಾಣ್ಯಂ ರವೇರಿವ ರೂಪವಿಷಯೇ ಪುರುಷವಚಸಾಂ ತು ಮೂಲಾಂತರಾಪೇಕ್ಷಂ ವಕ್ತೃಸ್ಮೃತಿ-ವ್ಯವಹಿತಂ ಚೇತಿ ವಿಪ್ರಕರ್ಷಃ |**

**-ಸೂ. ಭಾ. 2-1-1**

ವೇದವು ಅಪೌರುಷೇಯವಾದ್ದರಿಂದ ಅನ್ಯಾಪೇಕ್ಷೆಯಿಲ್ಲದೆ ತಾನು ಹೇಳುವ ಅರ್ಥದಲ್ಲಿ ಪ್ರಮಾಣವಾಗಿರುತ್ತದೆ. ಸೂರ್ಯನು ಪದಾರ್ಥಗಳ ರೂಪವನ್ನು ಪ್ರಕಾಶಗೊಳಿಸುವಂತೆ ಇದು. ಕಪಿಲಾದಿ ಪುರುಷರುಗಳ ವಚನಗಳಾದರೋ ತಮಗೆ

ಆಧಾರವಾದ ಮೂಲವಾಕ್ಯಗಳನ್ನು ಬಯಸುತ್ತವೆ. ಮೂಲವಾಕ್ಯವು ಪೂರ್ವಾನುಬವದ ಸಂಸ್ಕಾರದಿಂದಾದ ಸ್ಮರಣೆಗೆ ಗೋಚರವಾಗುತ್ತದೆ. ಹೀಗೆ ಸ್ಮೃತಿಯು ಪ್ರಮಾಣದ ವಿಷಯದಲ್ಲಿ ಶ್ರುತಿಗಿಂತ ದೂರವಾದದ್ದು.

**76**

**ನ ಹೀದಮತಿಗಂಭೀರಂ ಭಾವಯಾಥಾತ್ಮ್ಯಂ ಮುಕ್ತಿನಿಬಂಧನಂ ಮಾನಮಂತರೇಣ ಉತ್ಪ್ರೇಕ್ಷಿತುಮಪಿ ಶಕ್ಯಮ್ | ರೂಪಾದ್ಯಭಾವಾದ್ಧಿ ನಾಯಮರ್ಥಃ ಪ್ರತ್ಯಕ್ಷಗೋಚರಃ ಲಿಂಗಾದ್ಯಭಾವಾಚ್ಚ ನಾನುಮಾನಾಧೀನಮಿತಿ ಚಾವೋಚಾಮ |**

**- ಸೂ.ಭಾ. 2-1-11**

ಅತಿಗಂಭೀರವೂ ಮುಕ್ತಿಗೆ ಕಾರಣವೂ ಆದ ವಸ್ತುವಿನ ಯಥಾರ್ಥತೆಯನ್ನು ಶಾಸ್ತ್ರದ ಹೊರತಾಗಿ ಊಹಿಸುವುದಕ್ಕೂ ಸಹ ಶಕ್ಯವಲ್ಲ. ಏಕೆಂದರೆ ರೂಪಾದಿಗಳಿಲ್ಲದ್ದರಿಂದ ಇದು ಪ್ರತ್ಯಕ್ಷವಲ್ಲ. ಲಿಂಗಾದಿಗಳಿಲ್ಲದ್ದರಿಂದ ಅನುಮಾನಾದಿಗಳಿಗೂ ನಿಲುಕತಕ್ಕದ್ದಲ್ಲ ಎಂದು ಹಿಂದೆ ಹೇಳಿದ್ದೇವೆ.

**77**

**ನ ಹಿ ಈದೃಶಸ್ಯ ಶಾಸ್ತ್ರಸ್ಯ ಋಗ್ವೇದಾದಿಲಕ್ಷಣಸ್ಯ ಸರ್ವಜ್ಞಗುಣಾನ್ವಿತಸ್ಯ ಸರ್ವಜ್ಞಾದನ್ಯತಃ ಸಂಭವೋಽಸ್ತಿ |** **-ಸೂ.ಭಾ. 1-1-3**

ಋಗ್ವೇದಾದಿ ಶಾಸ್ತ್ರವು ಸರ್ವಾರ್ಥಪ್ರಕಾಶನಸಮರ್ಥವಾಗಿ ಸರ್ವಜ್ಞಕಲ್ಪವಾಗಿದೆ. ಇಂತಹ ವೇದವು ಸರ್ವಜ್ಞನಲ್ಲದೆ ಇನ್ನೊಬ್ಬನಿಂದ ಉತ್ಪನ್ನವಾಗಲಾರದು.

ಮಹತ್ತರವಾದ ವೇದರಾಶಿಯ ಪ್ರಕಾಶನ ಯಾರಿಂದ ಆಯಿತೋ ಆ ಬ್ರಹ್ಮವು ಸರ್ವಜ್ಞವೇ ಸರಿ.

**78**

**ಕಾಪಿಲಕಾಣಾದಾದಿ ತರ್ಕಶಾಸ್ತ್ರವಿರೋಧಃ ಇತಿ ಚೇತ್ | ನ | ತೇಷಾಂ ಮೂಲಾಭಾವೇ ವೇದವಿರೋಧೇ ಚ ಭ್ರಾಂತತ್ವೋಪಪತ್ತೇಃ |** **- ತೈತ್ತಿ. ಭೃಗು 10**

(ಜೀವ-ಬ್ರಹ್ಮರಿಗೆ ಅಭೇದವನ್ನೊಪ್ಪಿದರೆ) ಕಪಿಲ ಕಣಾದ ಮೊದಲಾದವರ ತರ್ಕಶಾಸ್ತ್ರಕ್ಕೆ ವಿರೋಧ ಬರುತ್ತದೆ ಎನ್ನುವುದಾದರೆ ಅದು ಸರಿಯಲ್ಲ. ಅವರ ಶಾಸ್ತ್ರಕ್ಕೆ

ಮೂಲವಾದ ಪ್ರಮಾಣವಿಲ್ಲ ಮತ್ತು ಅವರ ಹೇಳಿಕೆ ವೇದ ವಿರುದ್ಧವಾದದ್ದೂ ಆಗಿದೆ. ಆದ್ದರಿಂದ ಕಪಿಲಾದಿಗಳು ಭ್ರಾಂತರೇ ಸರಿ.

ಅದ್ವೈತ ಸಿದ್ಧಾಂತಕ್ಕೆ 'ತತ್ತ್ವಮಸಿ' ಮುಂತಾದ ವಾಕ್ಯಗಳು ಪ್ರಮಾಣ ಕಪಿಲಾದಿಗಳ ಸಿದ್ಧಾಂತಕ್ಕೆ ಆಧಾರವಾದ ವೇದವಚನವೂ ಇಲ್ಲ. ಅದು ವೇದ ವಿರುದ್ಧವೂ ಹೌದು.

**79**

**ಸೇಯಂ ಬ್ರಹ್ಮವಿದ್ಯಾ ಉಪನಿಷಚ್ಛಬ್ದವಾಚ್ಯಾ ತತ್ಪರಾಣಾಂ ಸಹೇತೋಃ ಸಂಸಾರಸ್ಯ ಅತ್ಯಂತಾವಸಾದನಾತ್ | ಉಪನಿಪೂರ್ವಸ್ಯ ಸದೇಃ ತದರ್ಥತ್ವಾತ್ | ತಾದರ್ಥ್ಯಾತ್ ಗ್ರಂಥೋऽಪಿ ಉಪನಿಷದುಚ್ಯತೇ | - ಬೃಹ. ಉಪೋದ್ಘಾತ**

ಬ್ರಹ್ಮವಿದ್ಯೆಗೆ ಉಪನಿಷತ್ ಎಂದು ಹೆಸರು. ಏಕೆಂದರೆ ಬ್ರಹ್ಮವಿದ್ಯಾ ನಿಷ್ಠರಾದವರ ಸಂಸಾರವನ್ನು ಅದರ ಕಾರಣಸಹಿತ ಇದು ನಾಶಗೊಳಿಸುತ್ತದೆ. ಉಪ+ನಿ ಎಂಬ ಉಪಸರ್ಗಗಳಿಂದ ಕೂಡಿದ 'ಸದ್' ಧಾತುವಿಗೆ ನಾಶಗೊಳಿಸುವುದು-ಎಂಬ ಅರ್ಥವಿರುವುದರಿಂದ ಬ್ರಹ್ಮವಿದ್ಯೆಯೇ ಉಪನಿಷತ್ತು. ಅದನ್ನು ಉಂಟುಮಾಡುವುದಕ್ಕಾಗಿ ಈ ಗ್ರಂಥವಿರುವುದರಿಂದ ಶಬ್ದಾತ್ಮಕವಾದ ಈ ಗ್ರಂಥವೂ 'ಉಪನಿಷತ್' ಎನ್ನಿಸುತ್ತದೆ.

**80**

**ಯ ಇಮಾಂ ಬ್ರಹ್ಮವಿದ್ಯಾಮುಪಯಂತ್ಯಾತ್ಮಭಾವೇನ ಶ್ರದ್ಧಾಭಕ್ತಿ ಪುರಃಸರಾಃ ಸಂತಸ್ತೇಷಾಂ ಗರ್ಭಜನ್ಮ ಜರಾರೋಗಾದ್ಯಾನರ್ಥಪೂಗಂ ನಿಶಾತಯತಿ ಪರಂ ವಾ ಬ್ರಹ್ಮ ಗಮಯತ್ಯವಿದ್ಯಾದಿ ಸಂಸಾರಕಾರಣಂ ಚಾತ್ಯಂತಮವಸಾದಯತಿ ವಿನಾಶಯತೀತ್ಯುಪನಿಷತ್ | - ಮುಂಡಕ. ಉಪೋದ್ಘಾತ**

ಯಾರು ಶ್ರದ್ಧಾಭಕ್ತಿಗಳಿಂದ ಕೂಡಿದವರಾಗಿ ಈ ಬ್ರಹ್ಮವಿದ್ಯೆಯನ್ನು ತಮ್ಮದೆಂಬ ಪ್ರೇಮ ಭಾವನೆಯಿಂದ ಸೇವಿಸುತ್ತಾರೋ ಅವರಿಗೆ ಗರ್ಭದಲ್ಲಿ ಹುಟ್ಟುವುದು ಎಂಬ ಅನರ್ಥವನ್ನು ಮತ್ತು ಜರಾರೋಗಾದಿ ವಿಪತ್ತುಗಳನ್ನು ನಾಶಮಾಡುತ್ತದೆಯಾದ್ದರಿಂದ ಅಥವಾ ಪರಬ್ರಹ್ಮದೊಡನೆ ಸೇರಿಸುತ್ತದೆಯಾದ್ದರಿಂದ ಮತ್ತು ಸಂಸಾರಕ್ಕೆ ಕಾರಣವಾದ ಅವಿದ್ಯೆಯನ್ನು ನಿರ್ಮೂಲಗೊಳಿಸುತ್ತದೆಯಾದ್ದರಿಂದ ಇದು ಉಪನಿಷತ್ತು ಎನಿಸಿದೆ.

ಷದ್ಲೃ-ವಿಶರಣಗತ್ಯವಸಾದನೇಷು-ಎಂಬ ಧಾತುವಿನಿಂದ ಉಪನಿಷತ್ ಶಬ್ದ ಹುಟ್ಟಿದೆ. ಈ ಧಾತುವಿಗೆ ನಾಶ, ಗತಿ, ನಿರ್ಮೂಲನ ಎಂಬ ಅರ್ಥಗಳಿವೆ.

**81**

**ಶ್ರುತಿಶ್ಚ ನಃ ಪ್ರಮಾಣಮತೀಂದ್ರಿ ಯಾರ್ಥವಿಜ್ಞಾನೋತ್ಪತ್ತೌ |**
**- ಸೂ. ಭಾ. 2-3-1**

ಅತೀಂದ್ರಿಯವಾದ ವಸ್ತುವಿನ ಜ್ಞಾನಕ್ಕೆ ಶ್ರುತಿಯೇ ನಮಗೆ ಪ್ರಮಾಣವು.

**82**

**ಆಗಮ ಮಾತ್ರ ಸಮಧಿಗಮ್ಯ ಏವ ತ್ವಯಮರ್ಥೋಽಧರ್ಮವತ್ |**
**- ಸೂ. ಭಾ. 2-1-6**

ಬ್ರಹ್ಮಸ್ವರೂಪವು ವೇದದಿಂದ ಮಾತ್ರ ತಿಳಿಯಬಹುದಾದದ್ದು, ಧರ್ಮವಿದ್ದಂತೆ. "ನೈಷಾ ತರ್ಕೇಣ ಮತಿರಾಪನೇಯಾ" (ಕಠ 1-2-9) ಇತ್ಯಾದಿ ಪ್ರಮಾಣಗಳಿಂದ ಈ ರೀತಿ ಸಿದ್ಧಾಂತಿಸಲಾಗಿದೆ. ಧರ್ಮದ ಸ್ವರೂಪವೂ ಸಹ ಶಾಸ್ತ್ರಬೋಧ್ಯವೇ ಹೊರತು ತರ್ಕಗಮ್ಯವಲ್ಲ.

**83**

**ಯಥಾ ಅನ್ಯಾನಿ ವಸ್ತೂನಿ ಆಗಮನಿರಪೇಕ್ಷೈಃ ಪ್ರಮಾಣೈಃ ವಿಷಯೀಕ್ರಿಯಂತೇ, ನ ತಥಾ ಏತದಾತ್ಮತತ್ತ್ವಂ ಪ್ರಮಾಣಾಂತರೇಣ ವಿಷಯೀಕರ್ತುಂ ಶಕ್ಯತೇ |**
**- ಬೃಹ 4-4-20**

ವೇದಾಪೇಕ್ಷೆಯಿಲ್ಲದೆ ಬೇರೆ ಪ್ರಮಾಣಗಳಿಂದ ಇತರ ವಸ್ತುಗಳನ್ನು ತಿಳಿಯಬಹುದು. ಆತ್ಮತತ್ತ್ವವನ್ನು ಮಾತ್ರ ವೇದವ ಹೊರತಾಗಿ ಬೇರೆ ಪ್ರಮಾಣಗಳಿಂದ ತಿಳಿಯಲು ಶಕ್ಯವಿಲ್ಲ.

**84**

**ಸತ್ಯಮೇವಂ ಪ್ರತ್ಯಕ್ಷಾದಿಭಿಃ ಪ್ರಮಾಣೈರ್ನ ಪರಃ ಪ್ರತ್ಯಾಯಾಯಿತುಂ ಶಕ್ಯಃ |ಆಗಮೇನ ತು ಶಕ್ಯತ ಏವ ಪ್ರತ್ಯಾಯಯಿತುಮ್ |** **- ಕೇನ - ಪದಭಾಷ್ಯ -1-3**

ಇದು ನಿಜ. ಪ್ರತ್ಯಕ್ಷಾದಿ ಪ್ರಮಾಣಗಳಿಂದ ಪರಮಾತ್ಮನನ್ನು ತಿಳಿಸಿಕೊಡಲು

ಶಕ್ಯವಿಲ್ಲ. ಆದರೆ ವೇದ ಪ್ರಮಾಣದಿಂದ ತಿಳಿಸಿಕೊಡಲು ಶಕ್ಯವಾಗಿಯೇ ಆಗುತ್ತದೆ.

**85**

**ಯಥಾಭೂತಾರ್ಥವಾದಿತ್ವಾತ್ ವೇದಸ್ಯ |** **-ಬೃಹ. 1-4-10**

ವಸ್ತುವಿನ ಯಥಾರ್ಥಸ್ವರೂಪವನ್ನು ವೇದವು ಹೇಳುತ್ತದೆ.

**86**

**ಬ್ರಹ್ಮೈವೈಕಂ ಪರಮಾರ್ಥಸತ್ಯಮಿತಿ ವೇದಾನುಶಾಸನಮ್ |**
**-ಮುಂಡಕ 3-1-12**

ಬ್ರಹ್ಮ ಒಂದೇ ಪರಮಾರ್ಥಸತ್ಯವೆಂದು ವೇದದ ಉಪದೇಶವಾಗಿದೆ.

**87**

**ಜಗತಶ್ಚ ಯನ್ಮೂಲಂ ತತ್ಪರಿಜ್ಞಾನಾತ್ ಪರಂ ಶ್ರೇಯಃ ಇತಿ ಸರ್ವೋಪನಿಷದಾಂ ನಿಶ್ಚಿತೋsರ್ಥಃ |** **- ಪ್ರಶ್ನ 4-1**

ಜಗತ್ತಿಗೆ ಯಾವುದು ಮೂಲವೋ ಆ ಬ್ರಹ್ಮವಸ್ತುವಿನ ಅರಿವಿನಿಂದ ಪರಮ ಶ್ರೇಯಸ್ಸು ದೊರೆಯುತ್ತದೆ ಎನ್ನುವುದು ಎಲ್ಲ ಉಪನಿಷತ್ತುಗಳಲ್ಲಿಯೂ ನಿರ್ಣೀತವಾದ ವಿಷಯ.

**- 88 -**

**ಸರ್ವಾಸಾಮುಪನಿಷದಾಮ್ ಆತ್ಮಯಾಥಾತ್ಮ್ಯನಿರೂಪಣೇನೈವೋಪಕ್ಷಯಾತ್ |** **- ಈಶ. ಪೀಠಿಕೆ**

ಸಕಲ ಉಪನಿಷತ್ತುಗಳೂ ಆತ್ಮನ ಯಾಥಾತ್ಮ್ಯವನ್ನು ನಿರೂಪಿಸುವ ತಾತ್ಪರ್ಯದಲ್ಲಿಯೇ ಪರ್ಯವಸಾನಗೊಳ್ಳುತ್ತವೆ.

**89**

**ತಸ್ಮಾದವಗತಿನಿಷ್ಠಾನ್ಯೇವ ಬ್ರಹ್ಮವಾಕ್ಯಾನಿ | ನ ನಿಯೋಗನಿಷ್ಠಾನಿ |**
**-ಸೂ. ಭಾ. 3-2-21**

ಬ್ರಹ್ಮಬೋಧಕ ವಾಕ್ಯಗಳಿಗೆ ಜ್ಞಾನದಲ್ಲಿ ತಾತ್ಪರ್ಯವೇ ಹೊರತು ವಿಧಿಯಲ್ಲಿ ತಾತ್ಪರ್ಯವಿಲ್ಲ.

ಜ್ಞಾನವು ವಸ್ತುತಂತ್ರ. ವಸ್ತು ಹೇಗಿದೆಯೋ ಹಾಗೆ ಪ್ರಮಾಣದಿಂದ ಜ್ಞಾನ ಹುಟ್ಟುತ್ತದೆ. "ಬ್ರಹ್ಮವನ್ನು ತಿಳಿದುಕೊ" ಎಂಬ ವಚನಕ್ಕೆ ಮುಮುಕ್ಷುವನ್ನು ತತ್ತ್ವದ ಕಡೆಗೆ ತಿರುಗಿಸುವುದು ಉದ್ದೇಶವಾಗಿರುತ್ತದೆ. ತತ್ತ್ವಜ್ಞಾನವನ್ನು ವಿಧಿಸುವುದಕ್ಕೆ ಆಗುವುದಿಲ್ಲ.

**90**

**ನ ಹ್ಯನಧ್ಯಾತ್ಮವಿದ್ವೇದಾನ್ ಜ್ಞಾತುಂ ಶಕ್ನೋತಿ ತತ್ತ್ವತಃ |**
**-ಮಾಂಡೂಕ್ಯ. 2-30**

ಅಧ್ಯಾತ್ಮಜ್ಞಾನಿಯಲ್ಲದ ಯಾವನೂ ವೇದಾರ್ಥಗಳನ್ನು ತಾತ್ತ್ವಿಕವಾಗಿ ತಿಳಿದು ಕೊಳ್ಳಲಾರ.

**91**

**ಋಷೀಣಾಮಪಿ ಮಂತ್ರ ಬ್ರಾಹ್ಮಣದರ್ಶಿನಾಂ ಸಾಮರ್ಥ್ಯಂ ನಾಸ್ಮದೀಯೇನ ಸಾಮರ್ಥ್ಯೇನೋಪಮಾತುಂ ಯುಕ್ತಮ್ | ತಸ್ಮಾತ್ ಸಮೂಲ ಮಿತಿಹಾಸಪುರಾಣಮ್ ||**
**-ಸೂ. ಭಾ. 1-3-33**

ಮಂತ್ರ-ಬ್ರಾಹ್ಮಣಗಳ ದ್ರಷ್ಟಾರರಾದ ಋಷಿಗಳ ಸಾಮರ್ಥ್ಯವನ್ನು ನಮ್ಮ ಸಾಮರ್ಥ್ಯದೊಡನೆ ಹೋಲಿಸುವುದು ಯುಕ್ತವಲ್ಲ. ಆದ್ದರಿಂದ ಇತಿಹಾಸ ಪುರಾಣಗಳು ಆಧಾರ ಸಹಿತವಾದವುಗಳು.

ವ್ಯಾಸಾದಿಮಹರ್ಷಿಗಳಿಗೆ ಅತೀಂದ್ರಿಯವಾದ ಅದ್ಭುತ ಸಾಮರ್ಥ್ಯವಿತ್ತು. ಅವರ ನುಡಿ ಪ್ರಾಮಾಣಿಕ.

**92**

**"ವೇದಾ ಅವೇದಾ" ಇತಿ ವಚನಾತ್ ಇಷ್ಯತ ಏವಾಸ್ಮಾಭಿಃ ಶ್ರುತೇರಪ್ಯಭಾವಃ ಪ್ರಬೋಧೇ |** **- ಸೂ. ಭಾ. 4-1-3**

ಪ್ರಬೋಧವಾದಾಗ ಶ್ರುತಿಯೂ ಇಲ್ಲವೆಂಬುದು ನಮಗೆ ಸಂಮತವೇ. "ವೇದಾ ಅವೇದಾಃ" (ಬೃಹ. 4-3-29) ಆ ಸ್ಥಿತಿಯಲ್ಲಿ ವೇದಗಳು ಅವೇದಗಳಾಗುತ್ತವೆ ಎಂಬ ವಚನ ಇದಕ್ಕೆ ಪ್ರಮಾಣ.

**93**

**ಶ್ರುತಿವಿರೋಧೇ ನ್ಯಾಯಾಭಾಸತ್ವೋಪಗಮಾತ್ |** **-ಬೃಹ. 4-3-22**

ವೇದಕ್ಕೆ ವಿರೋಧವಾದ ಹೇತುವನ್ನು ಹೇತ್ವಾಭಾಸವೆಂದು ಅಂಗೀಕರಿಸಬೇಕು.

ವೇದವು ಸರ್ವೋತ್ತಮವಾದ ಪ್ರಮಾಣ. ಅದಕ್ಕೆ ವಿರುದ್ಧವಾದದ್ದನ್ನು ಯಾವ ಕಾರಣದಿಂದಲೂ ಅಂಗೀಕರಿಸಲಾಗುವುದಿಲ್ಲವೆಂದು ತಾತ್ಪರ್ಯ.

**94**

**ಅಯಂ ತು ಪರಮಾಣುಕಾರಣವಾದೋ ನ ಕೈಶ್ಚಿದಪಿ ಶಿಷ್ಟೈಃ ಕೇನ ಚಿದಪ್ಯಂಶೇನ ಪರಿಗೃಹೀತ ಇತ್ಯತ್ಯಂತಮೇವಾನಾದರಣೀಯೋ ವೇದವಾದಿಭಿಃ**

**- ಸೂ. ಭಾ. 2-3-17**

ಈ ಪರಮಾಣುಕಾರಣವಾದವನ್ನು ಶಿಷ್ಟರು (ಮನು, ವ್ಯಾಸಾದಿಗಳು) ಏಕಾಂಶದಲ್ಲಿಯೂ ಒಪ್ಪಿಲ್ಲ. ಆದ್ದರಿಂದ ಈ ವಾದವು ವೇದಾನುಸಾರಿಗಳಿಗೆ ಅತ್ಯಂತ ತಿರಸ್ಕಾರಾರ್ಹವಾದದ್ದು.

**95**

**ನ ಚ ವೇದಸ್ಯ ಪುರುಷಾಣಾಮಿವ ಮಾಯಾಲೀಕವಂಚನಾದಿಭಿರರ್ಥಾವಧಾರಣಮುಪಪದ್ಯತೇ|**

**- ಸೂ. ಭಾ. 2-3-6**

ಪುರುಷರು ಭ್ರಾಂತಿ, ಸುಳ್ಳು, ವಂಚನೆ ಮುಂತಾದವುಗಳಿಂದ ಅರ್ಥವನ್ನು ಅನ್ಯಥಾ ಪ್ರತಿಪಾದಿಸಬಹುದು. ಹಾಗೆ ವೇದವು ಅನ್ಯಥಾ ಪ್ರತಿಪಾದಿಸುತ್ತದೆ ಎನ್ನುವುದು ಯುಕ್ತವಲ್ಲ.

## 96

**ನ ಹಿ ಅಕ್ಷರಬಾಹ್ಯೋ ವೇದಾರ್ಥೋ ವೇದಾರ್ಥೋಪಕಾರೀ ವಾ |**

**-ಬೃಹ. 2-3-6**

ಶ್ರುತಿಯು ಅಕ್ಷರಶಃ ಹೇಳುವ ಅರ್ಥವನ್ನು ಬಿಟ್ಟು ಇನ್ನೊಂದು ಅರ್ಥವನ್ನು ಕಲ್ಪಿಸಿ ಹೇಳುವುದಾದರೆ ಅದು ವೇದಾರ್ಥವಾಗದು. ವೇದಾರ್ಥಕ್ಕೆ ಉಪಕಾರಿಯೂ ಆಗದು.

'ತತ್ತ್ವಮಸಿ' ಎಂಬ ವಾಕ್ಯದಲ್ಲಿ ತತ್ = ಅದರಿಂದ, ತ್ವಂ = ನೀನು, ಅಸಿ =ಹುಟ್ಟಿದ್ದೀಯೆ - ಈ ಪ್ರಕಾರ ಅರ್ಥ ಮಾಡುವುದು ಅಕ್ಷರಬಾಹ್ಯವಾದದ್ದು.

## 97

**ನಿರಾಕರಣಂ ತು ನ ಸಾಂಖ್ಯಜ್ಞಾನೇ ನ ವೇದನಿರಪೇಕ್ಷೇಣ ಯೋಗಮಾರ್ಗೇಣ ನಿಃಶ್ರೇಯಸಮಧಿಗಮ್ಯತೇ ಇತಿ | ಶ್ರುತಿರ್ಹಿ ವೈದಿಕಾತ್ಮೈಕತ್ವವಿಜ್ಞಾನಾದನ್ಯತ್ ನಿಶ್ರೇಯಸಸಾಧನಂ ವಾರಯತಿ 'ತಮೇವ ವಿದಿತ್ವಾತಿಮೃತ್ಯುಮೇತಿ, ನಾನ್ಯಃ ಪಂಥಾ ವಿದ್ಯತೇಽಯನಾಯ' ಇತಿ | ದ್ವೈತಿನೋ ಹಿ ತೇ ಸಾಂಖ್ಯಾ ಯೋಗಾಶ್ಚ ನಾತ್ಮೈಕತ್ವದರ್ಶಿನಃ |**

**- ಸೂ. ಭಾ. 2-1-3**

ವೇದದ ಒಪ್ಪಿಗೆ ಇಲ್ಲದ ಸಾಂಖ್ಯಜ್ಞಾನದಿಂದಾಗಲಿ ಯೋಗಮಾರ್ಗದಿಂದಾಗಲಿ ಮೋಕ್ಷವು ಸಿಗುವುದಿಲ್ಲವಾದ್ದರಿಂದ ಅವುಗಳನ್ನು ಸೂತ್ರಕಾರರು ನಿರಾಕರಿಸಿದ್ದಾರೆ. ಏಕೆಂದರೆ, "ಅವನನ್ನೇ ಅರಿತುಕೊಂಡರೆ ಮೃತ್ಯುವನ್ನು ದಾಟುತ್ತಾನೆ. ಅವನನ್ನು ಹೊಂದುವುದಕ್ಕೆ ಇನ್ನೊಂದು ದಾರಿಯಿಲ್ಲ." (ಶ್ವೇ. 3-8) ಎಂದು ವೈದಿಕವಾದ ಆತ್ಮೈಕತ್ವ ಜ್ಞಾನಕ್ಕಿಂತ ಇನ್ನೊಂದು ಮೋಕ್ಷಸಾಧನವಿಲ್ಲವೆಂದು ಶ್ರುತಿಯು ಹೇಳುತ್ತದೆ. ಸಾಂಖ್ಯರೂ ಯೋಗಿಗಳೂ ದ್ವೈತಿಗಳೇ. ಆತ್ಮೈಕತ್ವದರ್ಶಿಗಳಲ್ಲ.



## ೫ ಜೀವಾತ್ಮ-ಪರಮಾತ್ಮರಿಗೆ ಉಪಾಧಿಕಲ್ಪಿತವಾದ ಭೇದ

ಅಶರೀರನೂ ನಿರಂಜನನೂ ಆದ ಪರಮಾತ್ಮನೊಬ್ಬನೇ ಇರುವಾಗ ಜೀವಾತ್ಮನೆಂದರೆ ಯಾರು? ನಾನಾ ಬಗೆಯಲ್ಲಿ ಸುಖದುಃಖಗಳನ್ನನುಭವಿಸುವ ಬೇರೆ ಬೇರೆ ಶರೀರಗಳನ್ನು ಧರಿಸಿರುವ ಜೀವಾತ್ಮರು ಎಲ್ಲಿಂದ ಬಂದರು? ಎಂಬ ಪ್ರಶ್ನೆ ಅದ್ವೈತ ಸಿದ್ಧಾಂತದಲ್ಲಿ ಹುಟ್ಟುತ್ತದೆ. ಅಂತಃಕರಣಗಳೆಂಬ ಉಪಾಧಿಗಳಿಂದ ಪರಿಚ್ಛಿನ್ನನಾಗುವ ಪರಮಾತ್ಮನೇ ನಾನಾ ಜೀವರಂತೆ ಗೋಚರಿಸುವನೆಂದೂ ಶರೀರದಲ್ಲಿರುವ ಅಭಿಮಾನದಿಂದ ಮಾತ್ರ ಜೀವನು ಸಶರೀರನೆಂದೂ ವಾಸ್ತವವಾಗಿ ಅಶರೀರನೆಂದೂ ಈ ಪ್ರಶ್ನೆಗೆ ಉತ್ತರ. ಅಂತೆಯೇ ಆತ್ಮಪ್ರಕಾಶದಿಂದ ಚೇತನದಂತೆ ವರ್ತಿಸುವ ಅಂತಃಕರಣವೇ ಸುಖದುಃಖಾದಿಗಳನ್ನು ಭೋಗಿಸುತ್ತದೆಯೆಂದು ಅವುಗಳ ಸೋಂಕು ಆತ್ಮನಿಗಿಲ್ಲವೆಂದು ತಿಳಿಯಬೇಕು. ಒಬ್ಬನೇ ಸೂರ್ಯನು ಅನೇಕ ಜಲಪಾತ್ರಗಳಲ್ಲಿ, ಹೊಳೆ ಕೆರೆಗಳಲ್ಲಿ ತನ್ನ ಪ್ರತಿಬಿಂಬಗಳನ್ನು ಮೂಡಿಸುತ್ತಾನೆ. ಪ್ರತಿಬಿಂಬಗಳು ಅನಂತವಾದರೂ ಸೂರ್ಯನು ಒಬ್ಬನೇ. ಜೀವನ ಪ್ರತಿಬಿಂಬದಂತೆ, ಸೂರ್ಯನು ಆತ್ಮನಂತೆ ಎಂದು ತಿಳಿಯಬೇಕು. ಇದಕ್ಕೆ ಪ್ರತಿಬಿಂಬವಾದ ಎನ್ನುತ್ತಾರೆ. ಒಂದೇ ಆಕಾಶವು ಘಟ, ಮಠಾದ್ಯುಪಾಧಿಗಳಿಂದ ಘಟಕಾಶ, ಮಠಾಕಾಶ ಎಂದು ವಿವಿಧ ನಾಮಗಳನ್ನು ಪಡೆಯುತ್ತದೆ. ಆಕಾಶವು ಘಟಾವಚ್ಛಿನ್ನ, ಮಠಾವಚ್ಛಿನ್ನ- ಇತ್ಯಾದಿ ರೂಪವನ್ನು ಪಡೆದು ವ್ಯವಹಾರಕ್ಕೆ ಒಳಗಾಗುತ್ತದೆ. ಈ ಘಟಾದ್ಯಾಕಾಶವಿದ್ದಂತೆ ಜೀವನು, ಮಹಾಕಾಶದಂತೆ ಆತ್ಮನು. ಇದಕ್ಕೆ ಅವಚ್ಛೇದವಾದವೆಂದು ಹೆಸರು. ಈ ವಾದಗಳಲ್ಲಿ ಸ್ವಲ್ಪ ಭೇದವಿದ್ದರೂ ತಾತ್ಪರ್ಯ ಒಂದೇ ಆಗಿರುತ್ತದೆ.

ಜೀವನಿಗೆ ಶರೀರವಿಲ್ಲದಿದ್ದರೂ ಉಪಾಧಿಯಾದ ಶರೀರವನ್ನೇ ಅಜ್ಞಾನದಿಂದ ನಾನು, ನನ್ನದು-ಎಂದುಕೊಳ್ಳುತ್ತಾನೆ. ಈ ಶರೀರವು ಬಿದ್ದು ಹೋಗಿ ಇನ್ನೊಂದು ಜನ್ಮ ಬಂದಾಗ, ಆ ದೇಹವನ್ನೂ ಹಾಗೆಯೇ ಭಾವಿಸುತ್ತಾನೆ. ಈ ಅಭಿಮಾನದಿಂದಲೇ ಅವನು ಶರೀರಿ, ದೇಹಿ-ಎನ್ನಿಸಿಕೊಳ್ಳುತ್ತಾನೆ. ದೇಹದ ಒಂದಂಶವಾದ ಅಂತಃಕರಣದಲ್ಲಿ ಆತ್ಮನ ಬೆಳಕು ಮೂಡಿದಾಗ ಘಟಜ್ಞಾನ, ಪಟಜ್ಞಾನ-ಮುಂತಾದ ಜ್ಞಾನಗಳಾಗುತ್ತವೆ. ಈ ಜ್ಞಾನಕ್ಕೆ ವೃತ್ತಿ ಜ್ಞಾನವೆಂದು ಹೆಸರು. ಸುಖ, ದುಃಖಗಳು ಈ ವೃತ್ತಿಜ್ಞಾನಕ್ಕೆ ಗೋಚರವಾಗತಕ್ಕವು. ಕನ್ನಡಿಯಲ್ಲಿ ಮುಖವು ಪ್ರತಿಬಿಂಬಿಸುವಂತೆ ಪರಮಾತ್ಮನು ಚಿತ್ತದಲ್ಲಿ ಪ್ರತಿಬಿಂಬಿಸುತ್ತಾನೆ. ಈ ಪ್ರತಿಬಿಂಬಕ್ಕೆ ಚಿದಾಭಾಸವೆಂದೂ ಜೀವವೆಂದೂ ಹೆಸರು. ಬೆಂಕಿಯಿಂದ ಕಾದ ಕಬ್ಬಿಣವು ಸುಡುವಂತೆ ಈ ಚಿದಾಭಾಸದ ವೃತ್ತಿಜ್ಞಾನವು ಜಡವಾದ ಅಂತಃಕರಣವನ್ನು ಪ್ರೇರಿಸುತ್ತದೆ. ದೇಹವನ್ನು ಕ್ರಿಯೆಯಲ್ಲಿ ತೊಡಗಿಸುತ್ತದೆ. ಅವಿದ್ಯಾಕಲ್ಪಿತವಾದ ಈ ಅಂತಃಕರಣದ

ಸಂಬಂಧವಿರುವವರೆಗೂ ಆತ್ಮನಿಗೂ ಜೀವಾತ್ಮನೆಂದು ವ್ಯವಹಾರ. ಈ ಸಂಬಂಧವು ಸುಷುಪ್ತಿಯಲ್ಲಿಯೂ ಬೀಜ ಶಕ್ತಿರೂಪದಲ್ಲಿ ಇದ್ದೇ ಇರುತ್ತದೆ. ಆದ್ದರಿಂದ ಎಚ್ಚರಾದ ಕೂಡಲೇ ಮತ್ತೆ ಸಂಸಾರಿಯಾಗಿ ವ್ಯವಹರಿಸುತ್ತಾನೆ. ಒಟ್ಟಿನಲ್ಲಿ ಜೀವಾತ್ಮನೆಂಬವನು ಬುದ್ಧಿಯೆಂಬ ಉಪಾಧಿಯಿಂದ ಪರಿಕಲ್ಪಿತನೇ ಹೊರತು ಪ್ರತ್ಯೇಕವಾಗಿ ಇಲ್ಲ. ಭೋಗ್ಯ, ಭೋಕ್ತೃ, ಕಾರ್ಯ, ಕರ್ತೃ ಎಂಬ ಸಂಸಾರ ಸಂಬಂಧವೆಲ್ಲವೂ ಪ್ರಾಣ, ಶರೀರ-ಇತ್ಯಾದಿ ಕಾರ್ಯ ವಸ್ತುಗಳಿಗೆ ಹೊರತು ಆತ್ಮನಿಗಲ್ಲ. ಆತ್ಮನು ಕಾರ್ಯನಲ್ಲ, ಅವನು ಕೂಟಸ್ಥನಿತ್ಯ.

**98**

**ನಿತ್ಯಶುದ್ಧಬುದ್ಧಮುಕ್ತಸ್ವಭಾವೇ ಕೂಟಸ್ಥನಿತ್ಯೇ ಏಕಸ್ಮಿನ್ನಸಂಗೇ ಪರಮಾತ್ಮನಿ ತದ್ವಿಪರೀತಂ ಜೈವಂ ರೂಪಂ ವ್ಯೋಮ್ನೀವ ತಲಮಲಾದಿ ಪರಿಕಲ್ಪಿತಮ್ |**

**-ಸೂ. ಭಾ. 1-3-19**

ನಿತ್ಯಶುದ್ಧಬುದ್ಧಮುಕ್ತ ಸ್ವಭಾವದವನೂ ಕೂಟಸ್ಥನಿತ್ಯನೂ ಏಕನೂ ಅಸಂಗನೂ ಆದ ಪರಮಾತ್ಮನಲ್ಲಿ ಅದಕ್ಕೆ ವಿಪರೀತವಾಗಿರುವ ಜೀವರೂಪವು ಕಲ್ಪಿತವಾಗಿದೆ ಆಕಾಶದಲ್ಲಿ ತಲಮಲಿನತೆಯು ಕಲ್ಪಿತವಾದಂತೆ.

**99**

**ನ ಹ್ಯಾತ್ಮನಃ ಶರೀರಾತ್ಮಾಭಿಮಾನಲಕ್ಷಣಂ ಮಿಥ್ಯಾಜ್ಞಾನಂ ಮುಕ್ತ್ವಾಽನ್ಯತಃ ಸಶರೀರತ್ವಂ ಶಕ್ಯಂ ಕಲ್ಪಯಿತುಮ್ | -ಸೂ. ಭಾ. 1-4**

ಶರೀರದಲ್ಲಿ ಆತ್ಮಾಭಿಮಾನವು ಮಿಥ್ಯಾಜ್ಞಾನ. ಈ ಮಿಥ್ಯಾಜ್ಞಾನವನ್ನು ಬಿಟ್ಟರೆ ಬೇರೆ ಯಾವ ವಿಧದಿಂದಲೂ ಆತ್ಮನಿಗೆ ಶರೀರವಿದೆಯೆಂದು ಕಲ್ಪಿಸಲು ಸಾಧ್ಯವಿಲ್ಲ.

**100**

**ಪರ ಏವ ಸರ್ವಸತ್ತ್ವೋಪಾಧಿದ್ವಾರೇಣ ಭೋಕ್ತಾ ಇತಿ ಸರ್ವಾವಿದ್ಯಾಕೃತ ಸಂವ್ಯವಹಾರಾಣಾಂ ಪರ ಏವಾಽತ್ಮಾ ಆಸ್ಪದಂ ನಾನ್ಯೋಽಸ್ತೀತಿ ವೇದಾಂತ ಸಿದ್ಧಾಂತಃ |**

**- ಛಾಂ. 8-12-1**

ಸಮಸ್ತ ಅಂತಃಕರಣಗಳೆಂಬ ಉಪಾಧಿಯ ಮೂಲಕ ಪರಮಾತ್ಮನೇ ಭೋಕ್ತೃವಾಗಿದ್ದಾನೆ. ಅವಿದ್ಯಾಕೃತವಾದ ಸಕಲ ವ್ಯವಹಾರಗಳಿಗೂ ಪರಮಾತ್ಮನೇ ಆಸ್ಪದನಾಗಿದ್ದಾನೆ. ಇನ್ನೊಬ್ಬನಿಲ್ಲ-ಎಂಬುದು ವೇದಾಂತ ಸಿದ್ಧಾಂತ.

**101**

**ನ ಚ ವಿಜ್ಞಾನಾತ್ಮಾ ಪರಮಾತ್ಮನೋ ವಸ್ತ್ವಂತರಮ್ | -ಬೃಹ. 2-3-6**

ವಿಜ್ಞಾನಾತ್ಮನಾದ ಜೀವನು ಪರಮಾತ್ಮನಿಗಿಂತ ಭಿನ್ನವಾದ ಇನ್ನೊಂದು ವಸ್ತುವಲ್ಲ.

**102**

**ಅವಿದ್ಯಾಕಾಮಕರ್ಮ-ವಿಶಿಷ್ಟ-ಕಾರ್ಯಕರಣೋಪಾಧಿರಾತ್ಮಾ ಸಂಸಾರೀ ಜೀವ ಉಚ್ಯತೇ | -ಬೃಹ. 3-8-12**

ಅವಿದ್ಯಾಕಾಮಕರ್ಮಗಳಿಂದ ವಿಶಿಷ್ಟವಾದ ಯಾವ ದೇಹವುಂಟೋ ಅದೇ ಉಪಾಧಿಯಾಗಿರುವ ಪರಮಾತ್ಮನು ಸಂಸಾರಿಯೆಂದೂ ಜೀವನೆಂದೂ ಉಕ್ತನಾಗಿದ್ದಾನೆ.

ಕಾರ್ಯಕರಣ = ಭೂತಕಾರ್ಯವಾದ ಅವಯವ ಮತ್ತು ಇಂದ್ರಿಯಗಳ ಸಮುದಾಯ. ಇದೇ ದೇಹ.

**103**

**ಜೀವೋ ಹಿ ನಾಮ ಚೇತನಃ ಶರೀರಾಧ್ಯಕ್ಷಃ ಪ್ರಾಣಾನಾಂ ಧಾರಯಿತಾ ಪ್ರಸಿದ್ಧೇರ್ನಿರ್ವಚನಾತ್ | -ಸೂ. ಭಾ. 1-1-16**

ಜೀವನೆಂದರೆ, ಚೇತನನೂ ಶರೀರದ ಅಧ್ಯಕ್ಷನೂ ಪ್ರಾಣಗಳನ್ನೇ ಧರಿಸಿದವನೂ ಆದವನೆಂದು ಅರ್ಥ, ಏಕೆಂದರೆ ಲೋಕಪ್ರಸಿದ್ಧಿಯೂ ಹಾಗಿದೆ. 'ಜೀವತೀತಿ ಜೀವಃ' ಎಂದು ಮಾಡಿದ ನಿರ್ವಚನವೂ ಹಾಗಿದೆ.

'ಜೀವತಿ' ಎಂದರೆ ಪ್ರಾಣವನ್ನು ಧರಿಸುತ್ತಾನೆ-ಎಂದರ್ಥ. 'ಜೀವ-ಪ್ರಾಣ ಧಾರಣೇ' ಎಂಬುದು ಧಾತು.

**104**

**ಜೀವೋ ಹಿ ನಾಮ ದೇವತಾಯಾಃ ಅಭಾಸಮಾತ್ರಂ ಬುದ್ಧ್ಯಾದಿಭೂತ ಮಾತ್ರಸಂಸರ್ಗಜನಿತ ಆದರ್ಶ ಇವ ಪ್ರವಿಷ್ಟಃ ಪುರುಷ ಪ್ರತಿಬಿಂಬೋ ಜಲಾದಿಷ್ವಿವ ಚ ಸೂರ್ಯಾದೀನಾಮ್ | -ಛಾಂ. 6-3-2**

ಜೀವನೆಂದರೆ ದೇವತೆಯ (ಈಶ್ವರನ) ಆಭಾಸಮಾತ್ರ. ಕನ್ನಡಿಯಲ್ಲಿ ಪ್ರವೇಶಿಸಿದ ಪುರುಷನ ಪ್ರತಿಬಿಂಬದಂತೆಯೂ, ನೀರಿನಲ್ಲಿ ಕಾಣುವ ಸೂರ್ಯಾದಿಗಳ ಪ್ರತಿಬಿಂಬದಂತೆಯೂ ಇರುವ ಈಶ್ವರನ ಆಭಾಸವೇ ಜೀವ. ಬುದ್ಧಿಯೇ ಮೊದಲಾದ ಭೂತಮಾತ್ರೆಗಳ ಸಂಬಂಧದಿಂದ ಈ ಆಭಾಸ ಉಂಟಾಗಿದೆ.

ಆಭಾಸ = ಮೂಲವಸ್ತುವಿನಂತೆ ತೋರುವ ಚಿತ್ರ, ಪ್ರತಿಬಿಂಬ ಮೊದಲಾದದ್ದು. ಆಭಾಸವು ಸತ್ಯವಲ್ಲ.

## 105

**ಸರ್ವಪ್ರಾಣಿಕರಣೋಪಾಧಿಭಿಃ ಕ್ಷೇತ್ರ ಜ್ಞಾಸ್ತಿತ್ವಂ ವಿಭಾವ್ಯತೇ |**

**-ಗೀತಾ 13-13**

ಸಮಸ್ತ ಪ್ರಾಣಿಗಳ ಇಂದ್ರಿಯಗಳೆಂಬ ಉಪಾಧಿಗಳಿಂದ ಕ್ಷೇತ್ರಜ್ಞನಿದ್ದಾನೆಂದು ಗೊತ್ತಾಗುತ್ತದೆ.

ಇಂದ್ರಿಯಗಳು ರಥಾದಿಗಳಂತೆ ಜಡಪದಾರ್ಥಗಳು. ಚೈತನ್ಯದ ಪ್ರೇರಣೆಯಿಲ್ಲದ ಅವು ಕೆಲಸಮಾಡಲಾರವು. ಆದ್ದರಿಂದ ಇಂದ್ರಿಯಗಳಿಗೆ ಪ್ರೇರಕವಾದ ಚೈತನ್ಯವಿದೆಯೆಂದು ಗೊತ್ತಾಗುತ್ತದೆ. ಯಾವುದು ಚೈತನ್ಯವೋ ಅದೇ ಕ್ಷೇತ್ರಜ್ಞ. ಅದನ್ನೇ ಜೀವವೆಂದು ಹೇಳುತ್ತಾರೆ.

## 106

**ಅಯಮಪಿ ಬುದ್ಧಿ ಸಂಬಂಧಃ ಶಕ್ತ್ಯಾತ್ಮನಾ ವಿದ್ಯಮಾನ ಏವ ಸುಷುಪ್ತಿ ಪ್ರಲಯಯೋಃ ಪುನಃ ಪ್ರಬೋಧಪ್ರಸವಯೋರಾವಿರ್ಭವತಿ |**

**- ಸೂ. ಭಾ. 2-3-3**

ಸುಷುಪ್ತಿ ಮತ್ತು ಪ್ರಳಯಗಳಲ್ಲಿ ಜೀವನಿಗೆ ಬುದ್ಧಿಸಂಬಂಧವು ಬೀಜಶಕ್ತಿ ರೂಪದಲ್ಲಿ ಇದ್ದುಕೊಂಡೇ ಇರುತ್ತದೆ. ಅನಂತರ ಎಚ್ಚರವಾದಾಗ ಮತ್ತು ಸೃಷ್ಟಿಕಾಲದಲ್ಲಿ ಮತ್ತೆ ಅದು ಪ್ರಕಾಶವಾಗುತ್ತದೆ.

ಸುಷುಪ್ತಿಯಲ್ಲಿ ಜೀವನು ಆತ್ಮನಲ್ಲಿ ಸೇರಿಹೋಗುವನೆಂದು **'ಸತಾ ಸೋಮ್ಯ ತದಾ ಸಂಪನ್ನೋ ಭವತಿ ಸ್ವಮಪೀತೋ ಭವತಿ' (ಛಾಂ. 6-8-1)** ಎಂದು ಶ್ರುತಿ ಹೇಳುತ್ತದೆ. ಪ್ರಳಯದಲ್ಲಿ ಸರ್ವವಿಕಾರಗಳೂ ನಾಶವಾಗುತ್ತವೆ. ಆದ್ದರಿಂದ ನಿದ್ರೆ ಕಳೆದು ಎಚ್ಚರವಾದಾಗ ಮತ್ತೆ ಸಂಸಾರಿಯಾಗುವುದು ಹೇಗೆ? ಸೃಷ್ಟಿಯಲ್ಲಿ ಮತ್ತೆ ಜೀವಗಳು ಬರುವುದು ಹೇಗೆ? ಎಂಬ ಪ್ರಶ್ನೆಗೆ ಮೇಲ್ಕಂಡದ್ದು ಉತ್ತರ. ಪುಂಸ್ತ್ವವು ಬಾಲ್ಯದಲ್ಲಿ ಬೀಜರೂಪದಿಂದ ಇದ್ದೇ

ಇರುತ್ತದೆ. ಯೌವನದಲ್ಲಿ ಅಭಿವ್ಯಕ್ತವಾಗುತ್ತದೆ. ಅದರಂತೆ ಇದು.

**107**

**ಪರಮಾರ್ಥತಸ್ತು ನ ಜೀವೋ ನಾಮ ಬುದ್ಧ್ಯುಪಾಧಿ ಸಂಬಂಧ ಪರಿಕಲ್ಪಿತ ಸ್ವರೂಪವ್ಯತಿರೇಕೇಣಾಸ್ತಿ | ನ ಹಿ ನಿತ್ಯಮುಕ್ತ-ಸ್ವರೂಪಾತ್ ಸರ್ವಜ್ಞಾದೀಶ್ವರಾದನ್ಯಶ್ಚೇತನೋ ಧಾತುಃ ದ್ವಿತೀಯೋ ವೇದಾಂತಾರ್ಥ ನಿರೂಪಣಾಯಾ ಮುಪಲಭ್ಯತೇ |**
**- ಸೂ. ಭಾ. 2-3-31**

ಜೀವ ಎಂಬುವನು ಬುದ್ಧಿಯೆಂಬ ಉಪಾಧಿಯಿಂದ ಪರಿಕಲ್ಪಿತ ಸ್ವರೂಪವೇ ಹೊರತು ಪ್ರತ್ಯೇಕವಾಗಿ ಇಲ್ಲ. ನಿತ್ಯಮುಕ್ತನೂ ಸರ್ವಜ್ಞನೂ ಆದ ಈಶ್ವರನಿಗಿಂತ ಭಿನ್ನವಾದ ಇನ್ನೊಂದು ಚೇತನ ಪದಾರ್ಥ ಇದೆಯೆಂದು ಉಪನಿಷದರ್ಥವನ್ನು ಪರಿಶೀಲಿಸಿದಾಗ ಕಂಡುಬರುವುದಿಲ್ಲ.

**108**

**ಕಾರ್ಯವಿಷಯ ಏವ ಭೋಗ್ಯಭೋಕ್ತೃತ್ವಕೃತಃ ಸಂಸಾರಃ ನತ್ವಾತ್ಮನಿ ಇತಿ | ಆತ್ಮನಿ ತಲಭ್ರಾಂತ್ಯಾ ಉಪಚರ್ಯತೇ |** **-ತೈತ್ತಿ -ಭೃಗು-9**

ಭೋಗ್ಯ, ಭೋಕ್ತೃ-ಇತ್ಯಾದಿರೂಪವಾದ ಸಂಸಾರವು ಕಾರ್ಯವಿಷಯದಲ್ಲಿಯೇ ಹೊರತು ಆತ್ಮನಲ್ಲಲ್ಲ. ಆತ್ಮನಲ್ಲಿ ಭೋಗ್ಯ ಭೋಕ್ತೃತ್ವಗಳು ಭ್ರಾಂತಿಯಿಂದ ಉಪಚರಿತವಾಗಿವೆ.

'ಪ್ರಾಣೋ ವಾ ಅನ್ನಂ, ಶರೀರಮನ್ನಾದಂ' ಇತ್ಯಾದಿಯಾಗಿ ಶ್ರುತಿಯು ಆಕಾಶ ಪರ್ಯಂತವಾಗಿ ಕಾರ್ಯಕ್ಕೆ ಮಾತ್ರ ಅನ್ನತ್ವವನ್ನೂ ಅನ್ನಾದತ್ವವನ್ನೂ ಹೇಳಿದೆ. ಆತ್ಮನು ಕಾರ್ಯನಲ್ಲವಾದ್ದರಿಂದ ಅವನಿಗೆ ಈ ಧರ್ಮಗಳಿಲ್ಲವೆಂದು ಇದರಿಂದ ಸೂಚಿತವಾಗುತ್ತದೆ. ಪ್ರಾಣ-ಶರೀರಾದಿ ಕಾರ್ಯದಲ್ಲಿ ಮಾತ್ರ ಸಂಸಾರ ಸಂಬಂಧ.

**109**

**ಪರ ಏವಾತ್ಮಾ ದೇಹೇಂದ್ರಿಯ-ಮನೋ-ಬುದ್ಧ್ಯುಪಾಧಿಭಿಃ ಪರಿಚ್ಛಿದ್ಯ ಮಾನೋ ಬಾಲೈಃ ಶಾರೀರ ಇತ್ಯುಪಚರ್ಯತೇ |** **- ಸೂ. ಭಾ. 1-2-6**

ದೇಹ, ಇಂದ್ರಿಯ, ಮನಸ್ಸು ಬುದ್ಧಿಗಳೆಂಬ ಉಪಾಧಿಗಳಿಂದ ಅಳತೆಗೆ ಸಿಕ್ಕಿದ

ಪರಮಾತ್ಮನನ್ನೇ ಬಾಲಕರು ಶಾರೀರ, ಜೀವ ಎಂದು ಔಪಚಾರಿಕವಾಗಿ ಹೇಳುತ್ತಾರೆ.

ಅನಾದಿಯಾದ ಅವಿದ್ಯೆಯಿಂದ ಜೀವನಾಗಿ ತೋರತಕ್ಕವನು ಶಾರೀರ.

**110**

**ಏವಂ ಪರಮಾರ್ಥತೋಽವಿಕೃತಮೇಕರೂಪಮಪಿ ಸದ್ಬ್ರಹ್ಮ ದೇಹಾದ್ಯುಪಾಧ್ಯಂತರ್ಭಾವಾದ್ಭಜತ ಇವೋಪಾಧಿಧರ್ಮಾನ್ ವೃದ್ಧಿ-ಹ್ರಾಸಾದೀನ್|**

**-ಸೂ. ಭಾ. 3-2-20**

ಪರಮಾರ್ಥದಲ್ಲಿ ಬ್ರಹ್ಮವು ವಿಕಾರವಿಲ್ಲದೆ ಒಂದೇ ರೂಪವಾಗಿರುತ್ತದೆ. ದೇಹಾದ್ಯುಪಾಧಿಗಳೊಡನೆ ಇರುವುದರಿಂದ ಉಪಾಧಿ ಧರ್ಮಗಳಾದ ವೃದ್ಧಿ ಹ್ರಾಸಾದಿಗಳನ್ನು ಪಡೆಯುತ್ತಿರುವ ಹಾಗೆ ಕಾಣಿಸುತ್ತದೆ.

**111**

**ಸದೇವತೂಪಾಧಿಸಂಪರ್ಕಾತ್ ಜೀವ ಇತಿ ಉಪಚರ್ಯತೇ ಇತಿ ಅಸಕೃತ್ ಪ್ರಪಂಚಿತಮ್ | ಏವಂ ಸತಿ ಯಾವತ್ ಏಕೋಪಾಧಿಗತಾ ಬನ್ಧಾನುವೃತ್ತಿಃ ತಾವದೇಕಜೀವವ್ಯವಹಾರಃ ಉಪಾಧ್ಯಂತರಗತಾಯಾಂ ತು ಬಂಧಾನುವೃತ್ತೌ ಜೀವಾಂತರವ್ಯವಹಾರಃ |**

**ಸೂ.ಭಾ. 3-2-9**

ಸದ್ವಸ್ತುವೇ ಉಪಾಧಿಸಂಪರ್ಕದಿಂದ ಜೀವ ಎಂಬುದಾಗಿ ಉಪಚಾರದಿಂದ ಹೇಳಲ್ಪಡುತ್ತದೆಯೆಂದು ಅನೇಕ ಸಲ ಪ್ರತಿಪಾದಿಸಿದ್ದಾಗಿದೆ. ಹೀಗಿರುವಾಗ ದೇಹ ಬಂಧಾನುವೃತ್ತಿಯು ಒಂದು ದೇಹೋಪಾಧಿಗೆ ಸಂಬಂಧಿಸಿದ್ದರೆ ಒಂದು ಜೀವ ಎಂದು ವ್ಯವಹಾರ. ಈ ಬಂಧಾನುವೃತ್ತಿಯು ಇನ್ನೊಂದು ಉಪಾಧಿಗೆ ಸಂಬಂಧಿಸಿದ್ದರೆ ಇನ್ನೊಂದು ಜೀವ ಎಂದು ವ್ಯವಹಾರ.

**112**

**ಅಭಾಸ ಏವ ಚೈಷ ಜೀವಃ ಪರಸ್ಯಾತ್ಮನೋ ಜಲಸೂರ್ಯಕಾದಿವತ್ ಪ್ರತಿ ಪತ್ತವ್ಯಃ | ನ ಸ ಏವ ಸಾಕ್ಷಾತ್ | ನಾಪಿ ವಸ್ತ್ವಂತರಮ್ |** **- ಸೂ.ಭಾ. 2-3-49**

ಜಲದಲ್ಲಿ ಕಾಣುವ ಸೂರ್ಯಪ್ರತಿಬಿಂಬಗಳಂತೆ ಈ ಜೀವನು ಪರಮಾತ್ಮನ ಆಭಾಸವೇ ಸರಿ. ಸಾಕ್ಷಾತ್ ಪರಮಾತ್ಮನೇ ಅಲ್ಲ. ಅಥವಾ ಇನ್ನೊಂದು ವಸ್ತುವೂ ಅಲ್ಲ.

ಒಂದು ಪ್ರತಿಬಿಂಬವು ಜಲದಲ್ಲಿ ಅಲ್ಲಾಡುವಾಗ ಇನ್ನೊಂದು ಜಲದ ಪ್ರತಿಬಿಂಬ ಅಲ್ಲಾಡುವುದಿಲ್ಲ. ಹಾಗೆ ಒಂದು ಜೀವಕ್ಕೆ ಸುಖ ದುಃಖಾದಿಗಳಾದರೆ, ಇನ್ನೊಂದು ಜೀವಕ್ಕೆ ಅವುಗಳ ಸಂಬಂಧವಿರುವುದಿಲ್ಲ. ಅಭಾಸವು ಅವಿದ್ಯಾಕೃತವಾದ್ದರಿಂದ ಆಭಾಸದಲ್ಲಿರುವ ಸಂಸಾರವೂ ಅವಿದ್ಯಾಕೃತವೇ.

ಸಾಕ್ಷಾತ್ ಪರಮಾತ್ಮನೇ ಅಲ್ಲ ಎಂದರೆ ಉಪಾಧಿರಹಿತನಾದ ಪರಮಾತ್ಮನಲ್ಲ ಎಂದರ್ಥ.

## 113

**ನ ಸ್ವಾಭಾವಿಕಂ ಕರ್ತೃತ್ವಮಾತ್ಮನಃ ಸಂಭವತಿ, ಅನಿರ್ಮೋಕ್ಷ ಪ್ರಸಂಗಾತ್ | ಕರ್ತೃತ್ವಸ್ವಭಾವತ್ವೇ ಹ್ಯಾತ್ಮನೋ ನ ಕರ್ತೃತ್ವಾನ್ನಿರ್ಮೋಕ್ಷಃ ಸಂಭವತಿ | ಅಗ್ನೇರಿವೌಷ್ಣ್ಯಾತ್ | ನ ಚ ಕರ್ತೃತ್ವಾದನಿರ್ಮುಕ್ತಸ್ಯಾಸ್ತಿ ಪುರುಷಾರ್ಥಸಿದ್ಧಿಃ | ಕರ್ತೃತ್ವಸ್ಯ ದುಃಖಸ್ವರೂಪತ್ವಾತ್ |**

**- ಸೂ.ಭಾ. 2-3-40**

ಆತ್ಮನಿಗೆ ಸಹಜವಾದ ಕರ್ತೃತ್ವವು ಇಲ್ಲ. ಇದ್ದರೆ ಮೋಕ್ಷವಾಗದೆ ಹೋದೀತು. ಏಕೆಂದರೆ, ಕರ್ತೃತ್ವವು ಆತ್ಮನ ಸ್ವಭಾವವಾದರೆ, ಅಗ್ನಿಯಿಂದ ಉಷ್ಣತೆ ಹೇಗೆ ಹೋಗದೋ ಹಾಗೆ, ಆತ್ಮನಿಂದ ಕರ್ತೃತ್ವ ಹೋಗದು. ಕರ್ತೃತ್ವ ಹೋಗದೆ ಪುರುಷಾರ್ಥವಾದ ಮೋಕ್ಷದ ಪ್ರಾಪ್ತಿ ಇಲ್ಲ. ಏಕೆಂದರೆ ಕರ್ತೃತ್ವವು ದುಃಖರೂಪವಾದದ್ದು.

## 114

**ನ ಚ ಪ್ರಾಣೈರ್ವಿಯುಕ್ತಸ್ಯ ಗತಿರುಪಪದ್ಯತೇ ಜೀವತ್ವಂ ವಾ | ಸರ್ವಗತತ್ವಾತ್ ಸದಾತ್ಮನೋ ನಿರವಯವತ್ವಾತ್ | ಪ್ರಾಣಸಂಬಂಧಮಾತ್ರಮೇವ ಹಿ ಅಗ್ನಿವಿಸ್ಫುಲಿಂಗವಜ್ಜೀವತ್ವ ಭೇದಕಾರಣಮ್ ಇತ್ಯತಸ್ತದ್ವಿಯೋಗೇ ಜೀವತ್ವಂ ಗತಿರ್ವಾ ನ ಶಕ್ಯಾ ಪರಿಕಲ್ಪಯಿತುಂ ಶ್ರುತಯಶ್ಚೇತ್ ಪ್ರಮಾಣಮ್ |**

**- ಛಾಂ. 5-10-2**

ಪ್ರಾಣಗಳಿಂದ ವಿಯುಕ್ತನಾದ ಆತ್ಮನಿಗೆ ಗತಿಯಾಗಲಿ ಜೀವತ್ವವಾಗಲಿ ಕೊಡುವುದಿಲ್ಲ. ಏಕೆಂದರೆ ಆತ್ಮನು. ಯಾವಾಗಲೂ ಸರ್ವಗತನೂ ಅವಯವರಹಿತನೂ ಆಗಿರುತ್ತಾನೆ. ಆತ್ಮನು ಜೀವನೆಂಬ ಭೇದಕ್ಕೆ ಕಾರಣವಾದದ್ದು ಬೆಂಕಿಯ ಕಿಡಿಯಂತೆ ಪ್ರಾಣಸಂಬಂಧ ಮಾತ್ರವೇ ಆಗಿದೆಯಷ್ಟೆ. ಆದ್ದರಿಂದ ಪ್ರಾಣವಿಯೋಗವಾದ ಮೇಲೆ ಆತ್ಮನಿಗೆ ಜೀವತ್ವವನ್ನಾಗಲಿ ಗತಿಯನ್ನಾಗಲಿ ಕಲ್ಪಿಸುವುದಕ್ಕೆ ಶಕ್ಯವಿಲ್ಲ. ಶ್ರುತಿಗಳು ಪ್ರಮಾಣವೆಂದು ಒಪ್ಪಿದರೆ ಹೀಗೆಯೇ ಹೇಳಬೇಕು.

ಮುಕ್ತಾತ್ಮನಿಗೆ ಎಲ್ಲಿಗೂ ಗಮನ ಇಲ್ಲ. ಪ್ರಾಣ ಸಂಬಂಧದಿಂದಲೇ ಆತ್ಮನಿಗೆ ಜೀವತ್ವ ಬರುತ್ತದೆ. ಪ್ರಾಣೋಪಾಧಿಕನಾದ ಆತ್ಮನೇ ಜೀವ.

**115**

**ತಸ್ಮಾದುಪಾಧಿಧರ್ಮಾಧ್ಯಾಸೇನೈವಾತ್ಮನಃ ಕರ್ತೃತ್ವಂ ಸ್ವಾಭಾವಿಕಮ್ |**
**-ಸೂ.ಭಾ. 2-3-4**

ಉಪಾಧಿಗಳಾದ ಚಿತ್ತವೃತ್ತಿಗಳನ್ನು ಆತ್ಮನಲ್ಲಿ ಅಧ್ಯಾಸ ಮಾಡಿಕೊಂಡದ್ದರಿಂದಲೇ ಆತ್ಮನಿಗೆ ಕರ್ತೃತ್ವ ಬರುತ್ತದೆಯೇ ಹೊರತು ಸ್ವಾಭಾವಿಕವಾಗಿ ಅಲ್ಲ.

**116**

**ವಿಧಿಶಾಸ್ತ್ರಂ ತಾವದ್ಯಥಾಪ್ರಾಪ್ತಂ ಕರ್ತೃತ್ವಮುಪಾದಾಯ ಕರ್ತವ್ಯ ವಿಶೇಷಮುಪದಿಶತಿ, ನ ಕರ್ತೃತ್ವಮಾತ್ಮನಃ ಪ್ರತಿಪಾದಯತಿ | ನ ಚ ಸ್ವಾಭಾವಿಕ ಮಸ್ಯ ಕರ್ತೃತ್ವಮಸ್ತಿ ಬ್ರಹ್ಮಾತ್ಮೋಪದೇಶಾತ್ |** **ಸೂ.ಭಾ. 2-3-40**

(ಅಧ್ಯಾಸದಿಂದ) ಮೊದಲೇ ಬಂದಿರುವ ಕರ್ತೃತ್ವವನ್ನು ಇಟ್ಟುಕೊಂಡು ವಿಧಿಶಾಸ್ತ್ರವು ಕರ್ತವ್ಯವಿಶೇಷವನ್ನು ಉಪದೇಶಿಸುತ್ತದೆಯೇ ಹೊರತು ಜೀವಾತ್ಮನಿಗೆ ಕರ್ತೃತ್ವವನ್ನು ಪ್ರತಿಪಾದಿಸುವುದಿಲ್ಲ. ಸ್ವಾಭಾವಿಕವಾದ ಕರ್ತೃತ್ವ ಆತ್ಮನಿಗಿಲ್ಲ. ಏಕೆಂದರೆ ಆತ್ಮವು ಬ್ರಹ್ಮವೆಂದು ಶಾಸ್ತ್ರವು ಉಪದೇಶಿಸಿದೆ.

ಜೀವನು ಕರ್ತನೆಂಬುದು ಲೋಕಸಿದ್ಧವೇ ಹೊರತು ಶಾಸ್ತ್ರಸಿದ್ಧವಲ್ಲ. ಈ ಲೋಕಸಿದ್ಧವಾದ ಕರ್ತೃತ್ವವನ್ನು ಅನುವಾದಿಸಿ ವಿಧಿಶಾಸ್ತ್ರ ಹೊರಟಿದೆ.

**117**

**ತಥಾಪಿ ಕಾರ್ಯಮನುಪ್ರವಿಷ್ಟಸ್ಯಾಸ್ತ್ಯುಪಾಧಿನಿಮಿತ್ತೋ ವಿಭಾಗಃ ಆಕಾಶಸ್ಯೇವ ಘಟಾದ್ಯುಪಾಧಿನಿಮಿತ್ತಃ ಇತ್ಯತಃ ಪರಮಕಾರಣಾತ್ ಬ್ರಹ್ಮಣೋಽನನ್ಯತ್ವೇಽಪ್ಯುಪಪದ್ಯತೇ ಭೋಕ್ತೃ ಭೋಗ್ಯ ಲಕ್ಷಣೋ ವಿಭಾಗಃ ಸಮುದ್ರ ತರಂಗಾದಿ ನ್ಯಾಯೇನೇತ್ಯುಕ್ತಮ್ |**
**- ಸೂ.ಭಾ. 2-1-13**

(ಪರಬ್ರಹ್ಮಕ್ಕೂ ಜೀವನಿಗೂ ಭೇದವಿಲ್ಲದಿದ್ದರೂ ಸಹ) ಕಾರ್ಯವಾದ ಜಗತ್ತನ್ನು (ದೇಹವನ್ನು) ಅನುಪ್ರವೇಶ ಮಾಡಿದವನಿಗೆ ದೇಹಾದ್ಯುಪಾಧಿಸಂಬಂಧಿಯಾದ ಭೇದವು ಇದ್ದೇ ಇದೆ. ಘಟಾದ್ಯುಪಾಧಿಯಿಂದ ಆಕಾಶವು ಮಹಾಕಾಶಕ್ಕಿಂತ ಭಿನ್ನವೆಂಬ ವ್ಯವಹಾರ

ಇರುವಂತೆ. ಆದ್ದರಿಂದ ಪರಮಕಾರಣವಾದ ಬ್ರಹ್ಮಕ್ಕೆ ಅಭಿನ್ನವಾಗಿದ್ದರೂಭೋಕ್ತೃ, ಭೋಗ್ಯ ಎಂಬ ವಿಭಾಗವು ಉಪಪನ್ನವಾಗುತ್ತದೆ. ಸಮುದ್ರತರಂಗ ನ್ಯಾಯವಿದ್ದಂತೆ.

ಸಮುದ್ರದಲ್ಲಿ ತರಂಗ, ಗುಳ್ಳೆ ಮೊದಲಾದವು ಇರುತ್ತವೆ. ಅವು ಸಮುದ್ರ ಜಲದಿಂದ ಭಿನ್ನವಲ್ಲದಿದ್ದರೂ ಸಮುದ್ರದಲ್ಲಿ ಅಲೆ ಇದೆ, ಈ ಅಲೆಗಿಂತ ಆ ಅಲೆ ಬೇರೆ, ಅಲೆಗಿಂತ ಗುಳ್ಳೆ ಬೇರೆ ಎಂಬ ವ್ಯವಹಾರ ಉಪಾಧಿನಿಮಿತ್ತವಾಗಿ ಬರುತ್ತದೆ.

**118**

**ಏವಂ ಚ ಸತಿ ಸರ್ವಕ್ಷೇತ್ರೇಷ್ವಪಿ ಸತೋ ಭಗವತಃ ಕ್ಷೇತ್ರಜ್ಞಸ್ಯ ಈಶ್ವರಸ್ಯ ಸಂಸಾರಿತ್ವಗಂಧಮಾತ್ರ ಮಪಿ ನಾಶಂಕ್ಯಮ್| ನ ಹಿ ಕ್ವಚಿದಪಿಲೋಕೇ ಅವಿದ್ಯಾಧ್ಯಸ್ತೇನ ಧರ್ಮೇಣ ಕಸ್ಯಚಿತ್ ಉಪಕಾರಃ ಅಪಕಾರೋ ವಾ ದೃಷ್ಟಃ |**

**-ಗೀತಾ 13-2**

(ಪರಮಾತ್ಮನಲ್ಲಿ ಸಂಸಾರಿತ್ವವು ಅಧ್ಯಸ್ತವಾಗಿರುವುದರಿಂದ) ಸರ್ವದೇಹಗಳಲ್ಲಿಯೂ ಇರತಕ್ಕ ಕ್ಷೇತ್ರಜ್ಞನಾದ ಭಗವಾನ್ ಈಶ್ವರನಿಗೆ ಸಂಸಾರಿತ್ವ ಲೇಶವೂ ಸಹ ಬರುವುದಿಲ್ಲ. ಅವಿದ್ಯೆಯಿಂದ ಆರೋಪಿತವಾದ ಧರ್ಮದಿಂದ ಲೋಕದಲ್ಲಿ ಯಾರಿಗೂ ಉಪಕಾರವಾಗಲಿ ಅಪಕಾರವಾಗಲಿ ಕಂಡುಬಂದಿಲ್ಲ.

ಆಕಾಶವು ಕಪ್ಪಾಗಿದೆಯೆಂದು ಭ್ರಮಿಸಿದರೆ ಆಕಾಶಕ್ಕೆ ಏನೂ ಆಗುವುದಿಲ್ಲ. ಅದೇನೂ ಕಪ್ಪಾಗುವುದಿಲ್ಲ. ಹಾಗೆಯೇ ಆತ್ಮನು ಸಂಸಾರಿಯೆಂದು ನಾವು ಭ್ರಮಿಸಿದರೆ ಅವನು ಸಂಸಾರಿಯಾಗಿಬಿಡುವುದಿಲ್ಲ.

**119**

**ಛಾಯಾಮಾತ್ರೇಣ ಜೀವರೂಪೇಣಾನುಪ್ರ ವಿಷ್ಟತ್ವಾದ್ದೇವತಾ ನ ದೈಹಿಕೈಃ ಸ್ವತಃ ಸುಖದುಃಖಾದಿಭಿಃ ಸಂಬಧ್ಯತೇ |** **- ಛಾಂ. 6-3-2**

ಈ ದೇವತೆಯು (ಈಶ್ವರನು) ನೆರಳಿನ ರೂಪದಲ್ಲಿ ದೇಹವನ್ನು ಪ್ರವೇಶಿಸಿದ್ದಾನೆ. ಆದ್ದರಿಂದ ದೇಹ ಸಂಬಂಧಿಗಳಾದ ಸುಖ ದುಃಖಾದಿಗಳ ಸ್ಪರ್ಶವು ಈಶ್ವರನಿಗಿಲ್ಲ.

**120**

**ಜೀವಸ್ಯಾಪ್ಯವಿದ್ಯಾಕೃತ ನಾಮರೂಪನಿರ್ವೃತ್ತ-ದೇಹೇಂದ್ರಿಯಾದ್ಯು ಪಾಧ್ಯವಿವೇಕಭ್ರಮನಿಮಿತ್ತ ಏವ ದುಃಖಾಭಿಮಾನೋ ನ ತು ಪಾರಮಾರ್ಥಿ ಕೋಽಸ್ತಿ |**

**- ಸೂ.ಭಾ. 2-3-46**

ಜೀವನಿಗೆ 'ನಾನು ದುಃಖಿ' ಎಂಬ ದುಃಖಾಭಿಮಾನವು ಭ್ರಮೆಯಿಂದಾದದ್ದು. ಅವಿದ್ಯಾಕೃತನಾಮರೂಪಗಳಿಂದಾಗಿರುವ ದೇಹೇಂದ್ರಿಯಗಳೇ ಮುಂತಾದ ಉಪಾಧಿಯನ್ನು ವಿಂಗಡಿಸಿಕೊಳ್ಳದ್ದರಿಂದ ಈ ಭ್ರಮೆ ಹುಟ್ಟಿರುತ್ತದೆ. ಪಾರಮಾರ್ಥಿಕವಾಗಿ ಜೀವನಿಗೆ ದುಃಖವಿಲ್ಲ.

ಸುಖ, ದುಃಖ - ಮೊದಲಾದವು ಮನಸ್ಸಿನ ಧರ್ಮಗಳು, ಆತ್ಮನ ಧರ್ಮಗಳಲ್ಲ.

**121**

**ಯಾವದಯಮಾತ್ಮಾ ಸಂಸಾರೀಭವತಿ, ಯಾವದಸ್ಯ ಸಮ್ಯಗ್ದರ್ಶನೇನ ಸಂಸಾರಿತ್ವಂ ನ ನಿವರ್ತತೇ, ತಾವದಸ್ಯ ಬುದ್ಧ್ಯಾ ಸಂಯೋಗೋ ನ ಶಾಮ್ಯತಿ | ಯಾವದೇವ ಚ ಅಯಂ ಬುದ್ಧ್ಯುಪಾಧಿ ಸಂಬಂಧಸ್ತಾವಜ್ಜೀವಸ್ಯ ಜೀವತ್ವಂ ಸಂಸಾರಿತ್ವಂ ಚ, ಪರಮಾರ್ಥತಸ್ತು ನ ಜೀವೋ ನಾಮ ಬುದ್ಧ್ಯುಪಾಧಿ ಸಂಬಂಧ ಪರಿಕಲ್ಪಿತ ಸ್ವರೂಪ ವ್ಯತಿರೇಕೇಣಾಸ್ತಿ|**

**-ಸೂ.ಭಾ. 2-3-30**

ಎಲ್ಲಿಯವರೆಗೆ ಜೀವಾತ್ಮನು ಸಂಸಾರಿಯೆಂದುಕೊಂಡಿರುತ್ತಾನೋ, ಎಲ್ಲಿಯವರೆಗೆ ಸಮ್ಯಗ್ದರ್ಶನದಿಂದ ಈತನ ಸಂಸಾರಿತ್ವ ಹೋಗುವುದಿಲ್ಲವೋ ಅಲ್ಲಿಯವರೆಗೆ ಈತನಿಗೆ ಬುದ್ಧಿ ಸಂಬಂಧವು ತಪ್ಪುವುದಿಲ್ಲ. ಬುದ್ಧ್ಯುಪಾಧಿ ಸಂಬಂಧವಿರುವವರೆಗೆ ಜೀವನ ಜೀವತ್ವ ಮತ್ತು ಸಂಸಾರಿತ್ವ. ಪರಮಾರ್ಥದಲ್ಲಾದರೋ ಜೀವತ್ವವು ಬುದ್ಧ್ಯುಪಾಧಿ-ಸಂಬಂಧ-ಪರಿಕಲ್ಪಿತವೇ ಹೊರತು ಸ್ವತಃ ಇಲ್ಲ.

**122**

**ಕಃ ಪುನರಯಂ ಸಂಸಾರೋ ನಾಮ? ಸುಖದುಃಖ ಸಂಭೋಗಃ ಸಂಸಾರಃ |**
**ಪುರುಷಸ್ಯ ಚ ಸುಖದುಃಖಾನಾಂ ಸಂಭೋಕ್ತೃತ್ವಂ ಸಂಸಾರಿತ್ವಮ್ |**

**-ಗೀತಾ 13-20**

ಈ ಸಂಸಾರವೆಂದರೆ ಯಾವುದು? ಸುಖ ದುಃಖಗಳ ಭೋಗವೇ ಸಂಸಾರ. ಮನುಷ್ಯನಲ್ಲಿರುವ ಸುಖ ದುಃಖಾದಿಭೋಕ್ತೃತ್ವವೇ ಸಂಸಾರಿತ್ವ.

**123**

**ಕ್ರಿಯಾಕಾರಕ ಫಲಭೇಧೋ ಹಿ ಸಂಸಾರಃ |** **-ಛಾಂ. 7-24-1**

ಬೇರೆ ಬೇರೆ ಕ್ರಿಯೆ, ಕಾರಕ, ಫಲಗಳಿರುವುದೇ ಸಂಸಾರ.

**124**

**ಸ ಹಿ ಉಷ್ಣಿಮಾ ನಾಮರೂಪವ್ಯಾಕರಣಾಯ ದೇಹಮ್ ಅನುಪ್ರವಿಷ್ಟಸ್ಯ ಚೈತನ್ಯಾತ್ಮಜ್ಯೋತಿಷೋ ಲಿಂಗಮ್, ಅವ್ಯಭಿಚರಾತ್ | ನ ಹಿ ಜೀವಂತಮಾತ್ಮಾನಂ ಉಷ್ಣಿಮಾ ವ್ಯಭಿಚರತಿ | -ಛಾಂ. 3-13-7**

ನಾಮರೂಪಗಳ ಪ್ರಕಟನೆಗಾಗಿ ದೇಹದಲ್ಲಿ ಅನುಪ್ರವೇಶ ಮಾಡಿರುವ ಚೈತನ್ಯವೆಂಬ ಆತ್ಮಜ್ಯೋತಿಗೆ ದೇಹದ ಉಷ್ಣತೆ ಸೂಚಕವಾಗಿದೆ. ಏಕೆಂದರೆ ಅದು ನಿಯತವಾಗಿರುತ್ತದೆ. ಜೀವವಿರುವ ಪ್ರಾಣಿಯನ್ನು ಉಷ್ಣತೆ ಬಿಟ್ಟಿರುವುದಿಲ್ಲ.

**125**

**ಬುದ್ಧಿರ್ಹಿ ಕಾಮಾನಾಮಾಶ್ರಯಃ, ನ ಆತ್ಮಾ | -ಕಠ 2-3-14**

ಆಸೆಗಳಿಗೆ ಆಶ್ರಯವಾದದ್ದು ಬುದ್ಧಿ, ಆತ್ಮವಲ್ಲ.

**126**

**ನ ಹಿ ಜೀವೋ ನಾಮ ಅತ್ಯಂತಭಿನ್ನೋ ಬ್ರಹ್ಮಣಃ | ಬುದ್ಧ್ಯಾದ್ಯುಪಾಧಿಕೃತಂ ತು ವಿಶೇಷಮಾಶ್ರಿತ್ಯ ಬ್ರಹ್ಮೈವ ಸನ್ ಜೀವಃ ಕರ್ತಾ ಭೋಕ್ತಾ ಚೇತ್ಯುಚ್ಯತೇ |**
**- ಸೂ.ಭಾ. 1-1-31**

ಜೀವ ಎನ್ನುವುದು ನಿಜವಾಗಿ ಬ್ರಹ್ಮಕ್ಕಿಂತ ಬೇರೆಯಾದದ್ದಲ್ಲ. ಬುದ್ಧಿಯೇ ಮುಂತಾದ ಉಪಾಧಿವಿಶೇಷಗಳನ್ನು ಹೊಂದಿ, ಸ್ವತಃ ಬ್ರಹ್ಮವೇ ಆಗಿದ್ದರೂ, ಅದನ್ನು ಜೀವ, ಕರ್ತಾ, ಭೋಕ್ತಾ- ಎಂದು ಕರೆಯುತ್ತಾರೆ.

**127**

**ಅವಿದ್ಯಾಕಾಮಕರ್ಮವಿಶಿಷ್ಟಕಾರ್ಯಕರಣಕೋಪಾಧಿರಾತ್ಮಾ ಸಂಸಾರೀ ಜೀವ ಉಚ್ಯತೇ | -ಬೃಹ -III-8-12**

ಅವಿದ್ಯಾಕಾಮಕರ್ಮಗಳಿಂದ ವಿಶಿಷ್ಟವಾದ ಯಾವ ದೇಹವುಂಟೋ ಅದೇ

ಉಪಾಧಿಯಾಗಿರುವ ಪರಮಾತ್ಮನು ಸಂಸಾರಿಯೆಂದೂ ಜೀವನೆಂದೂ ಉಕ್ತನಾಗಿದ್ದಾನೆ.

ಕಾರ್ಯಕರಣ -ಭೂತಕಾರ್ಯ ಮತ್ತು ಇಂದ್ರಿಯಗಳ ಸಮುದಾಯ. ಇದೇ ದೇಹ.

**128**

ಛಾಯಾಮಾತ್ರೇಣ ಜೀವರೂಪೇಣಾನುಪ್ರವಿಷ್ಟತ್ವಾದ್ದೇವತಾ ನ ದೈಹಿಕೈಃ ಸ್ವತಃ ಸುಖದುಃಖಾದಿಭಿಃ ಸಂಬಧ್ಯತೇ || -ಛಾಂ- 6-3-2

ಈ ದೇವತೆಯು (ಈಶ್ವರನು) ನೆರಳಿನ ರೂಪದಲ್ಲಿ ದೇಹವನ್ನು ಪ್ರವೇಶಿಸಿದ್ದಾನೆ. ಆದ್ದರಿಂದ ದೇಹ ಸಂಬಂಧಿಗಳಾದ ಸುಖದುಃಖಾದಿಗಳ ಸ್ಪರ್ಶ ಈಶ್ವರನಿಗಿಲ್ಲ.



# ೬ ಈಶ್ವರ

ಈ ಜಗತ್ತಿನ ರಚನೆ ಮನುಷ್ಯನ ಊಹೆಗೂ ನಿಲುಕುವುದಿಲ್ಲ. ಅಷ್ಟು ಅದ್ಭುತ ವಿಧಾನಗಳನ್ನುಳ್ಳ ಈ ಜಗತ್ತನ್ನು ನಿರ್ಮಿಸಿದ ಚೇತನವು ಸರ್ವಜ್ಞವೂ ಸರ್ವಶಕ್ತವೂ ಆಗಿರಲೇಬೇಕು. ಆ ಚೇತನವನ್ನೇ ನಾವು ಈಶ್ವರನೆನ್ನುತ್ತೇವೆ. "ಯತೋ ವಾ ಇಮಾನಿ ಭೂತಾನಿ ಜಾಯಂತೇ | ಯೇನ ಜಾತಾನಿ ಜೀವಂತಿ | ಯತ್ ಪ್ರಯಂತ್ಯಭಿಸಂವಿಶಂತೀತಿ" (ತೈತ್ತಿ.) ಇತ್ಯಾದಿ ಶ್ರುತಿಗಳು ಈಶ್ವರನಿಂದ ಈ ಜೀವಜಾತಗಳ ಸೃಷ್ಟಿ-ಸ್ಥಿತಿ-ಲಯಗಳು ನಡೆಯುತ್ತವೆಯೆಂದು ಸಾರುತ್ತವೆ. "ಕ್ಷಿತ್ಯಂಕುರಾದಿ ಜಗತ್ತು ಕರ್ತೃ ಜನ್ಯ; ಕಾರ್ಯವಾದ್ದರಿಂದ; ಘಟದ ಹಾಗೆ; ಯಾವುದು ಕಾರ್ಯವೋ ಅದಕ್ಕೆ ಕರ್ತನಿರಲೇಬೇಕು" ಇತ್ಯಾದಿ ಶ್ರುತ್ಯನುಕೂಲ ತರ್ಕದಿಂದಲೂ ಈಶ್ವರನೂ ಸಿದ್ಧನಾಗುತ್ತಾನೆ. ಜಗದೀಶ್ವರನು ಒಬ್ಬನೇ ಇಬ್ಬರಿಲ್ಲ. ನಿತ್ಯವೂ ನಿರತಿಶಯವೂ ಆದ ಜ್ಞಾನಶಕ್ತಿ ಈಶ್ವರನಿಗುಂಟು. ಮಾಯೆಯೆಂಬ ಉಪಾಧಿಯಿಂದ ಕೂಡಿದ ಬ್ರಹ್ಮವೇ ಈಶ್ವರ. ಈತನ ಅನುಗ್ರಹದಿಂದಲೇ ಯೋಗಿಗಳಿಗೆ ನಾನಾ ಸಿದ್ಧಿಗಳು ಪ್ರಾಪ್ತವಾಗುತ್ತವೆ. ಆತನು ಸರ್ವಶಕ್ತ.

ಈಶ್ವರನೆಂದರೆ ನಿಯಾಮಕನೆಂದರ್ಥ. ನಿಯಮ್ಯವಾದದ್ದು ಜಗತ್ತು. ಈ ರೀತಿ ಒಪ್ಪಿದಾಗ ನಿಯಮ್ಯ-ನಿಯಾಮಕರಿದ್ದ ಮೇಲೆ ಅದ್ವೈತವು ಹೇಗೆ ಸಿದ್ಧಿಸುತ್ತದೆ?-ಎಂಬ ಶಂಕೆ ಹುಟ್ಟುತ್ತದೆ. ಅವಿದ್ಯಾತ್ಮಕ ಉಪಾಧಿಯಿಂದ ಜಗತ್ತು ಕಲ್ಪಿತವಾದದ್ದು. ಮಾಯಾವಿಯಾದ ಐಂದ್ರಜಾಲಿಕನು ತಾನು ಬೀರಿದ ಇಂದ್ರಜಾಲವನ್ನು ತನ್ನ ಇಚ್ಛೆಗೆ ಅನುಗುಣವಾಗಿ ನಿಯಮಿಸುವಂತೆ, ಈಶ್ವರನು ಮಾಯಾಕಲ್ಪಿತ ಜಗತ್ತನ್ನು ನಿಯಮಿಸುತ್ತಾನೆಂದು ತಿಳಿಯಬೇಕು. ಅವನು ಸರ್ವಜ್ಞ, ಸರ್ವಶಕ್ತನೆಂದಾಗ ಆ 'ಸರ್ವ'ವೇನುಂಟು ಅದೆಲ್ಲವೂ ಮಾಯಾಕಲ್ಪಿತ ಸರ್ವವೆಂದು ಅಭಿಪ್ರಾಯ. ವ್ಯವಹಾರವಿರುವವರೆಗೆ ಇದೆಲ್ಲವೂ ಸತ್ಯವೇ. ಅಜ್ಞಾನವು ತೊಲಗುವವರೆಗೆ ಎಲ್ಲರೂ ಈ ಸತ್ಯವನ್ನು ಆಶ್ರಯಿಸಿಯೇ ನಡೆಯಬೇಕು. ಈ ಸ್ಥಿತಿಯನ್ನು ವ್ಯಾವಹಾರಿಕ ಸತ್ತಾ ಎನ್ನುತ್ತಾರೆ ಈ ಸ್ಥಿತಿಯಲ್ಲಿ ವಿಧಿನಿಷೇಧಗಳೂ ಸತ್ಯಸ್ವರೂಪಗಳೇ ಆಗುತ್ತವೆಯಾದ್ದರಿಂದ ಅವನ್ನು ಪಾಲಿಸಬೇಕು.

ಈ ಒಬ್ಬ ಈಶ್ವರನನ್ನೇ ವಿಷ್ಣು, ಬ್ರಹ್ಮ, ಶಿವ-ಮುಂತಾದ ಹೆಸರುಗಳಿಂದ ಭಕ್ತಜನರು ಉಪಾಸನೆ ಮಾಡುತ್ತಾರೆ. ಸತ್ತ್ವ ರಜಸ್ ತಮೋಗುಣಗಳೆಂಬ ಉಪಾಧಿಗಳಿಂದ

ಒಬ್ಬ ಈಶ್ವರನಲ್ಲಿಯೇ ನಾಮರೂಪಗಳು ಕಲ್ಪಿತವಾಗಿರುತ್ತವೆ. ಈ ಸಗುಣೋಪಾಸನೆಯಿಂದ ಫಲಗಳೂ ವಿಭಿನ್ನವಾಗಿ ದೊರೆಯುತ್ತವೆ. ಕರ್ಮಾನುರೂಪವಾದ ಫಲವು ದೊರೆಯುತ್ತದೆ. ಕರ್ಮಾನುರೂಪವಾದ ಫಲವು ದೊರೆಯುವುದರಿಂದ ಅದನ್ನು ಕೊಡತಕ್ಕವನು ಈಶ್ವರನೆನ್ನುವುದು ಸಮಂಜಸವೇ ಸರಿ.

ವಾಸ್ತವದಲ್ಲಾದರೋ ಈಶ್ವರನು ನಿರುಪಾಧಿಕವೂ ಶುದ್ಧ ಬುದ್ಧ ಮುಕ್ತ ಸ್ವಭಾವವೂ ಆದ ಪರಬ್ರಹ್ಮವೇ. ಈಶ್ವರನು ಸರ್ವಾಧ್ಯಕ್ಷನೂ ಸರ್ವಸಾಕ್ಷಿಯೂ ಅಂತರ್ಯಾಮಿಯೂ ಆದ ನಮ್ಮ ಆತ್ಮನೇ ಎಂದು ತಿಳಿಯಬೇಕು.

**129**

**ಅಸ್ಯ ಜಗತೋ ನಾಮರೂಪಾಭ್ಯಾಂ ವ್ಯಾಕೃತಸ್ಯ ಅನೇಕ ಕರ್ತೃಭೋಕ್ತೃ-ಸಂಯುಕ್ತಸ್ಯ ಪ್ರತಿನಿಯತ-ದೇಶ-ಕಾಲನಿಮಿತ್ತ ಕ್ರಿಯಾಫಲಾಶ್ರಯಸ್ಯ ಮನಸಾಪ್ಯಚಿಂತ್ಯರಚನಾರೂಪಸ್ಯ ಜನ್ಮಸ್ಥಿತಿಭಂಗಂ ಯತಃ ಸರ್ವಜ್ಞಾತ್ ಸರ್ವಶಕ್ತೇಃ ಕಾರಣಾದ್ ಭವತಿ ತದ್ ಬ್ರಹ್ಮ**

**-ಸೂ. ಭಾ. 1-1-2**

ನಾಮರೂಪಗಳಿಂದ ಕೂಡಿ ಗೋಚರಿಸತಕ್ಕದ್ದಾಗಿಯೂ ಅನೇಕ ಕರ್ತೃಭೋಕ್ತೃಗಳಿಂದ ಕೂಡಿದ್ದಾಗಿಯೂ ಗೊತ್ತಾದ ದೇಶ, ಕಾಲ, ನಿಮಿತ್ತಗಳನ್ನನುಸರಿಸಿ ಕ್ರಿಯಾಫಲಕ್ಕೆ ಆಶ್ರಯವಾಗಿಯೂ ಮನಸ್ಸಿನಿಂದಲೂ ಸಹ ಊಹಿಸಲೂ ಸಾಧ್ಯವಾಗದ ರಚನಾಸ್ವರೂಪವುಳ್ಳದ್ದಾಗಿಯೂ ಇರುವ ಈ ಜಗತ್ತಿನ ಉತ್ಪತ್ತಿ, ಸ್ಥಿತಿ, ನಾಶಗಳಿಗೆ ಯಾವುದು ಸರ್ವಜ್ಞವೂ ಸರ್ವಶಕ್ತವೂ ಆದ ಕಾರಣವೋ ಅದು ಬ್ರಹ್ಮ-ಈಶ್ವರ.

ಮಾಯಾಶಕ್ತಿಯಿಂದ ಕೂಡಿದ ಬ್ರಹ್ಮವೇ ಈಶ್ವರನಾಗಿರುತ್ತದೆ. ನಮ್ಮ ಒಂದು ದೇಹದ ರಚನೆಯನ್ನೇ ಊಹಿಸಲು ಸಾಧ್ಯವಿಲ್ಲ. ಕೋಟಿ ಕೋಟಿ ಪ್ರಾಣಿಗಳಿಂದಲೂ ಗ್ರಹನಕ್ಷತ್ರ ಪರ್ವತಾದಿಗಳಿಂದಲೂ ಕೂಡಿದ ಈ ಜಗತ್ತಿನ ರಚನೆ ಈಶ್ವರನಿಂದಲೇ ಸಾಧ್ಯ.

**130**

**ನಾಚೇತನಂ ಲೋಕೇ ಚೇತನಾಧಿಷ್ಠಿತಂ ಸ್ವತಂತ್ರಂ ಕಿಂಚಿತ್ ವಿಶಿಷ್ಟ ಪುರುಷಾರ್ಥನಿರ್ವರ್ತನ ಸಮರ್ಥಾನ್ ವಿಕಾರಾನ್ ವಿರಚಯತ್ ದೃಷ್ಟಮ್|**

**-ಸೂ.ಭಾ. 2-2-1**

ಅಚೇತನವಾದ ಯಾವ ಒಂದು ಜಡವಸ್ತುವೂ ಚೇತನದ ಸಹಾಯವಿಲ್ಲದೆ ಮನುಷ್ಯನಿಗೆ ಬೇಕಾದ ವಿಶಿಷ್ಟ ಕಾರ್ಯವನ್ನು ನಡೆಸಲು ಬೇಕಾದ ರೂಪಾಂತರಗಳನ್ನುಂಟುಮಾಡುತ್ತಿರುವುದು ಲೋಕದಲ್ಲಿ ಕಂಡುಬಂದಿಲ್ಲ.

ಮನುಷ್ಯನಿಗೆ ಬೇಕಾದ ಗಡಿಗೆಯನ್ನು ಮಾಡಲು ಮಣ್ಣು ತಾನೇ ಸ್ವತಂತ್ರವಾಗಿ ಗಡಿಗೆಯಾಗಿ ಪರಿಣಮಿಸುವುದಿಲ್ಲ. ಚೇತನವಾದ ಕುಂಬಾರನು ಕೆಲಸ ಮಾಡದೆ ಮಣ್ಣು ಗಡಿಗೆಯಾಗದು. ಹತ್ತಿಯು ತಾನಾಗಿಯೇ ನೂಲಾಗುವುದಿಲ್ಲ. ನೂಲು ಬಟ್ಟೆಯಾಗುವುದಿಲ್ಲ. ಹಾಗೆಯೇ ಪಂಚಭೂತಗಳಾಗಲಿ ಪ್ರಕೃತಿಯಾಗಲಿ ತಾವೇ ವೃಕ್ಷ. ಫಲ, ಪುಷ್ಪಾದಿಗಳಾಗಲಾರವು. ಆದ್ದರಿಂದ ಕರ್ತೃವಾದ ಈಶ್ವರನನ್ನು ಒಪ್ಪಬೇಕು.

**131**

**ಅತಃ ಚೇತನಾವತ್ ಕಾರಣಂ ಜಗತಃ ಸಿದ್ಧಮ್|** **-ಛಾಂ. 6-2-4**

(ಜಡವಾದ ಪ್ರಕೃತಿಗೆ ಜಗತ್ಕಾರಣತ್ವವು ಕೂಡುವುದಿಲ್ಲವಾದ್ದರಿಂದ) ಜಗತ್ತಿಗೆ ಕಾರಣವಾದದ್ದು ಸಚೇತನ ಪದಾರ್ಥ (ಈಶ್ವರ)ವೆಂದು ಸಿದ್ಧವಾಗುತ್ತದೆ.

**132**

**ಪರಮೇಶ್ವರಶ್ಚ ಸರ್ವಜಗತಃ ಕರ್ತಾ ಸರ್ವವೇದಾಂತೇಷ್ವವಧಾರಿತಃ |**
**-ಸೂ.ಭಾ. 1-4-16**

ಪರಮೇಶ್ವರನು ಸರ್ವಜಗತ್ತಿಗೂ ಕರ್ತೃವೆಂದು ಸಮಸ್ತ ಉಪನಿಷತ್ತುಗಳಲ್ಲಿ ನಿರ್ಣೀತವಾಗಿ ತಿಳಿದು ಬರುತ್ತದೆ.

**133**

**ನಿತ್ಯ ನಿರತಿಶಯ ಜ್ಞಾನಶಕ್ತ್ಯುಪಾಧಿರಾತ್ಮಾ ಅಂತರ್ಯಾಮೀ ಈಶ್ವರ ಉಚ್ಯತೇ |**
**-ಬೃಹ. 3-81-2**

ನಿತ್ಯವೂ ನಿರತಿಶಯವೂ ಆದ ಜ್ಞಾನಶಕ್ತಿಯೆಂಬ (ಅದಕ್ಕೆ ಕಾರಣವಾದ

ಮಾಯಾಶಕ್ತಿಯೆಂಬ) ಉಪಾಧಿಯಿಂದ ಸಹಿತನಾದ ಆತ್ಮನು ಅಂತರ್ಯಾಮಿಯೆಂದೂ, ಈಶ್ವರನೆಂದೂ ಉಕ್ತನಾಗಿದ್ದಾನೆ.

(ನೋಡಿ: ಅವಿದ್ಯಾಕಾಮ ಕರ್ಮ ವಿಶಿಷ್ಟ............. ಜೀವ ಉಚ್ಯತೇ)

**134**

ಪ್ರಥಮೋ ಅಧ್ಯಾಯೋ ಸರ್ವಜ್ಞಃ ಸರ್ವೇಶ್ವರೋ ಜಗತಃ ಉತ್ಪತ್ತಿಕಾರಣಂ ಮೃತ್ಸುವರ್ಣಾದಯ ಇವ ಘಟರುಚಕಾದೀನಾಮ್ | ಉತ್ಪನ್ನಸ್ಯ ಜಗತಃ ನಿಯಂತೃತ್ವೇನ ಸ್ಥಿತಿಕಾರಣಂ ಮಾಯಾವೀವ ಮಾಯಾಯಾಃ | ಪ್ರಸಾರಿತಸ್ಯ ಚ ಜಗತಃ ಪುನಃ ಸ್ವಾತ್ಮನ್ಯೇವೋಪಸಂಹಾರಕಾರಣಮ್| ಅವನಿರಿವ ಚತುರ್ವಿಧಸ್ಯ ಭೂತಗ್ರಾಮಸ್ಯ | ಸ ಏವ ಚ ಸರ್ವೇಷಾಂ ನ ಆತ್ಮಾ ಇತ್ಯೇತತ್ ವೇದಾಂತವಾಕ್ಯ ಸಮನ್ವಯ ಪ್ರತಿಪಾದನೇನ ಪ್ರತಿಪಾದಿತಮ್ | -ಸೂ.ಭಾ. 2-1-1

ಬ್ರಹ್ಮಸೂತ್ರದ ಪ್ರಥಮಾಧ್ಯಾಯದಲ್ಲಿ "ಸರ್ವಜ್ಞನೂ ಸರ್ವೇಶ್ವರನೂ ಆದ ಭಗವಂತನು ಜಗತ್ತಿಗೆ ಉತ್ಪತ್ತಿ ಕಾರಣ -ಗಡಿಗೆ ಒಡವೆಗಳಿಗೂ ಮಣ್ಣು ಚಿನ್ನಗಳಿದ್ದಂತೆ. ಉತ್ಪನ್ನವಾದ ಜಗತ್ತಿಗೆ ನಿಯಾಮಕನಾದ್ದರಿಂದ ಆತನು ಸ್ಥಿತಿಕಾರಣ-ಮಾಯೆಗೆ ಮಾಯಾವಿಯಿದ್ದಂತೆ. ವಿಸ್ತರಿಸಿದ ಜಗತ್ತನ್ನು ತನ್ನಲ್ಲಿ ಅಡಗಿಸಿಕೊಳ್ಳುವುದರಿಂದ ಲಯಕಾರಣ - ಚತುರ್ವಿಧ ಭೂತಗ್ರಾಮಗಳಿಗೆ ಭೂಮಿಯಿದ್ದಂತೆ. ಆತನೇ ಸರ್ವರಿಗೂ ಆತ್ಮನು" ಎಂದು ವೇದಾಂತವಾಕ್ಯಗಳನ್ನು ಸಮನ್ವಯ ಮಾಡಿದ್ದರಿಂದ ಪ್ರತಿಪಾದಿಸಲಾಗಿದೆ.

ಚತುರ್ವಿಧ ಭೂತಗ್ರಾಮ = ಮನುಷ್ಯ, ಮೃಗ, ಪಕ್ಷಿ ಮತ್ತು ಹಾವು ಮೊದಲಾದವು.

**135**

ಯತ್ಪ್ರಸಾದಾದ್ಧಿ ಯೋಗಿನಾಮಪಿ ಅತೀತಾನಾಗತವಿಷಯಂ ಪ್ರತ್ಯಕ್ಷಂ ಜ್ಞಾನಮಿಚ್ಛಂತಿ ಯೋಗಶಾಸ್ತ್ರವಿದಃ | ಕಿಮು ವಕ್ತವ್ಯಂ ತಸ್ಯ ನಿತ್ಯಸಿದ್ಧಸ್ಯೇಶ್ವರಸ್ಯ ಸೃಷ್ಟಿಸ್ಥಿತಿ ಸಂಹೃತಿ ವಿಷಯಂ ನಿತ್ಯಜ್ಞಾನಂ ಭವತೀತಿ | -ಸೂ.ಭಾ. 1-1-5

ಯಾವ ಭಗವಂತನ ಅನುಗ್ರಹದಿಂದ ಯೋಗಿಗಳಿಗೂ ಸಹ ಭೂತಭವಿಷ್ಯ-ದ್ವಿಷಯಗಳಲ್ಲಿ ಪ್ರತ್ಯಕ್ಷ ಜ್ಞಾನ ಹುಟ್ಟುವುದೆಂದು ಯೋಗಶಾಸ್ತ್ರಜ್ಞರು ಒಪ್ಪಿಕೊಂಡಿದ್ದಾರೋ ಅಂತಹ ನಿತ್ಯಸಿದ್ಧನಾದ ಈಶ್ವರನಿಗೆ ಸೃಷ್ಟಿಸ್ಥಿತಿ ಸಂಹಾರ

ವಿಷಯಕವಾದ ನಿತ್ಯಜ್ಞಾನವಿರುತ್ತದೆಯೆಂದು ಹೇಳಬೇಕಾದದ್ದೇನಿದೆ?

**136**

**ಯದ್ಯಪ್ಯಸ್ಮಾಕಮಿಯಂ ಜಗದ್ಬಿಂಬವಿರಚನಾ ಗುರುತರಸಂರಂಭೇವ ಅಭಾತಿ ತಥಾಪಿ ಪರಮೇಶ್ವರಸ್ಯ ಲೀಲೈವ ಕೇವಲೇಯಮ್ | ಅಪರಿಮಿತ ಶಕ್ತಿತ್ವಾತ್ ||**

**-ಸೂ.ಭಾ. 2-1-33**

ಈ ಜಗತ್ತನ್ನು ಸೃಷ್ಟಿಸುವುದು ಬಹಳ ಕಠಿಣವಾದ ಕಾರ್ಯವೆಂದು ನಮಗೆ ತೋರುತ್ತದೆಯಾದರೂ ಅಪರಿಮಿತ ಶಕ್ತಿಯುಳ್ಳ ಪರಮೇಶ್ವರನಿಗೆ ಇದು ಬರಿಯ ಒಂದು ಲೀಲೆಯೇ ಆಗಿದೆ.

**- 137 -**

**ಲೌಕಾಯತಿಕಾನಾಮಪಿ ಚೇತನ ಏವ ದೇಹೋಽಚೇತನಾನಾಂ ರಥಾದೀನಾಂ ಪ್ರವರ್ತಕೋ ದೃಷ್ಟಃ ಇತ್ಯವಿಪ್ರತಿಷಿದ್ಧಂ ಚೇತನಸ್ಯ ಪ್ರವರ್ತಕತ್ವಮ್ |**

**-ಸೂ.ಭಾ. 2-2-2**

ಅಚೇತನಗಳಾದ ರಥಾದಿಗಳಿಗೆ ಚೇತನವಾದ ದೇಹವೇ ಪ್ರವರ್ತಕವೆಂದು ಚಾರ್ವಾಕರೂ ಒಪ್ಪುತ್ತಾರೆ. ಆದ್ದರಿಂದ ಚೇತನವು ಪ್ರವರ್ತಕವೆಂಬ ಅಂಶದಲ್ಲಿ ಯಾರಿಗೂ ವಿವಾದವಿಲ್ಲ.

**138**

**ಅವಿದ್ಯಾತ್ಮಕೋಪಾಧಿಪರಿಚ್ಛೇದಾಪೇಕ್ಷಮೇವೇಶ್ವರಸ್ಯೇಶ್ವರತ್ವಂ ಸರ್ವಜ್ಞತ್ವಂ ಸರ್ವಶಕ್ತಿತ್ವಂ ಚ | ನ ಪರಮಾರ್ಥತೋ ವಿದ್ಯಯಾಪಾಸ್ತ ಸರ್ವೋಪಾಧಿಸ್ವರೂಪೇ ಆತ್ಮನೀಶಿತ್ರೀಶಿತವ್ಯ ಸರ್ವಜ್ಞತ್ವಾದಿ ವ್ಯವಹಾರಃ ಉಪಪದ್ಯತೇ**

**-ಸೂ.ಭಾ. 2-1-14**

ಅವಿದ್ಯೆಯೆಂಬ ಉಪಾಧಿಯ ಪರಿಚ್ಛೇದದ ಮೂಲಕವೇ ಈಶ್ವರನಿಗೆ ಈಶ್ವರತ್ವ, ಸರ್ವಜ್ಞತ್ವ, ಸರ್ವಶಕ್ತಿತ್ವಗಳು ಉಪಪನ್ನವಾಗುತ್ತವೆ. ವಿದ್ಯೆಯಿಂದ ಸರ್ವೋಪಾಧಿಗಳೂ

ತೋರದಿರುವ ಆತ್ಮನಲ್ಲಿ ಈಶ್ವರತ್ವ, ಸರ್ವಜ್ಞತ್ಯಾತ್ವಾದಿ ವ್ಯವಹಾರವು ಉಪಪನ್ನವಾಗುವುದಿಲ್ಲ.

**'ಯತ್ರ ನಾನ್ಯತ್‌ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ' (ಛಾಂ. 7-24-1)** ಇತ್ಯಾದಿ ಶ್ರುತಿಗಳಿರುವುದರಿಂದ ಬ್ರಹ್ಮ ವಸ್ತುವಿನಲ್ಲಿ ಯಾವ ಗುಣಕ್ರಿಯೆಗಳೂ ಇರುವುದಿಲ್ಲ.

**139**

**ಪರಮಾರ್ಥಾವಸ್ಥಾಯಾಮೀಶಿತ್ರೀಶಿತವ್ಯಾದಿ ವ್ಯವಹಾರಾಭಾವಃ ಪ್ರದರ್ಶ್ಯತೇ| ವ್ಯವಹಾರಾವಸ್ಥಾಯಾಂ ತೂಕ್ತಃ ಶ್ರುತಾವಪೀಶ್ವರಾದಿ ವ್ಯವಹಾರಃ "ಏಷ ಸರ್ವೇಶ್ವರಃ ಏಷ ಭೂತಾಧಿಪತಿರೇಷ ಭೂತಕಾಲ ಏಷ ಸೇತುರ್ವಿಧರಣ ಏಷಾಂ ಲೋಕಾನಾಂ ಅಸಂಭೇದಾಯ" ಇತಿ | -ಸೂ.ಭಾ. 2-1-14**

'ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ' ಗೀತಾ (5-14)- ಇತ್ಯಾದಿ ವಾಕ್ಯಗಳು ಪರಮಾರ್ಥಾವಸ್ಥೆಯಲ್ಲಿ ಆತ್ಮನಿಗೆ ಈಶ್ವರತ್ವಾದಿ ವ್ಯವಹಾರಗಳಿಲ್ಲವೆಂಬುದನ್ನು ಪ್ರದರ್ಶಿಸುತ್ತವೆ. ವ್ಯವಹಾರಾವಸ್ಥೆಯಲ್ಲಾದರೋ, ಈಶ್ವರಾದಿ ವ್ಯವಹಾರವಿದೆಯೆಂದು 'ಏಷ ಸರ್ವೇಶ್ವರಃ' ಇತ್ಯಾದಿ ಶ್ರುತಿಗಳಲ್ಲಿಯೂ ಉಕ್ತವಾಗಿದೆ.

**140**

**ಈಶ್ವರಸ್ಯ ತಾವನ್ನಿತ್ಯಂ ಸರ್ವವಿಷಯಂ ಜ್ಞಾನಂ ಸವಿತೃಪ್ರಕಾಶವತ್ | ತದ್ವಿಪರೀತಂ ಸಂಸಾರಿಣಾಂ ಖದ್ಯೋತಸ್ಯೇವ | -ಕೇನ ವಾಕ್ಯಭಾಷ್ಯ-3**

ಈಶ್ವರನಿಗೆ ಸರ್ವವಿಷಯಕವಾದ ನಿತ್ಯಜ್ಞಾನವಿರುತ್ತದೆ. ಸೂರ್ಯಪ್ರಕಾಶದಂತೆ ಅದು. ಸಂಸಾರಿಗಳಾದ ಜೀವರಿಗಾದರೋ ಮಿಂಚಿನ ಹುಳುವಿನ ಪ್ರಕಾಶದಂತೆ ಅಲ್ಪವೂ ಅನಿತ್ಯವೂ ಆದ ಜ್ಞಾನ.

**141**

**ತಸ್ಮಾತ್ಸಿದ್ಧಃ ಸರ್ವಜ್ಞ ಈಶ್ವರಃ ಸರ್ವಜಂತು ಬುದ್ಧಿ ಕರ್ಮಫಲ ವಿಭಾಗ ಸಾಕ್ಷೀ "ಸರ್ವಭೂತಾಂತರಾತ್ಮಾ"|| -ಕೇನ ವಾಕ್ಯ ಭಾಷ್ಯ-3**

ಸರ್ವಜ್ಞನಾದ ಈಶ್ವರನು ಸಕಲಪ್ರಾಣಿಗಳ ಬುದ್ಧಿಕರ್ಮಫಲ ವಿಭಾಗಗಳಿಗೆ ಸಾಕ್ಷಿಯೂ, ಸರ್ವಭೂತಾಂತರಾತ್ಮನೂ ಎಂದು ಸಿದ್ಧವಾಯಿತು.

**142**

**ಏಕ ಏವ ತು ಪರಮಾತ್ಮೇಶ್ವರಃ ತೈಸ್ತೈರ್ಗುಣವಿಶೇಷೈಃ ವಿಶಿಷ್ಟಃ ಉಪಾಸ್ಯೋ ಯದ್ಯಪಿ ಭವತಿ, ತಥಾಪಿ ಯಥಾಗುಣೋಪಾಸನಮೇವ ಫಲಾನಿ ಭಿದ್ಯಂತೇ | 'ತಂ ಯಥಾ ಯಥೋಪಾಸತೇ ತದೇವ ಭವತಿ' (ಶತ. ಬ್ರಾಹ್ಮಣ) ಇತಿ ಶ್ರುತೇಃ |**

**-ಸೂ.ಭಾ. ಅವತರಣಿಕ 1-1-12**

ಪರಮಾತ್ಮನಾದ ಈಶ್ವರನು ಒಬ್ಬನೇ ಆಗಿದ್ದ ಬೇರೆ ಬೇರೆ ಗುಣವಿಶೇಷಗಳಿಂದ ವಿಶಿಷ್ಟನೆಂದು ಉಪಾಸನೀಯವಾಗಿರುತ್ತಾನೆ. ಆದರೂ (ಫಲದಾತನು ಒಬ್ಬನೇ ಆದರೂ) ಗುಣೋಪಾಸನೆಗೆ ಅನುಸಾರವಾಗಿ ಫಲಗಳು ವಿಭಿನ್ನವಾಗುತ್ತವೆ. 'ಅವನನ್ನು ಹೇಗೆ ಹೇಗೆ ಉಪಾಸನೆ ಮಾಡುತ್ತಾರೋ ಹಾಗೆ ಹಾಗೆ ಅದೇ ಫಲವು ಬರುತ್ತದೆ' ಎಂದು ಶ್ರುತಿ ಹೇಳಿದೆ.

**143**

**ಸ ಹಿ ಸರ್ವಾಧ್ಯಕ್ಷಃ ಸೃಷ್ಟಿ ಸ್ಥಿತಿ ಸಂಹಾರಾನ್ವಿಚಿತ್ರಾನ್ವಿದಧದ್ದೇಶ ಕಾಲ ವಿಶೇಷಾಭಿಜ್ಞತ್ವಾತ್ಕರ್ಮಿಣಾಂ ಕರ್ಮಾನುರೂಪಂ ಫಲಂ ಸಂಪಾದಯತೀತ್ಯುಪ ಪದ್ಯತೇ**

**- ಸೂ.ಭಾ. 3-2-38**

ಆ ಪರಮೇಶ್ವರನು ಸರ್ವಾಧ್ಯಕ್ಷನಾದ್ದರಿಂದ ವಿಚಿತ್ರವಾದ ಸೃಷ್ಟಿಸ್ಥಿತಿ ಸಂಹಾರಗಳನ್ನು ಮಾಡತಕ್ಕವನಾಗಿದ್ದಾನೆ. ಆದ್ದರಿಂದ ಕರ್ಮ ಮಾಡಿದವರಿಗೆ ಕರ್ಮಾನುರೂಪವಾದ ಫಲವನ್ನು ಕೊಡುತ್ತಾನೆಂಬುದು ಉಪಪನ್ನವಾಗುತ್ತದೆ.

**144**

**ಏವಂ ಜೀವಕೃತ ಪ್ರಯತ್ನಾಪೇಕ್ಷ ಈಶ್ವರಸ್ತೇಷಾಂ ಶುಭಾಶುಭಂ ವಿದಧ್ಯಾದಿತಿ ಶ್ಲಿಷ್ಯತೇ |** **-ಸೂ.ಭಾ. 2-3-41**

ಹೀಗೆ ಜೀವನು ಮಾಡಿದ ಕರ್ಮಾನುಗುಣವಾಗಿ ಈಶ್ವರನು ಅವರಿಗೆ ಶುಭಾಶುಭಗಳನ್ನು ಕೊಡುತ್ತಾನೆಂಬುದು ಸಮಂಜಸವಾಗಿ ಹೊಂದುತ್ತದೆ.

**145**

**ನ ಹಿ ಈಶ್ವರದ್ವಯಂ ಸಂಭವತಿ | ಅನೇಕೇಶ್ವರತ್ವೇ ವ್ಯವಹಾರಾನುಪ ಪತ್ತೇಃ |**
**-ಗೀತಾ 2-43**

ಇಬ್ಬರು ಈಶ್ವರರಿರುವುದು ಆಗತಕ್ಕದ್ದಲ್ಲ. ಈಶ್ವರರು ಅನೇಕರಾದರೆ ವ್ಯವಹಾರವೇ ನಡೆಯದೇ ಹೋದೀತು.

ಈಶ್ವರನು ಸ್ವತಂತ್ರನಾಗಿರಲೇಬೇಕು. ಇಬ್ಬರು ಈಶ್ವರರಾದರೆ ಒಬ್ಬನು ಸೃಷ್ಟಿಯಲ್ಲಿ ತೊಡಗಿದಾಗ ಇನ್ನೊಬ್ಬನು ಪ್ರಳಯದಲ್ಲಿ ತೊಡಗಬಹುದು. ಹೀಗೆ ವಿರೋಧವು ಬರುವುದರಿಂದ ಜಗತ್ತಿಗೆ ಇಬ್ಬರು ಈಶ್ವರರಿಲ್ಲ.

**146**

**ತಸ್ಮಾದಸ್ತಿ ತದ್ ಬ್ರಹ್ಮ ಯದರ್ಥಾಃ ಕರಣ-ಪ್ರಾಣಾನಾದಿ-ಚೇಷ್ಟಾಃ | ತತ್ಕೃತ ಏವ ಚಾನಂದೋ ಲೋಕಸ್ಯ | ತೈತ್ತಿ. 3-7**

ಆದ್ದರಿಂದ ಬ್ರಹ್ಮವೆಂಬ ವಸ್ತು ಇದೆ. ಅದಕ್ಕಾಗಿಯೇ ಇಂದ್ರಿಯಗಳೂ ಪ್ರಾಣವಾಯುಗಳೂ ಕೆಲಸವನ್ನು ನಡೆಸುತ್ತವೆ. ಲೋಕದಲ್ಲಿ ಜನರಿಗಾಗುವ ಆನಂದವೂ ಬ್ರಹ್ಮದಿಂದಲೇ ಬಂದದ್ದು.

ಬ್ರಹ್ಮವು ಆನಂದಸ್ವರೂಪ. 'ಆನಂದೋ ಬ್ರಹ್ಮೇತಿ ವ್ಯಜಾನಾತ್' ಎಲ್ಲ ಜೀವಿಗಳೂ 'ಆನಂದಸ್ಯ ಮಾತ್ರಾ ಮುಪಜೀವಂತಿ'

**147**

**ಅಥ ಯೋऽನ್ಯಾಂ ದೇವತಾಮುಪಾಸ್ತೇ ಅನ್ಯೋऽಸಾವನ್ಯೋऽಹಮ ಸ್ಮೀತಿ ನ ಸ ವೇದ | ಯಥಾ ಪಶುಃ | ಬೃಹ 1-4-10**

ಇನ್ನು ಯಾರು ಬ್ರಹ್ಮಾತಿರಿಕ್ತವಾದ ಇನ್ನೊಂದು ದೇವತೆಯನ್ನು ಉದ್ದೇಶಿಸಿ ಆ ದೇವತೆ ಬೇರೆ-ನಾನು ಬೇರೆ ಎಂದು ಉಪಾಸನೆ ಮಾಡುತ್ತಾರೋ ಅವರಿಗೆ ಏನೂ ತಿಳಿಯದು. ಅವನು ಪಶುವಿದ್ದಂತೆ.



# ೭ ಆತ್ಮಾ ಸ್ವರೂಪ

'ಆತ್ಮಾ ಯತ್ನೋ ಧೃತಿರ್ಬುದ್ಧಿಃ ಸ್ವಭಾವೋ ಬ್ರಹ್ಮ ವರ್ಷ್ಮ ಚ' ಎಂದು ಅಮರಕೋಶದಲ್ಲಿದೆ. ಆತ್ಮಶಬ್ದಕ್ಕೆ ಪ್ರಯತ್ನ, ಧೈರ್ಯ, ಬುದ್ಧಿ, ಸ್ವಭಾವ, ಪರಮಾತ್ಮ, ದೇಹ-ಎಂದು ನಾನಾರ್ಥಗಳಿವೆ. ಅತ=ಸಾತತ್ಯಗಮನೇ ಎಂದಿರುವ ಅತ್ ಧಾತುವಿನಿಂದ ಇದು ವ್ಯುತ್ಪನ್ನವಾದದ್ದು.. ಸತತವಾಗಿ ಗತಿಶೀಲವಾದದ್ದು ಎಂದು ಆತ್ಮಶಬ್ದದ ಸಾಮಾನ್ಯವಾದ ಅರ್ಥ. ಉಪನಿಷತ್ತುಗಳಲ್ಲಿ ಆತ್ಮಶಬ್ದಕ್ಕೆ ಪ್ರತ್ಯಗಾತ್ಮನೆಂದರ್ಥ. ಲೋಕದಲ್ಲಿ 'ತಾನು, ನಾನು' ಅರ್ಥದಲ್ಲಿ ಇದರ ಪ್ರಯೋಗ ಉಂಟು. ಈ ಪ್ರಯೋಗವೇ 'ನಾನು ಪರಮಾತ್ಮ' ಎಂಬ ಸಹಜವಾದ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತದೆ.

ನಾನು ಹೋಗುತ್ತೇನೆ, ನಾನು ನೋಡುತ್ತೇನೆ, ನಾನು ಆಲೋಚಿಸುತ್ತಾನೆ, ಇದು ನನ್ನ ದೇಹ, ನನ್ನ ಕಣ್ಣು, ನನ್ನ ಮನಸ್ಸು-ಈ ರೀತಿಯಾಗಿ ಮನುಷ್ಯನು ವ್ಯವಹರಿಸುತ್ತಲೇ ಇದ್ದಾನೆ. ಒಮ್ಮೆ ದೇಹವನ್ನು, ಒಮ್ಮೆ ಇಂದ್ರಿಯವನ್ನು, ಒಮ್ಮೆ ಮನಸ್ಸನ್ನು 'ನಾನು' ಎಂದುಕೊಳ್ಳುತ್ತಾನೆ. 'ನಾನು ಹಿಂದಿನ ಜನ್ಮದಲ್ಲಿ ಯಾವ ಕರ್ಮವನ್ನು ಮಾಡಿದ್ದೆನೋ' ಎಂದುಕೊಳ್ಳುವಾಗ ಈ ದೇಹಾದಿಗಳಿಗಿಂತ ಅತಿರಿಕ್ತನಾದ ಆತ್ಮನನ್ನು ಗುರುತಿಸುತ್ತಾನೆ. ಆದರೆ ತನ್ನ ನಿಜಸ್ವರೂಪವು ತನಗೇ ಗೊತ್ತಿಲ್ಲ! ಇದಕ್ಕಿಂತ ಅದ್ಭುತ ಇನ್ನು ಯಾವುದಿದ್ದೀತು?

**ಆತ್ಮಾನಂ ಚೇದ್ವಿಜ್ಞಾನೀಯಾತ್ ಅಯಮಸ್ಮೀತಿ ಪೂರುಷಃ |**
**ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಜ್ವರೇತ್ ||**

"ನಾನು ಇಂಥವನು ಎಂದು ಮನುಷ್ಯನು ಚೆನ್ನಾಗಿ ತಿಳಿದುಕೊಂಡದ್ದೇ ಆದರೆ ಯಾವುದನ್ನು ಬಯಸುತ್ತ ಯಾವ ಕಾಮನೆಗಾಗಿ ಈ ಶರೀರವನ್ನು ಅನುಸರಿಸಿ ನರಳುತ್ತ ಇದ್ದಾನು?" ಎಂದು ಶ್ರುತಿಯು ಸ್ಪಷ್ಟವಾಗಿ ತಿಳಿಸುತ್ತದೆ. "ಆತ್ಮಾವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ" ಎಂದು ಎಚ್ಚರಿಸಿ ಹಿತೋಪದೇಶ ಮಾಡುತ್ತದೆ. ಸಮಸ್ತ ವೇದಾಂತವೂ ಈ ಆತ್ಮವಿದ್ಯೆಗಾಗಿಯೇ ಹೊರಟದ್ದು. 'ಅಧ್ಯಾತ್ಮ ವಿದ್ಯಾ ವಿದ್ಯಾನಾಮ್' ಎಂದು ಶ್ರೀಕೃಷ್ಣನು ತಿಳಿಸಿ ತಾನೇ ಅಧ್ಯಾತ್ಮ ವಿದ್ಯಾಸ್ವರೂಪನಾಗಿದ್ದೇನೆಂದು ತಿಳಿಸಿದ್ದಾನೆ. ವಿದ್ಯೆಯೆಂದರೆ ಜ್ಞಾನ. ಜ್ಞಾನವೇ ಆತ್ಮ. ಮನಸ್ಸಿನಿಂದಲೂ ಇಂದ್ರಿಯಗಳಿಂದಲೂ ದೊರೆಯತಕ್ಕದ್ದು ವೃತ್ತಿಜ್ಞಾನ. ನಿಜವಾದ ಜ್ಞಾನವಲ್ಲ. ಜ್ಞಾನದ ಮೂಲಸ್ರೋತವೂ ಆತ್ಮನೇ. "ಸತ್ಯಂ ಜ್ಞಾನಮನಂತಂ ಬ್ರಹ್ಮ", "ಪ್ರಜ್ಞಾನಂ ಬ್ರಹ್ಮ" ಮುಂತಾದ ಶ್ರುತಿ ವಾಕ್ಯಗಳು ಆತ್ಮನು ಜ್ಞಾನಸ್ವರೂಪನೆಂಬುದನ್ನು ತಿಳಿಸಿಕೊಡುತ್ತವೆ. ಇರತಕ್ಕವನು ಒಬ್ಬನೇ. ಆತ್ಮ ಜೀವಾತ್ಮರು ಉಪಾಧಿವಶದಿಂದ

ಅನಂತರಾಗಿ ತೋರುತ್ತಾರೆ. ಜಗತ್ತು ಇಂದ್ರಜಾಲದಂತೆ ಕಲ್ಪಿತ. ಅವಿದ್ಯಾ ಸಂಬಂಧದಿಂದ ಜೀವಾತ್ಮನೆಂದೂ ಮಾಯಾಸಂಬಂಧದಿಂದ ಈಶ್ವರನೆಂದು ಸ್ವತಃ ನಿತ್ಯಶುದ್ಧಮುಕ್ತನಾಗಿದ್ದು ತಾನೇ ತಾನಾಗಿ ವಿರಾಜಿಸುತ್ತಾನೆ. ಆತ್ಮನು ಸ್ವಯಂ ಪ್ರಕಾಶನೂ ಸತ್-ಚಿತ್-ಆನಂದಸ್ವರೂಪನೂ ಆಗಿದ್ದಾನೆ. ಕರ್ತೃತ್ವ, ಭೋಕ್ತೃತ್ವ ಮೊದಲಾದವು ಚಿತ್ತಕ್ಕೆ ಇವೆ. ಆ ಚಿತ್ತವೂ ಆತ್ಮಜ್ಯೋತಿಯ ಬೆಳಕಿನಿಂದ ಚಿದಾಭಾಸವೆನಿಸಿ ಜೀವವೆನಿಸಿಕೊಳ್ಳುತ್ತದೆ. ಪ್ರಮಾಣ, ಪ್ರಮೇಯ ಮೊದಲಾದ ವ್ಯವಹಾರಗಳಿಗಿಂತ ಮೊದಲೇ ಆತ್ಮನಿರುತ್ತಾನೆ. ಅವನು ಪ್ರಮಾಣ ಗೋಚರನಲ್ಲವಾದ್ದರಿಂದ ಅಪ್ರಮೇಯನೆನಿಸಿದ್ದಾನೆ. ಆತ್ಮಸಂವೇದ್ಯನೆಂದರೆ ಸ್ವಯಂಪ್ರಕಾಶನೆಂದು ಅಭಿಪ್ರಾಯ.

**148**

**ಆತ್ಮವಿಶೇಷಂ ಪ್ರತಿ ವಿಪ್ರತಿಪತ್ತೇಃ |** **-ಸೂ.ಭಾ. 1-1-1**

ಆತ್ಮಸ್ವರೂಪವಿಶೇಷವೇನೆಂಬುದರ ವಿಷಯವಾಗಿ ವಿಪ್ರತಿಪತ್ತಿ (ನಾನಾ ಬಗೆಯ ಊಹಾಪೋಹ) ಇದೆ.

'ನಾನು ಇದ್ದೇನೆ' ಎಂಬ ಸಾರ್ವತ್ರಿಕ ಅನುಭವದಿಂದ ಆತ್ಮನು ಇದ್ದಾನೆ ಎಂಬುದು ನಿಶ್ಚಿತವಾಗಿದೆ. ಆದರೆ ಈ ಸ್ವರೂಪವೇನು? ದೇಹವೇ ಆತ್ಮನೇ? ಇಂದ್ರಿಯಗಳೇ? ಮನಸ್ಸೇ? ಪ್ರಾಣವೇ? ಇತ್ಯಾದಿ ಸಂದೇಹಗಳು ಮತ್ತು ಭಿನ್ನಾಭಿಪ್ರಾಯಗಳೂ ಇವೆ. ಆತ್ಮಸ್ವರೂಪವನ್ನು ನಿಶ್ಚಯಿಸಿ ತಿಳಿಸಿಕೊಡತಕ್ಕದ್ದು ಶಾಸ್ತ್ರ-ವೇದ.

**149**

**ಆತ್ಮಾ ಆಪ್ನೋತೇರತ್ತೇರತತೇರ್ವಾ ಪರಃ ಸರ್ವಜ್ಞಃ ಸರ್ವಶಕ್ತಿಃ ಅಶನಾಯಾದಿ-ಸರ್ವಸಂಸಾರಧರ್ಮವರ್ಜಿತೋ ನಿತ್ಯ-ಶುದ್ಧ-ಬುದ್ಧ-ಮುಕ್ತ ಸ್ವಭಾವೋ ಅಜೋऽಮೃತೋऽಭಯೋऽದ್ವಯಃ |** **-ಐತ 1-1-1**

ಆತ್ಮ ಶಬ್ದವು 'ಆಪ್' ಧಾತುವಿನಿಂದ, 'ಅದ್' ಅಥವಾ 'ಅತ್' ಧಾತುವಿನಿಂದ ನಿಷ್ಪನ್ನವಾಗಿದೆ. ಪರನೂ ಸರ್ವಜ್ಞನೂ, ಸರ್ವಶಕ್ತಿಯೂ, ಹಸಿವೇ ಮೊದಲಾದ ಸಮಸ್ತ ಧರ್ಮವರ್ಜಿತನೂ, ನಿತ್ಯಶುದ್ಧಬುದ್ಧಮುಕ್ತ ಸ್ವಭಾವನೂ, ಅಜನೂ, ಮುಪ್ಪಿಲ್ಲದವನೂ, ಅಮೃತನೂ, ಅಭಯನೂ, ಅದ್ವಯನೂ ಆದವನೇ ಆತ್ಮ.

**150**

**ಅನಪಾಯೋಪಜನಧರ್ಮಕ ಚೈತನ್ಯಮಾತ್ರೈವ ನಾಮರೂಪಾದ್ಯುಪಾಧಿ ಧರ್ಮೈಃ**

**ಪ್ರತ್ಯವಭಾಸತೇ ||** **-ಪ್ರಶ್ನ 6-2**

ನಾಶವಾಗಲಿ ಜನ್ಮವಾಗಲಿ ಇಲ್ಲದೆ ನಿತ್ಯವಾದ ಚೈತನ್ಯವೆನಿಸಿದ ಆತ್ಮವೇ ನಾಮ, ರೂಪಾದಿ ಉಪಾಧಿಧರ್ಮಗಳಿಂದ ನಮಗೆ ತೋರಿಕೊಳ್ಳುತ್ತದೆ.

ಸತ್ಯಂ ಜ್ಞಾನಮನಂತಂ ಬ್ರಹ್ಮ, ಪ್ರ ಜ್ಞಾನಂ ಬ್ರಹ್ಮ- ಇತ್ಯಾದಿ ಶ್ರುತಿಗಳಿಂದ ನಿತ್ಯವಾದ ಬ್ರಹ್ಮ ಒಂದೇ ಇದೆಯೆಂದು ಗೊತ್ತಾಗುತ್ತದೆ. ಘಟ, ಪಟ, ವೃಕ್ಷ, ಮನುಷ್ಯ, ಮೃಗ- ಇತ್ಯಾದಿ ಸಮಸ್ತ ವಸ್ತುಗಳೂ ಮಾಯಾಕಲ್ಪಿತವಾಗಿವೆ. ಅವು ಆತ್ಮವಸ್ತುವಿಗೆ ಉಪಾಧಿಗಳು. ಅವುಗಳು ಆತ್ಮನಲ್ಲಿಯೇ ಕಲ್ಪಿತವಾಗಿವೆ. ಆದ್ದರಿಂದಲೇ 'ಸರ್ವಂ ಖಲ್ವಿದಂ ಬ್ರಹ್ಮ' ಮುಂತಾದ ಶ್ರುತಿವಾಕ್ಯಗಳು ಅರ್ಥವತ್ತಾದವು.

**151**

**ನ ತಾರ್ಕಿಕಪರಿಕಲ್ಪಿತಾತ್ಮವತ್ ಪುರುಷಬುದ್ಧಿ ಪ್ರಮಾಣಗಮ್ಯಃ |**
**-ಮಾಂಡೂಕ್ಯ 3-11**

ಉಪನಿಷತ್ತುಗಳಲ್ಲಿ ಉಕ್ತನಾದ ಆತ್ಮನು ತಾರ್ಕಿಕರಿಂದ ಕಲ್ಪಿತನಾದ ಆತ್ಮನಂತೆ ಪುರುಷಬುದ್ಧಿಯಿಂದ ಸ್ವೇಚ್ಛೆಯಾಗಿ ಗಮ್ಯನಾಗತಕ್ಕವನಲ್ಲ.

ಆತ್ಮನು ವೇದವಾಕ್ಯಗಳಿಂದ ಮತ್ತು ಸ್ವಾನುಭೂತಿಯಿಂದ ಗಮ್ಯನೇ ಹೊರತು ತರ್ಕಗಮ್ಯನಲ್ಲ. ತಾರ್ಕಿಕರು ಆತ್ಮನು ವಿಭುವೆಂದು ಒಪ್ಪಿದರೂ ಅವನು ಜ್ಞಾನಕ್ಕೆ ಆಶ್ರಯನೆಂದೂ, ಕರ್ತೃವೆಂದೂ ಹೇಳುತ್ತಾರೆ. ಅಲ್ಲದೆ ಪರಮಾತ್ಮ-ಜೀವಾತ್ಮ ಎಂದು ಆತ್ಮನಲ್ಲಿ ಭೇದವನ್ನು ಹೇಳಿ ಅನೇಕ ಸ್ವತಂತ್ರ ಜೀವಾತ್ಮರನ್ನೊಪ್ಪುತ್ತಾರೆ ಇದಕ್ಕೆ ವೇದದ ಆಧಾರವಿಲ್ಲ ಎಂದು ಅಭಿಪ್ರಾಯ.

**152**

**ಯಥಾತ್ಮ್ಯಂ ಚಾऽತ್ಮನಃ ಶುದ್ಧತ್ವಾಪಾಪವಿದ್ಧತ್ವೈಕತ್ವ ನಿತ್ಯಾತ್ವಾಶರೀರತ್ವಸರ್ವಗತತ್ವಾದಿ ವಕ್ಷ್ಯಮಾಣಮ್ |** **-ಈಶ. ಪೀಠಿಕೆ (1)**

ಆತ್ಮನು ಪರಮಾರ್ಥ ಸ್ವರೂಪವೆಂದರೆ-ಮುಂದೆ ಹೇಳುವ ಶುದ್ಧತ್ವ, ಪಾಪ ಸಂಬಂಧರಾಹಿತ್ಯ, ಏಕತ್ವ, ನಿತ್ಯತ್ವ, ಶರೀರರಾಹಿತ್ಯ, ಸರ್ವಗತತ್ವ ಮುಂತಾದದ್ದು.

**153**

**ತಸ್ಮಾತ್ ನಾಽತ್ಮನಃ ಸ್ವತೋ ಬದ್ಧಮುಕ್ತಜ್ಞಾನಕೃತೋ ವಿಶೇಷೋಽಸ್ತಿ | ಸರ್ವದಾ ಸಮೈಕರಸ ಸ್ವಾಭಾವ್ಯಾಭ್ಯುಪಗಮಾತ್| -ಬೃಹ. 4-4-6**

ಆತ್ಮನು ಯಾವಾಗಲೂ ಸಮನಾಗಿಯೂ ಏಕರಸನಾಗಿಯೂ ಇರುವ ಸ್ವಭಾವದವನೆಂದು ಒಪ್ಪಿಕೊಂಡಿದ್ದೇವೆ. ಆದ್ದರಿಂದ ಆತ್ಮನಿಗೆ ಸ್ವತಃ ಬದ್ಧತ್ವ, ಮುಕ್ತತ್ವ, ಜ್ಞಾನ-ಅಜ್ಞಾನ ಎಂಬ ನಿಮಿತ್ತಗಳಿಂದ ಯಾವ ಭೇದವೂ ಇಲ್ಲ.

**154**

**ತಸ್ಮಾನ್ನಿತ್ಯಾಲುಪ್ತವಿಜ್ಞಾನಸ್ವರೂಪಜ್ಯೋತಿರಾತ್ಮಾ ಬ್ರಹ್ಮೇತ್ಯ-ಯಮರ್ಥಃ ಸರ್ವಬೋಧಬೋದ್ಧೃತ್ವೇ ಆತ್ಮನಃ ಸಿದ್ಧ್ಯತಿ ನಾನ್ಯಥಾ| -ಕೇನ 2-3**

ಯಾವಾಗಲೂ ವಿಜ್ಞಾನ ಸ್ವರೂಪಕ್ಕೆ ಚ್ಯುತಿಯಿಲ್ಲ. ಆತ್ಮವು ಸದಾ ವಿಜ್ಞಾನ ಸ್ವರೂಪ ಜ್ಯೋತಿಯೇ ಆಗಿರುತ್ತದೆ. ಅಂತಹ ಜ್ಯೋತಿಯಾದ ಆತ್ಮವೇ ಬ್ರಹ್ಮ ಎಂಬ ಸಿದ್ಧಾಂತವು, ಆತ್ಮನು ಸರ್ವಬೋಧಗಳಿಗೂ ಬೋದ್ಧೃವಾದ ದೃಕ್ ಎಂದು ಅಂಗೀಕರಿಸಿದರೆ ಮಾತ್ರ ಸಿದ್ಧಿಸುತ್ತದೆ. ಬೇರಿ ರೀತಿಯಲ್ಲಿ ಸಿದ್ಧಿಸುವುದಿಲ್ಲ.

**155**

**ಯದ್ ಹಿ ಇನ್ದ್ರಿಯಗೋಚರಂ ತತ್ ಚಿನ್ತಾವಿಷಯತ್ವಮಾಪದ್ಯತೇ| ಅಯಂ ತು ಆತ್ಮಾ ಅನಿನ್ದ್ರಿಯಗೋಚರತ್ವಾತ್ ಅಚಿನ್ತ್ಯಃ| -ಗೀತಾ 1-25**

ಯಾವುದು ಇಂದ್ರಿಯಕ್ಕೆ ಗೋಚರವಾಗುತ್ತದೆಯೋ ಅದು ಜ್ಞಾನಕ್ಕೆ ವಿಷಯವಾಗಿರುತ್ತದೆ. ಈ ಆತ್ಮನಾದರೋ ಇಂದ್ರಿಯಕ್ಕೆ ಗೋಚರನಲ್ಲವಾದ್ದರಿಂದ ಅಂಚಿತ್ಯನು.

**- 156 -**

**ನಿರತಿಶಯಂ ಚ ಅಸ್ಯ ಸ್ವಯಂಜ್ಯೋತಿಷ್ಟ್ವಮ್ | ಸರ್ವಾವಭಾಸಕತ್ವಾತ್ ಸ್ವಯಮನ್ಯಾನವಭಾಸ್ಯತ್ವಾಚ್ಚ| -ಬೃಹ. 4-3-7**

ಆತ್ಮನು ಸರ್ವಪ್ರಕಾಶಕನೂ ಅನ್ಯರಿಂದ ಅಪ್ರಕಾಶ್ಯನೂ ಆದ್ದರಿಂದ ಈತನ

ಸ್ವಯಂಜ್ಯೋತಿಷ್ಟ್ವವು ನಿರತಿಶಯವಾದದ್ದು.

**157**

**ಸ್ವಾತ್ಮಾ ಹಿ ನಾಮ ಆತ್ಮನಃ ಪ್ರಕಾಶ ಏವ ಭವತಿ |** **-ಗೀತಾ 6-30**

ತನ್ನ ಆತ್ಮನು ತನಗೆ ತೋರಿಕೊಂಡು ಪ್ರಕಾಶನಾಗಿಯೇ ಇರುತ್ತಾನೆ.

**158**

**ಆತ್ಮಶಬ್ದಸ್ಯ ನಿರುಪಪದಸ್ಯ ಪ್ರತ್ಯಗಾತ್ಮನಿ ಗವಾದಿಶಬ್ದವನ್ನಿರೂಢತ್ವಾತ್ |**
**-ಛಾಂ. 6-8-7**

ನಿರುಪಪದವಾದ-ಎಂದರೆ ಇನ್ನೊಂದು ಶಬ್ದದೊಡನೆ ಕೂಡಿರದ 'ಆತ್ಮ' ಶಬ್ದವು ಪ್ರತ್ಯಗಾತ್ಮ ಎಂಬ ಅರ್ಥದಲ್ಲಿ ರೂಢವಾಗಿದೆ, ಗೋಶಬ್ದವು 'ಹಸು' ಎಂಬ ಅರ್ಥದಲ್ಲಿ ರೂಢವಾಗಿರುವಂತೆ.

**159**

**ಆತ್ಮಾ ತು ಪ್ರಮಾಣಾದಿವ್ಯವಹಾರಸ್ಯ ಆಶ್ರಯತ್ವಾತ್ ಪ್ರಾಗೇವ ಪ್ರಮಾಣವ್ಯವಹಾರಾತ್ ಸಿಧ್ಯತಿ |** **-ಸೂ.ಭಾ. 2-3-7**

ಪ್ರಮಾಣಪ್ರಮೇಯಾದಿ ವ್ಯವಹಾರಗಳಿಗೆ ಆತ್ಮನು ಆಶ್ರಯನಾಗಿದ್ದಾನೆ. ಆದ್ದರಿಂದ ಪ್ರಮಾಣಗಳಿಗಿಂತ ಮೊದಲೇ ಆತ್ಮನು ಇದ್ದಾನೆಂದು ಗೊತ್ತಾಗುತ್ತದೆ.

ನಾನು ಇದ್ದೇನೆ ಎಂಬ ಅನುಭವ ಎಲ್ಲರಿಗೂ ಇದೆ. ಇಲ್ಲಿ ನಾನು ಎಂದು ಆತ್ಮನೇ ಆಗಿರುತ್ತಾನೆ. 'ನಾನು' ಎಂಬುದು ಮೊದಲೇ ಸಿದ್ಧವಾದ್ದರಿಂದ ಇತರ ವಿಚಾರಗಳಿಗೆ ಪ್ರಮಾಣಾನ್ವೇಷಣೆ ನಡೆಯುತ್ತದೆ. ಪ್ರಮಾಣದಿಂದ ಆತ್ಮನನ್ನು ಸಿದ್ಧಿಸಬೇಕಾಗಿಲ್ಲ.

**160**

**ಅಯಸ್ಕಾಂತವದ್ ರೂಪಾದಿವಚ್ಚ ಪ್ರವೃತ್ತಿರಹಿತಸ್ಯಾಪಿ ಪ್ರವರ್ತಕತ್ವೋಪಪತ್ತೇಃ |**
**- ಸೂ.ಭಾ. 2-2-2**

(ಆತ್ಮನು ವಿಜ್ಞಾನ ಸ್ವರೂಪನಾದ್ದರಿಂದ) ಪ್ರವೃತ್ತಿರಹಿತನಾದರೂ ಸೂಜಿಗಲ್ಲಿನಂತೆಯೂ ರೂಪಾದಿಗಳಂತೆಯೂ ಪ್ರವರ್ತಕನಾಗುವುದು ಉಪಪನ್ನವೇ ಸರಿ.

ಸೂಜಿಗಲ್ಲು ತಟಸ್ಥವಾಗಿದ್ದರೂ ಕಬ್ಬಿಣವನ್ನು ಪ್ರವರ್ತಿಸುತ್ತದೆಯೆಂಬುದು ಕಂಡುಬಂದಿದೆ. ರೂಪರಸಾದಿಗಳು ತಟಸ್ಥವಾಗಿದ್ದರೂ ಇಂದ್ರಿಯಾದಿಗಳನ್ನು ಚೋದಿಸುತ್ತವೆಯೆಂದು ಸಾಂಖ್ಯರು ಹೇಳಿದ್ದಾರೆ. ಇದು ಅನುಭವಸಿದ್ಧವೂ ಹೌದು.

**161**

**ನ ಹಿ ಆಕಾಶವತ್ ಸರ್ವಗತಸ್ಯ ಗತಿರಾಗತಿಃ ಪ್ರತಿಷ್ಠಾ ವಾಽನ್ಯಥಾ ಸಂಭವತಿ|**
**-ಮುಂಡಕ2-2-7**

ಆಕಾಶದಂತೆ ಸರ್ವಗತವಾದ ಆತ್ಮನಿಗೆ ಹೋಗುವುದಾಗಲಿ, ಬರುವುದಾಗಲಿ, ಒಂದು ಆಶ್ರಯದಲ್ಲಿ ಇದ್ದುಕೊಂಡಿರುವುದಾಗಲಿ ಬೇರೆ ವಿಧವಾಗಿ ಹೊಂದುವುದೇ ಇಲ್ಲ.

ಹೃದಯದಲ್ಲಿ ಆತ್ಮನು ಪ್ರತಿಷ್ಠಿತನಾಗಿ ಇದ್ದಾನೆ. ಹೃದಯದಲ್ಲಿ ಇದ್ದಾನೆ ಎಂದರೆ, ಹೃದಯದಲ್ಲಿ ಪ್ರತಿಷ್ಠಿತನಾಗಿರುವಂತೆ ಅಲ್ಲಿ ಉಪಲಬ್ಧನಾಗುತ್ತಾನೆ ಎಂದರ್ಥ.

**162**

**ನ ಸ್ವತಃ ಆತ್ಮನಃ ಸಂಸಾರಿತ್ವಮ್| ಅಲಕ್ತಕಾದ್ಯುಪಾಧಿ ಸಂಯೋಗ ಜನಿತರಕ್ತಸ್ಫಟಿಕಾದಿ ಬುದ್ಧಿವತ್ ಭ್ರಾಂತಮೇವ ನ ಪರಮಾರ್ಥತಃ |**
**-ಸೂ.ಭಾ. 2-1-20**

ಸ್ವತಃ ಆತ್ಮನಿಗೆ ಸಂಸಾರವಿಲ್ಲ. ಆತ್ಮನು ಸಂಸಾರಿಯೆಂಬುದು ಭ್ರಾಂತಿಯೇ ಸರಿ. ಕೆಂಪು ಅರಗೇ ಮೊದಲಾದ ಉಪಾಧಿಯಿಂದ ಕೆಂಪಾಗಿ ಕಾಣಿಸುವ ಸ್ಫಟಿಕವೇ ಕೆಂಪಾಗಿದೆ ಎಂದು ತಿಳಿದುಕೊಂಡ ಹಾಗೆ ಅದು.

**163**

**ನ ಹಿ ಬುದ್ಧೇರ್ಗುಣೈರ್ವಿನಾ ಕೇವಲಸ್ಯಾತ್ಮನಃ ಸಂಸಾರಿತ್ವಮಸ್ತಿ | ಬುದ್ಧ್ಯುಪಾಧಿ ಧರ್ಮಾಧ್ಯಾಸನಿಮಿತ್ತಂ ಹಿ ಕರ್ತೃತ್ವಭೋಕ್ತೃತ್ವಾದಿ ಲಕ್ಷಣಂ ಸಂಸಾರಿತ್ವಮ್ |**
**- ಸೂ.ಭಾ. 2-3-29**

(ಅಧ್ಯಸ್ತವಾದ) ಬುದ್ಧಿಗುಣಗಳಿಂದಲ್ಲದೆ ಕೇವಲಾತ್ಮನಿಗೆ ಸಂಸಾರಿತ್ವವಿಲ್ಲ. (ಅಕರ್ತೃವೂ ಅಭೋಕ್ತೃವೂ ನಿತ್ಯಮುಕ್ತನೂ ಆಗಿರುವ) ಆತ್ಮನಿಗೆ ಅಧ್ಯಸ್ತವಾದ

ಬುದ್ಧಿಗುಣಗಳ ಉಪಾಧಿನಿಮಿತ್ತದಿಂದ ಕರ್ತೃತ್ವ ಭೋಕ್ತೃತ್ವಾದಿರೂಪವಾದ ಸಂಸಾರಿತ್ವವು ಕಂಡು ಬರುತ್ತದೆ.

**164**

**ನ ಹಿ ಕೇವಲಸ್ಯ ಆತ್ಮನೋ ಭೋಕ್ತೃತ್ವಮಸ್ತಿ| ಬುದ್ಧ್ಯಾದ್ಯುಪಾಧಿ ಕೃತಮೇವ ತಸ್ಯ ಭೋಕ್ತೃತ್ವಮ್ ||**

**-ಕಠ. 1-3-4**

ಕೇವಲಾತ್ಮನಿಗೆ ಭೋಕ್ತೃತ್ವವಿಲ್ಲ. ಅವನು ಭೋಕ್ತೃವೆನ್ನುವುದು ಬುದ್ಧಿ ಮುಂತಾದ ಉಪಾಧಿಗಳಿಂದಲೇ ಆದದ್ದು.

**165**

**ನ ಚ ಆತ್ಮನಃ ಸಂಸಾರಿತ್ವಂ ಅವಿದ್ಯಾಧ್ಯಸ್ತತ್ವಾದಾತ್ಮನಿ ಸಂಸಾರಸ್ಯ |**

**-ಛಾಂ. 8-12-1**

ಆತ್ಮನಿಗೆ ಸಂಸಾರಿತ್ವ ಬರುವುದಿಲ್ಲ. ಏಕೆಂದರೆ ಆತ್ಮನಲ್ಲಿ ಸಂಸಾರವು ಅವಿದ್ಯೆಯಿಂದ ಅಧ್ಯಸ್ತವಾಗಿದೆ.

ಒಬ್ಬನೇ ಆತ್ಮನಾದರೆ-ಬೇರೆ ಜೀವನಿಲ್ಲವೆಂದಾದರೆ-ಆತ್ಮನೇ ಸಂಸಾರಿಯಾಗಬೇಕಾಗುತ್ತದೆ ಎಂಬ ಆಕ್ಷೇಪಕ್ಕೆ ಇದು ಉತ್ತರ.

**166**

**ನ ಹಿ ನಿರಾತ್ಮಕಂ ಕಿಂಚಿತ್ ಭೂತಂ ವ್ಯವಹಾರಾಯ ಅವಕಲ್ಪತೇ ||**

**-ಗೀತಾ 9-4**

ಆತ್ಮವಿಲ್ಲದೆ ಯಾವ ಭೂತವೂ ವ್ಯವಹಾರವನ್ನು ನಡೆಸುವುದಕ್ಕೆ ಉಪಯುಕ್ತವಾಗುವುದಿಲ್ಲ.

ಆತ್ಮನು ಸರ್ವಾಧಾರನಾದ್ದರಿಂದ ಆತ್ಮನಿಲ್ಲದೆ ಯಾವ ಭೂತವಸ್ತುವೂ ಇರಲು ಶಕ್ಯವಿಲ್ಲ. ಅದರ ಉಪಯೋಗವೆಲ್ಲ ಆತ್ಮಶಕ್ತಿಯಿಂದ ಆಗತಕ್ಕದ್ದು. ಹೂ ಗಂಧವನ್ನು ಕೊಡಬೇಕಾದರೆ ಆತ್ಮನಿರಬೇಕು. ರೂಪವನ್ನು ತೋರಿಸಬೇಕಾದರೆ ಆತ್ಮನಿರಬೇಕು. ಬೆಂಕಿ ಸುಡಬೇಕಾದರೆ ಆತ್ಮನಿರಬೇಕು. ಆತ್ಮರಹಿತವಾದ ವಸ್ತುವೇ ಇಲ್ಲ. ಯಾವುದು ಎಲ್ಲಿ ತೋರಿಕೊಂಡರೂ ಅದು ಚೈತನ್ಯ ಬಲದಿಂದಲೇ.

**167**

**ಆತ್ಮಜ್ಯೋತಿಷೋಽನುಗ್ರಹೇಣೈವ ಹಿ ಸರ್ವದಾ ಸರ್ವಃ ಸಂವ್ಯವಹಾರಃ |**
**-ಬೃಹ. 4-3-7**

ಆತ್ಮಜ್ಯೋತಿಯ ಅನುಗ್ರಹದಿಂದಲೇ ಯಾವಾಗಲೂ ಎಲ್ಲಾ ಬಗೆಯ ವ್ಯವಹಾರವೂ ನಡೆಯುತ್ತದೆ.

**168**

**ಆತ್ಮತ್ವಾದೇವ ಚ ಸರ್ವೇಷಾಂ ನ ಹೇಯೋ ನಾಪ್ಯುಪಾದೇಯಃ |**
**-ಸೂ.ಭಾ. 1-4-4**

ಸಾಕ್ಷಿಯು ಆತ್ಮನಾಗಿರುವುದರಿಂದಲೇ ಸರ್ವರಿಗೂ ಆತ್ಮನು ಹೇಯನೂ ಅಲ್ಲ ಉಪಾದೇಯನೂ ಅಲ್ಲ.

ತಾನೇ ಆತ್ಮನಾಗಿರುವುದರಿಂದ ತನ್ನನ್ನು ತ್ಯಜಿಸುವುದಕ್ಕಾಗಲೀ ಸ್ವೀಕರಿಸುವುದಕ್ಕಾಗಲೀ ಬರುವುದಿಲ್ಲ.

**169**

**ನ ಕಶ್ಚಿತ್ ಆತ್ಮಾನಂ ವಿನಾಶಯಿತುಂ ಶಕ್ನೋತಿ ಈಶ್ವರೋಽಪಿ | ಆತ್ಮಾ ಹಿ ಬ್ರಹ್ಮ|ಸ್ವಾತ್ಮನಿ ಚ ಕ್ರಿಯಾವಿರೋಧಾತ್| -ಗೀತಾ 2-17**

ಈ ಆತ್ಮನನ್ನು ನಾಶಮಾಡುವುದಕ್ಕೆ ಯಾರಿಂದಲೂ ಆಗದು. ಈಶ್ವರನಿಗೂ ಸಹ ಶಕ್ಯವಿಲ್ಲ. ಏಕೆಂದರೆ, ಆತ್ಮವೇ ಬ್ರಹ್ಮವಾಗಿದೆ. ತನ್ನ ವಿಷಯದಲ್ಲಿ ತನ್ನ ಕ್ರಿಯೆ ನಡೆಯುವುದು ವಿರುದ್ಧವಾದದ್ದು.

ತಾನು ಮಾಡುವ ಕ್ರಿಯೆ ಇನ್ನೊಂದರ ಮೇಲೆ ನಡೆಯುತ್ತದೆ. ತನ್ನ ಮೇಲೆಯೇ ನಡೆಯುವುದಿಲ್ಲ. ಬೆರಳಿನ ತುದಿಯಿಂದ ಇನ್ನೊಂದು ಬೆರಳನ್ನು ಮುಟ್ಟಬಹುದು, ತನ್ನ ತುದಿಯನ್ನೇ ಮುಟ್ಟಲಾಗುವುದಿಲ್ಲ. ತನ್ನ ಬೆನ್ನನ್ನು ಹತ್ತಿ ತಾನೇ ಕುಣಿಯಲಾಗುವುದಿಲ್ಲ.

**170**

**ಆತ್ಮನಃ ಸತ್ತಾಮಾತ್ರ ಏವ ಜ್ಞಾನಕರ್ತೃತ್ವಂ ನ ತು ವ್ಯಾಪೃತತಯಾ ||**

**-ಛಾಂ. 8-12-5**

ಆತ್ಮನಿಗೆ ಜ್ಞಾನಕರ್ತೃತ್ವ ಎನ್ನುವುದು ಕೇವಲ ಇರುವಿಕೆ ಮಾತ್ರದಿಂದ, ಕ್ರಿಯೆಯಲ್ಲಿ ತೊಡಗುವುದರಿಂದ ಅಲ್ಲ.

**171**

**ನ ಹಿ ಅಂತಃಕರಣಮ್ ಅಂತರೇಣ ಚೈತನ್ಯಜ್ಯೋತಿಷೋ ದೀಪಿತಂ ಸ್ವವಿಷಯ ಸಂಕಲ್ಪಾಧ್ಯವಸಾಯಾದಿ ಸಮರ್ಥಂ ಸ್ಯಾತ್ |** **-ಕೇನ 1-2**

ಅಂತಃಕರಣವು ಚೈತನ್ಯಜ್ಯೋತಿಯಿಂದ ದೀಪಿತವಾಗದೆ ಇದ್ದರೆ, ತನ್ನ ಕ್ರಿಯೆಯಾದ ಸಂಕಲ್ಪ ನಿಶ್ಚಯಾದಿಗಳನ್ನು ಮಾಡಲು ಅದು ಸಮರ್ಥವಾಗುವುದಿಲ್ಲ.

ಅಂತಃಕರಣವು ಸ್ವತಃ ಜಡವಾದದ್ದು. ಚೇತನದ ಸಂಬಂಧವಾಗದೆ ಜಡವಸ್ತು ಕೆಲಸ ಮಾಡುವುದಿಲ್ಲ.

**172**

**ಆತ್ಮಾ ತು ಪ್ರಮಾಣಾದಿವ್ಯವಹಾರಾಶ್ರಯತ್ವಾತ್ ಪ್ರಾಗೇವ ಪ್ರಮಾಣಾದಿ ವ್ಯವಹಾರಾತ್ ಸಿದ್ಧ್ಯತಿ |ನ ಚೇದೃಶಸ್ಯ ನಿರಾಕರಣಂ ಸಂಭವತಿ | ಆಗಂತುಕಂ ಹಿ ವಸ್ತು ನಿರಾಕ್ರಿಯತೇ ನ ಸ್ವರೂಪಂ | ಯ ಏವ ಹಿ ನಿರಾಕರ್ತಾತದೇವ ತಸ್ಯ ಸ್ವರೂಪಂ | ನ ಹ್ಯಗ್ನೇರೌಷ್ಣ್ಯಮಗ್ನಿನಾ ನಿರಾಕ್ರಿಯತೇ ||**

**- ಸೂ.ಭಾ. 2-3-7**

ಆತ್ಮನಾದರೋ ಪ್ರಮಾಣಾದಿ ವ್ಯವಹಾರಕ್ಕಿಂತ ಪೂರ್ವದಲ್ಲಿಯೇ ಸಿದ್ಧನಾಗಿರುತ್ತಾನೆ. ಇಂಥವನನ್ನು ನಿರಾಕರಿಸುವುದಕ್ಕೆ ಆಗುವುದಿಲ್ಲ. ಏಕೆಂದರೆ ಆಗಂತುಕವಾದ ಎಂದರೆ, ಪ್ರತ್ಯೇಕವಾಗಿ ತೋರಿಕೊಳ್ಳುವ ವಸ್ತುವನ್ನು ನಿರಾಕರಿಸಲಾಗುತ್ತದೆಯೇ ಹೊರತು ತನ್ನ ಸ್ವರೂಪವನ್ನೇ ನಿರಾಕರಿಸಲಾಗುವುದಿಲ್ಲ. ಯಾವನು ನಿರಾಕರಿಸುವುದಕ್ಕೆ ಹೊರಡುತ್ತಾನೋ ಅವನೇ ಆತ್ಮಸ್ವರೂಪನು. ಬೆಂಕಿಯ ಬಿಸಿಯನ್ನು ಬೆಂಕಿಯೇ ನಿರಾಕರಿಸಲಾರದು.

ಆತ್ಮನು ಸ್ವತಃ ಸಿದ್ಧನಾದ್ದರಿಂದ ಅವನ ಅಸ್ತಿತ್ವಕ್ಕೆ ಹೊರಗಿನ ಪ್ರಮಾಣಬೇಕಾಗಿಲ್ಲ. ಅವನು ಸಿದ್ಧನಾಗಿರುವುದರಿಂದ ಇನ್ನೊಂದು ವಸ್ತುವಿನ ಪರಿಚ್ಛಿತ್ತಿಗೆ ಪ್ರಮಾಣವನ್ನು ಬಯಸುತ್ತಾನೆ. ಆತ್ಮನಿಂದಲೇ ಅನ್ಯನಿರಾಕರಣೆ ಹುಟ್ಟುತ್ತದೆ. ತನ್ನನ್ನು ತಾನೇ ನಿರಾಕರಿಸಿಕೊಳ್ಳಲು ಆತ್ಮನಿಂದಾಗದು.

**173**

**ನ ತಾವದಯಮೇಕಾಂತೇನ ಅವಿಷಯಃ | ಅಸ್ಮತ್ಪ್ರತ್ಯಯವಿಷಯತ್ವಾತ್ | ಅಪರೋಕ್ಷತ್ವಾಚ್ಚ ಪ್ರತ್ಯಗಾತ್ಮಪ್ರಸಿದ್ಧೇಃ |**

**-ಸೂ.ಭಾ. 1-1-1 ಪೀಠಿಕೆ**

ಮೊದಲನೆಯದಾಗಿ ಈ ಆತ್ಮನು ಸರ್ವಥಾ ಜ್ಞಾನಕ್ಕೆ ಅವಿಷಯನಾದವನಲ್ಲ. ಏಕೆಂದರೆ ನಾನು ಎಂಬ ಜ್ಞಾನಕ್ಕೆ ಇವನು ವಿಷಯನಾಗಿರುತ್ತಾನೆ. ಅಲ್ಲದೆ ಅಪರೋಕ್ಷನಾಗಿರುವುದರಿಂದ ಪ್ರತ್ಯಗಾತ್ಮನು ಪ್ರಸಿದ್ಧವಾಗಿಯೇ ಇದ್ದಾನೆ.

**174**

**ಆತ್ಮನಶ್ಚ ಪ್ರಖ್ಯಾತುಮಶಕ್ಯತ್ವಾತ್ | ಯ ಏವ ನಿರಾಕರ್ತಾ ತಸ್ಯೈ ವಾತ್ಮತ್ವಾತ್**

**-ಸೂ. ಭಾ. 86**

ಆತ್ಮನನ್ನು ಇಲ್ಲವೆಂದು ಪ್ರತ್ಯಾಖ್ಯಾನ ಮಾಡುವುದಕ್ಕಾಗುವುದಿಲ್ಲ. ಏಕೆಂದರೆ ಯಾವನು ಇಲ್ಲವೆಂದು ನಿರಾಕರಿಸುತ್ತಾನೋ ಅವನೇ ಆತ್ಮನಾಗಿರುತ್ತಾನೆ.

**175**

**ಸರ್ವಪ್ರಾಣಕರಣೋಧಿಭಿಃ ಕ್ಷೇತ್ರ ಜ್ಞಾಸ್ತಿತ್ವಂ ವಿಭಾವ್ಯತೇ |**

**- ಗೀತಾ 13-13**

ಸಮಸ್ತ ಪ್ರಾಣಿಗಳ ಇಂದ್ರಿಯಗಳೆಂಬ ಉಪಾಧಿಗಳಿಂದ ಕ್ಷೇತ್ರಜ್ಞನಿದ್ದಾನೆಂದು ಗೊತ್ತಾಗುತ್ತದೆ.

ಇಂದ್ರಿಯಗಳು ರಥಾದಿಗಳಂತೆ ಜಡಪದಾರ್ಥಗಳು. ಚೈತನ್ಯದ ಪ್ರೇರಣೆಯಿಲ್ಲದೆ ಅವು ಕೆಲಸ ಮಾಡಲಾರವು. ಆದ್ದರಿಂದ ಇಂದ್ರಿಯಗಳಿಗೆ ಪ್ರೇರಕವಾದ ಚೈತನ್ಯವಿದೆಯೆಂದು ಗೊತ್ತಾಗುತ್ತದೆ. ಯಾವುದು ಚೈತನ್ಯವೋ ಅದೇ ಕ್ಷೇತ್ರಜ್ಞ.



# ೮ ಏಕಾತ್ಮ

'ಇದಂ ಸರ್ವಂ ಯದಯಮಾತ್ಮಾ', 'ಆತ್ಮೈವೇದಂ ಸರ್ವಂ', 'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿ ನೂರಾರು ಶ್ರುತಿವಾಕ್ಯಗಳು ಸಕಲವೂ ಆತ್ಮನೇ, ಆತ್ಮನನ್ನು ಬಿಟ್ಟು ಇನ್ನೊಂದು ವಸ್ತುವಿಲ್ಲವೆಂದು ಸಾರುತ್ತವೆ. ಹೀಗೆ ಅಭೇದಶ್ರುತಿ ಗಳಿರುವಂತೆ 'ದ್ವಾ ಸುಪರ್ಣಾ ಸಯುಜಾ ಸಖಾಯಾ' ಇತ್ಯಾದಿ ಭೇದಶ್ರುತಿಗಳೂ ಉಂಟು. ಆದ್ದರಿಂದ ಏಕಾತ್ಮವಾದವು ಹೇಗೆ ಸಿದ್ಧಾಂತವಾಗಿ ನಿಂತೀತು? ಎಂಬ ಪ್ರಶ್ನೆ ಸಹಜವಾಗಿ ಹುಟ್ಟಿಕೊಳ್ಳುತ್ತದೆ. ಅದಕ್ಕೆ ಸಮಾಧಾನವನ್ನು ಈ ಪ್ರಕಾರವಾಗಿ ಹೇಳಬಹುದು.

೧. ಶಾಸ್ತ್ರವು ಅಜ್ಞಾತಜ್ಞಾಪಕ ಎಂಬುದು ಸಿದ್ಧಾಂತ. ಯಾವುದು ಇಂದ್ರಿಯ ಗೋಚರವಲ್ಲವೋ ಸಾಮಾನ್ಯರ ಬುದ್ಧಿಗೆ ನಿಲುಕುವುದಿಲ್ಲವೋ ಅದನ್ನು ತಿಳಿಸಿಕೊಡತಕ್ಕದ್ದು ಶಾಸ್ತ್ರ. ಇದು ವೇದಾಂತಕ್ಕೆ ಮಾತ್ರ ಸೀಮಿತವಲ್ಲ. ಸಾಂಖ್ಯಾದಿ ಸಮಸ್ತ ಶಾಸ್ತ್ರಗಳಿಗೂ ಅನ್ವಯಿಸತಕ್ಕ ಮಾತು. ಭೇದವು ಲೋಕ ಸಿದ್ಧವಾಗಿದೆ. ಹುಟ್ಟಿದ ಪ್ರತಿಯೊಬ್ಬ ಮನುಷ್ಯನಿಗೂ ತಿರ್ಯಗ್‌ಜಂತುವಿಗೂ ಸಹ ನಾನು ಬೇರೆ, ನೀನು ಬೇರೆ, ಈ ಪದಾರ್ಥವು ಬೇರೆ ಎಂಬ ಜ್ಞಾನ ಇದ್ದೇ ಇರುತ್ತದೆ. ನಮ್ಮೆಲ್ಲರನ್ನು ಪಾಲಿಸತಕ್ಕ, ದಂಡಿಸತಕ್ಕ ದೇವರೊಬ್ಬನು ಆಕಾಶದಲ್ಲಿ ಎಲ್ಲಿಯೋ ಇದ್ದಾನೆಂದು ಕಾಡು ಜನರೂ ತಿಳಿದಿದ್ದಾರೆ. ಇಂತಹ ದ್ವೈತವನ್ನು ಶಾಸ್ತ್ರವು ಉಪದೇಶಿಸಬೇಕಾಗಿಲ್ಲ.

೨. ದ್ವೈತವೇ ಪರಮಾರ್ಥವಾದರೆ ಅಭೇದವನ್ನು ಬೋಧಿಸುವ ನೂರಾರು ಶ್ರುತಿವಾಕ್ಯಗಳು ಏಕೆ ಹೊರಟವು? ಅವನ್ನು ಕ್ಲೇಶದಿಂದ ಜಗ್ಗಿ ಎಳೆದು ದ್ವೈತಕ್ಕೆ ವಿರೋಧವಿಲ್ಲವೆಂದು ಕಸರತ್ತು ಮಾಡಬೇಕಾದ ಸಂದರ್ಭವನ್ನು ಶ್ರುತಿಯು ಏಕೆ ಕಲ್ಪಿಸಿದೆ?

೩. ಹಾಗಿದ್ದರೆ ಭೇದವನ್ನು ಸೂಚಿಸುವ ದ್ವೈತ ಶ್ರುತಿಗಳು ಏಕೆ ಹೊರಟಿವೆ?ಎಂದು ಕೇಳಬಹುದು. ದ್ವೈತದಲ್ಲಿ ನಿಲ್ಲದೆ ಅದ್ವೈತವನ್ನು ಬೋಧಿಸುವುದಕ್ಕೆ ಆಗುವುದಿಲ್ಲ. ಗುರುಶಿಷ್ಯ ಪರಂಪರೆಯೇ ಇಲ್ಲದೆ ಹೋದೀತು. ಗ್ರಂಥರಚನೆಯೇ ಅಶಕ್ಯವಾದೀತು. 'ಸರ್ವವೂ ಆತ್ಮ' ಎಂದು ತಿಳಿಸಿಕೊಡುವಾಗ ಸರ್ವವೆಂಬ ಈ ಜಗತ್ತನ್ನು ಕೈಮಾಡಿ ತೋರಿಸಲೇಬೇಕಲ್ಲವೆ? ಲೋಕಸಿದ್ಧವಾದ ದ್ವೈತವನ್ನು ಅನುವಾದಿಸಿ ಅನಂತರ ಅದನ್ನು ನಿಷೇಧಿಸಬೇಕಾಗುತ್ತದೆ. **'ಅಸತ್ಯೇ ವರ್ತ್ಮನಿ ಸ್ಥಿತ್ವಾ ತತಃ ಸತ್ಯಂ ಸಮೀಹತೇ'**- ಅಸತ್ಯ ಮಾರ್ಗದಲ್ಲಿ ನಿಂತು ಸತ್ಯವನ್ನು ಶೋಧಿಸತೊಡಗಬೇಕಾಗುತ್ತದೆ. ಇದು ಭರ್ತೃಹರಿಯ ಮಾತು.

ಅಧ್ಯಾರೋಪಾಪವಾದ ನ್ಯಾಯದ ಸಾರಾಂಶವೇ ಇದು. ಶ್ರುತಿಯು ಎಲ್ಲಿಯೂ ಅಭೇದವನ್ನು ನಿಷೇಧಿಸಿಲ್ಲ. ಆದರೆ ಭೇದವನ್ನು ನಿಷೇಧಿಸಿದೆ.

೪. ಆತ್ಮಜ್ಞಾನಿಗಳ ಅನುಭವವೂ ಸಹ ಏಕತ್ಮವಾದಕ್ಕೆ ಪ್ರಮಾಣ. ಸಮಸ್ತ ಪ್ರಾಣಿಗಳು ತಾವು ಯಾರೆಂಬ ಸತ್ಯವನ್ನು ತಿಳಿಯದಿದ್ದರೂ ಸ್ವತಃ ಬ್ರಹ್ಮ ಸ್ವರೂಪವಾಗಿಯೇ ಇರುತ್ತವೆ. 'ನಾನ್ಯದತೋऽಸ್ತಿ ದ್ರಷ್ಟೃ' ಇತ್ಯಾದಿ ಶ್ರುತಿಗಳು ಇದಕ್ಕೆ ಪ್ರಮಾಣ. 'ಏಕವಿಜ್ಞಾನದಿಂದ ಸರ್ವವನ್ನೂ ತಿಳಿಯಲಾಗುತ್ತದೆ' ಇತ್ಯಾದಿ ವೇದಾಂತ ವಾಕ್ಯಗಳು ದ್ವೈತಪಕ್ಷದಲ್ಲಿ ಸಂಗತವಾಗುವುದಿಲ್ಲ. ಸರ್ವವೂ ಆತ್ಮವೇ ಎಂಬ ಜ್ಞಾನ ಯಾರಿಗೆ ಹುಟ್ಟುತ್ತದೆಯೋ ಅವನಿಗೆ ಕಾಮನೆಗಳು ಇರುವುದಿಲ್ಲ. ಇನ್ನೊಂದು ವಸ್ತುವಿದೆಯೆಂದು ತಿಳಿದಾಗಲ್ಲವೆ ಅದು ಬೇಕು ಎಂಬ ಕಾಮನೆ ಹುಟ್ಟುವುದು? ತಾನೇ ಬೇಕೆಂದು ಕಾಮನೆ ಹುಟ್ಟುವುದಿಲ್ಲ. ಪ್ರಾಚೀನ ಸಮಸ್ತ ವೇದಾಂತಿಗಳೂ ಉಪನಿಷತ್ತುಗಳಲ್ಲಿ ಜೀವಾತ್ಮ ಪರಮಾತ್ಮರ ಐಕ್ಯಬೋಧನೆಯೆಂದು ಒಪ್ಪಿದ್ದಾರೆ. ಅದನ್ನು ತಿಳಿಯುವ ವಿಧಾನ ಹೇಗೆಂಬುದರಲ್ಲಿ ಮಾತ್ರ ಪ್ರಾಚೀನ ವೇದಾಂತಿಗಳಲ್ಲಿ ಮತಭೇದ ವಿತ್ತು. ಅಲ್ಲಿಗೆ ವೇದಾಂತವೆಂದರೆ ಅದ್ವೈತ ದರ್ಶನವೇ ಎಂದು ಸಿದ್ಧವಾಗುತ್ತದೆ. ಈ ವೈದಿಕ ಸಿದ್ಧಾಂತವೇ ಸಮ್ಯಗ್‌ದರ್ಶನ. ಇದೇ ಔಪನಿಷದ ದರ್ಶನವೆಂದು ಆಚಾರ್ಯರ ಸಿದ್ಧಾಂತ.

**176**

**ಆತ್ಮೈಕತ್ವದರ್ಶಿನೋ ವಿಷಯಾಭಾವಾತ್ ಕಾಮಾನುಪಪತ್ತಿಃ |**

**-ತೈತ್ತಿ. ಶೀಕ್ಷಾ 11-4**

ಆತ್ಮೈಕತ್ವವನ್ನರಿತ ಜ್ಞಾನಿಗೆ ವಿಷಯಗಳೇ ಇಲ್ಲದ್ದರಿಂದ ಕಾಮನೆ ಕೊಡುವುದಿಲ್ಲ.

**177**

**ನ ಹಿ ಆತ್ಮವ್ಯತಿರೇಕೇಣ ಅನ್ಯತ್ ಕಿಂಚದಸ್ತಿ|** **-ಬೃಹ. 2-4-6**

ಆತ್ಮಕ್ಕೆ ಭಿನ್ನವಾಗಿ ಯಾವುದೂ ಇಲ್ಲವಷ್ಟೆ.

**178**

**ಸರ್ವಶಾಖೋಪನಿಷತ್ಸು ಚ ಬ್ರಹ್ಮೈಕತ್ವಂ ನಿಶ್ಚಿತೋऽರ್ಥಃ |**

**-ಬೃಹ. 1-4-10**

ಎಲ್ಲ ಶಾಖೆಗಳ ಉಪನಿಷತ್ತುಗಳಲ್ಲಿಯೂ ಒಂದೇ ಬ್ರಹ್ಮವಿದೆಯೆಂಬ ಬೋಧನೆ ನಿಶ್ಚಿತವಾದ ವಿಷಯ.

**179**

**ನ ಹಿ ಭೇದವಾಕ್ಯಾನಾಂ ಕದಾಚಿದಪಿ ಮುಖ್ಯಭೇದಾರ್ಥಮುಪಪದ್ಯತೇ| ಸ್ವಾಭಾವಿಕಾವಿದ್ಯಾವತ್ ಪ್ರಾಣಿಭೇದದೃಷ್ಟ್ಯನುವಾದಿತ್ವಾದ್ ಆತ್ಮಭೇದ ವಾಕ್ಯಾನಾಮ್ |**
**-ಮಾಂಡೂಕ್ಯ 3-14**

ಉಪನಿಷತ್ತುಗಳಲ್ಲಿರುವ ಭೇದ ಬೋಧಕ ವಾಕ್ಯಗಳಿಗೆ ಮುಖ್ಯ ಭೇದವೇ ಅರ್ಥವೆನ್ನುವುದು ಎಂದೆಂದಿಗೂ ಕೂಡುವುದಿಲ್ಲ. ಏಕೆಂದರೆ ಸ್ವಾಭಾವಿಕವಾದ ಅವಿದ್ಯೆಯುಳ್ಳ ಪ್ರಾಣಿಗಳ ಭೇದ ದೃಷ್ಟಿಯನ್ನೇ ಆ ಭೇದ ವಾಕ್ಯಗಳು ಅನುವಾದ ಮಾಡುತ್ತವೆ.

ಭೇದವಾಕ್ಯಗಳು ಕರ್ಮಾದಿಗಳನ್ನು ವಿಧಿಸುತ್ತವೆ. ಅವಿದ್ಯಾಕಲ್ಪಿತವಾದ ಭೇದವನ್ನು ಅನುವಾದ ಮಾಡಿಕೊಂಡು ಆ ವಾಕ್ಯಗಳು ಹೊರಟಿವೆ.

**180**

**ತಸ್ಮಾತ್ ಕಾರ್ಯಾನುಪ್ರವಿಷ್ಟೋ ಜೀವ ಆತ್ಮಾ ಪರ ಏವ ಅಸಂಸಾರೀ |**
**-ತೈತ್ತಿ. ಭೃಗು. 9**

'ತತ್‌ಸೃಷ್ಟ್ವಾ ತದೇವಾನುಪ್ರಾವಿಶತ್' (ಬ್ರಹ್ಮ. 6-1), "ಅನೇಕ ಜೀವೇನಾತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರಣವಾಣಿ" (ಛಾಂ. 6-3-2), ಎಂಬ ಶ್ರುತಿಗಳಿವೆ. ಸೃಷ್ಟ್ವಾ ಎಂಬಲ್ಲಿ 'ಕ್ತ್ವಾ' ಪ್ರತ್ಯಯವಿರುವುದರಿಂದ ಕಾರ್ಯವಾದ ಜಗತ್ತನ್ನು ಸೃಜಿಸಿದವನೇ ಅನುಪ್ರವೇಶ ಮಾಡಿದವನು ಎಂದು ಸ್ಪಷ್ಟವಾಗುತ್ತದೆ (ಸೃಜಿಸಿದವನು ಪರಮಾತ್ಮನೆಂಬುದು ನಿರ್ವಿವಾದ). ಆದ್ದರಿಂದ ಕಾರ್ಯದಲ್ಲಿ ಅನುಪ್ರವೇಶ ಮಾಡಿ ಜೀವಾತ್ಮನೆನಿಸಿದವನು ಅಸಂಸಾರಿಯಾದ ಪರಮಾತ್ಮನೇ ಸರಿ.

**181**

**ತಸ್ಮಾತ್ ಉಪಾಧಿಭೇದೇನ್ಯೈವ ಏಷಾಂ ಭೇದೋ ನಾನ್ಯಥಾ | 'ಏಕಮೇವಾ ದ್ವಿತೀಯಂ' ಇತ್ಯವಧಾರಣಾತ್ ಸರ್ವೋಪನಿಷತ್ಸು |** **-ಬೃಹ. 3-8-12**

ಜೀವ, ಈಶ್ವರ, ಅಂತರ್ಯಾಮಿ-ಇವುಗಳಿಗೆಲ್ಲ ಉಪಾಧಿಭೇದದಿಂದ ಭೇದವೇ ಹೊರತು ಬೇರೆ ಇಲ್ಲ. 'ಏಕಮೇವಾದ್ವಿತೀಯಂ ಬ್ರಹ್ಮ' ಎಂದು 'ಏವ' ಶಬ್ದದಿಂದ ಅವಧಾರಣೆ ಮಾಡಿರುವುದರಿಂದ ಸರ್ವೋಪನಿಷತ್ತುಗಳಲ್ಲಿಯೂ ಹೀಗೆಯೇ.

**182**

**ಜಾನನ್ನಜಾನಂಶ್ಚ ಸರ್ವೋ ಜಂತುಃ ಸದ್ಬ್ರಹ್ಮೈವ |** **-ಛಾಂ. 8-3-3**

ತಾನು ಬ್ರಹ್ಮವೆಂದು ತಿಳಿಯಲಿ, ತಿಳಿಯದಿರಲಿ ಸರ್ವಪ್ರಾಣಿಯೂ ಬ್ರಹ್ಮವಾಗಿಯೇ ಇರುತ್ತದೆ.

**183**

**ಪರಮಾತ್ಮಭೇದಕಲ್ಪನಾಯಾಂ ಚ ವೈದಿಕಃ ಕೃತಾಂತಃ ಪರಿತ್ಯಕ್ತಃ ಸ್ಯಾತ್ |**
**-ಬೃಹ. 4-4-6**

ಜೀವಾತ್ಮನು ಪರಮಾತ್ಮನಿಗಿಂತ ಭಿನ್ನನೆಂದು ಕಲ್ಪಿಸಿದರೆ ವೈದಿಕಸಿದ್ಧಾಂತವೇ ಪರಿತ್ಯಕ್ತವಾದೀತು.

**184**

**ಇಷ್ಯತೇ ಚ ಸರ್ವೋಪನಿಷದಾಂ ಸರ್ವಾತ್ಮೈಕ್ಯ ಪ್ರತಿಪಾದಕತ್ವಮ್ |**
**-ಮಾಂಡೂಕ್ಯ 3**

ಉಪನಿಷತ್ತುಗಳೆಲ್ಲವೂ ಎಲ್ಲರ ಆತ್ಮನೂ ಒಬ್ಬನೇ ಎಂಬುದಾಗಿ ಪ್ರತಿಪಾದಿಸುತ್ತವೆಯೆಂಬುದು ನಮಗೆ ಸಮ್ಮತ.

**185**

**ಪರಮಾರ್ಥತಃ ಪರಮಾತ್ಮ ವಿಜ್ಞಾನಾತ್ಮನೋರ್ಭೇದಾಭಾವಾತ್ |**
**-ಸೂ.ಭಾ. 1-4-1**

ತಾತ್ತ್ವಿಕವಾಗಿ ಪರಮಾತ್ಮ-ವಿಜ್ಞಾನಾತ್ಮರಲ್ಲಿ ಭೇದವಿಲ್ಲ.

ವಿಜ್ಞಾನಾತ್ಮ = ಜೀವ

**186**

**ಪಾರಮೇಶ್ವರಮೇವ ಹಿ ಶಾರೀರಸ್ಯ ಪಾರಮಾರ್ಥಿಕಂ ಸ್ವರೂಪಮ್ | ಉಪಾಧಿಕೃತಂ ತು ಶಾರೀರತ್ವಂ 'ತತ್ತ್ವಮಸಿ' (ಛಾಂ. 6-8-7) 'ನಾನ್ಯದತೋಽಸ್ತಿ ದ್ರಷ್ಟೃ' (ಬೃಹ. 6-8-11)ಇತ್ಯಾದಿ ಶ್ರುತಿಭ್ಯಃ | -ಸೂ. ಭಾ. 3-4-8**

ಶರೀರದಲ್ಲಿರುವ ಜೀವನಿಗೆ ಪರಮಾತ್ಮವಾಗಿ ಪರಮೇಶ್ವರ ಸ್ವರೂಪವೇ ಇದೆ. ಶರೀರದ ಜೀವತ್ವ ಎನ್ನುವುದು ಉಪಾಧಿಕೃತವಾದದ್ದು. 'ಆ ಆತ್ಮವು ನೀನಾಗಿದ್ದೀಯೆ' 'ಇದಕ್ಕಿಂತ ಬೇರೆಯಾದ ದ್ರಷ್ಟೃವಿಲ್ಲ.' ಇತ್ಯಾದಿ ಶ್ರುತಿಗಳು ಇದಕ್ಕೆ ಪ್ರಮಾಣ.

**187**

**ಸರ್ವಸ್ಯ ಹಿ ವೇದಿತುಃ ಸ್ವಾತ್ಮಾ ಬ್ರಹ್ಮ ಇತಿ ಸರ್ವವೇದಾಂತಾನಾಂ ಸುನಿಶ್ಚಿತೋಽರ್ಥಃ| -ಕೇನ. 2 ಪೀಠಿಕೆ**

ತಿಳಿಯುವಂತಹ ಸಮಸ್ತರಿಗೂ ಬ್ರಹ್ಮವು ತನ್ನ ಆತ್ಮವೇ ಆಗಿರುತ್ತದೆಯೆಂಬುದು ಎಲ್ಲ ಉಪನಿಷತ್ತುಗಳಲ್ಲಿಯೂ ಚೆನ್ನಾಗಿ ನಿರ್ಧಾರಿತವಾದ ವಿಷಯವಾಗಿದೆ.

**188**

**ಮೃದಾದಿದೃಷ್ಟಾಂತಪ್ರಣಯನಾದ್ಧಿ ಪ್ರಕೃತಿವಿಕಾರನ್ಯಾಯೇನೈವೇದಂ ಸರ್ವವಿಜ್ಞಾನಂ ನೇತವ್ಯಮಿತಿ ಗಮ್ಯತೇ | -ಸೂ.ಭಾ. 2-3-6**

ಮಣ್ಣು ಮುಂತಾದ ದೃಷ್ಟಾಂತವನ್ನು ತೋರಿಸಿರುವುದರಿಂದ ಪ್ರಕೃತಿ ವಿಕಾರ ನ್ಯಾಯದಿಂದಲೇ ಈ ಸರ್ವವಿಜ್ಞಾನದ ಪ್ರತಿಜ್ಞೆಯನ್ನು ಸರಿಹೊಂದಿಸಬೇಕೆಂದು ಗೊತ್ತಾಗುತ್ತದೆ.

1. ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮಿತಿ|
**(ಛಾಂ. 6-1-3)**

2. ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ
**(ಮುಂ. 1-1-3) - ಇದು ಸರ್ವವಿಜ್ಞಾನ ಪ್ರತಿಜ್ಞೆ.**

1. ಯಥಾ ಸೌಮ್ಯ ! ಏಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್ |.

2. ಯಥಾ ಸೌಮ್ಯೈಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾತ್ |
3. ಯಥಾ ಸೌಮ್ಯೈಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾತ್ |

**(ಛಾಂ. 6-1 : 4,5,6) ಇದು ದೃಷ್ಟಾಂತ.**

## 189

**ತಥಾ ಹಿ ಸಂಪ್ರದಾಯವಿದಾಂ ವಚನಮ್ - "ಅಧ್ಯಾರೋಪಾಪವಾದಾ ಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ"| -ಗೀತಾ 13-13**

"ಯಾವ ಪ್ರಪಂಚವೂ ಇಲ್ಲದ ಆತ್ಮತತ್ತ್ವವನ್ನು ಅಧ್ಯಾರೋಪ ಅಪವಾದಗಳ ಮೂಲಕ ವಿಸ್ತರಿಸಿ ತಿಳಿಸಲಾಗುತ್ತದೆ" ಎಂದು ಸಂಪ್ರದಾಯವನ್ನು ಬಲ್ಲವರು ಹೇಳಿದ ವಚನವಿದೆ.

ಈ ವಚನ ಯಾರದೆಂಬುದು ತಿಳಿಯದು. ದ್ರವಿಡಾಚಾರ್ಯರ ವಚನವಾಗಿದ್ದಿರಬಹುದು. ಅಧ್ಯಾರೋಪ = ಅದರಲ್ಲಿಲ್ಲದ ಧರ್ಮವನ್ನು ಅದರಲ್ಲಿ ಇರುವಂತೆ ಕಲ್ಪಿಸಿ ಹೇಳುವುದು. ಅಪವಾದ = ಕಲ್ಪಿತ ಧರ್ಮವನ್ನು ನಿಷೇಧಿಸುವುದು.
ಉದಾ : - ಬ್ರಹ್ಮವಸ್ತುವನ್ನು **'ಸರ್ವತಃ ಪಾಣಿಪಾದಂ'** ಎನ್ನುವುದು ಅಧ್ಯಾರೋಪ. **'ಸರ್ವೇಂದ್ರಿಯ ವಿವರ್ಜಿತಂ'** ಎನ್ನುವುದು ಅಪವಾದ.

## 190

**ನ ಹಿ ಯಸ್ಯ ಆತ್ಮೈವ ಸರ್ವಂ ಭವತಿ ತಸ್ಯಾನಾತ್ಮಾ ಕಾಮಯಿತವ್ಯೋಽಸ್ತಿ | ಅನಾತ್ಮಾ ಚ ಅನ್ಯಃ ಕಾಮಯಿತವ್ಯಃ | ಸರ್ವಂ ಚ ಆತ್ಮೈವಾಭೂತ್ ಇತಿ ವಿಪ್ರತಿಷಿದ್ಧಮ್ |**

**-ಬ್ರಹ್ಮ. 4-4-6**

ಯಾರಿಗೆ ಸರ್ವವೂ ಆತ್ಮವೇ ಆಗಿಬಿಡುತ್ತದೆಯೋ ಅವನಿಗೆ ಅನಾತ್ಮವಾದ ಕಾಮಯಿತವ್ಯ ವಸ್ತುವೇ ಇರುವುದಿಲ್ಲ. ಕಾಮಯಿತವ್ಯವು ಅನಾತ್ಮವಾದ ಇನ್ನೊಂದಾಗಿರಬೇಕು. 'ಸರ್ವವೂ ಅವನಿಗೆ ಆತ್ಮವೇ ಆಗಿದೆ' - 'ಅನಾತ್ಮವೂ ಇದೆ' - ಎಂಬುದು ಪರಸ್ಪರ ವಿರುದ್ಧವಾದದ್ದು.

**191**

**ಸರ್ವೋಪನಿಷತ್ಸು ಹಿ ವಿಜ್ಞಾನಾತ್ಮನಃ ಪರಮಾತ್ಮನಾ ಏಕತ್ವಪ್ರತ್ಯಯೋ ವಿಧೀಯತೇ ಇತಿ ಅವಿಪ್ರಪತ್ತಿಃ ಸರ್ವೇಷಾಂ ಉಪನಿಷದ್ವಾದಿನಾಮ್**

**-ಬೃಹ. 2-1-20**

ಸಕಲ ಉಪನಿಷತ್ತುಗಳಲ್ಲಿಯೂ ಸಹ ವಿಜ್ಞಾನಾತ್ಮನಾದ ಜೀವನಿಗೂ ಪರಮಾತ್ಮನಿಗೂ ಅಭೇದವನ್ನು ಹೇಳಲಾಗಿದೆ ಎಂಬ ವಿಷಯವು ಎಲ್ಲ ವೇದಾಂತಿಗಳಿಗೂ ಸಂಮತವಾಗಿದೆ. ಈ ವಿಷಯದಲ್ಲಿ ವೇದಾಂತಿಗಳಿಗೆ ಮತಭೇದವಿಲ್ಲ.

ವೇದಾಂತವೆಂದರೆ ಅದ್ವೈತವೇ ಎಂದು ಇದರಿಂದ ಸಿದ್ಧವಾಗುತ್ತದೆ. ವೇದಾಂತಿಗಳು ದ್ವೈತಿಗಳಾದ ಸಾಂಖ್ಯ ನ್ಯಾಯಾದಿ ದರ್ಶನಕಾರರೊಡನೆ ವಿವಾದ ಮಾಡಬೇಕಾಗಿದೆ. ವೇದಾಂತದಲ್ಲಿ ಜ್ಞಾನಕರ್ಮ-ಸಮುಚ್ಚಯವಾದ-ಮುಂತಾದ ಅಂತರ್ಭೇದಗಳೇ ಹೊರತು ದ್ವೈತದ ಪ್ರವೇಶವಿಲ್ಲವೆಂದು ಹೇಳಿದಂತಾಯಿತು.

ದ್ವೈತವೇದಾಂತ, ವಿಶಿಷ್ಟಾದ್ವೈತ ವೇದಾಂತ ಎಂಬ ಭೇದ ಶ್ರೀ ಶಂಕರಾಚಾರ್ಯರ ಕಾಲದಲ್ಲಿರಲಿಲ್ಲ. ಒಂದು ವೇಳೆ ಇದ್ದರೆ ಅವರಿಗೆ ಗೊತ್ತಿರಲಿಲ್ಲ ಎಂದೇ ಹೇಳಬೇಕಾಗುತ್ತದೆ.

**192**

**ಏಕೇನ ಮೃತ್ಪಿಂಡೇನ ಪರಮಾರ್ಥತೋ ಮೃದಾತ್ಮನಾ ವಿಜ್ಞಾತೇನ ಸರ್ವಂ ಮೃನ್ಮಯಂ ಘಟಶರಾವೋದಂಚನಾದಿಕಂ ಮೃದಾತ್ಮಕತ್ವಾವಿಶೇಷಾದ್ವಿಜ್ಞಾತಂ ಭವೇತ್**

**-ಸೂ.ಭಾ. 2-1-14**

ಒಂದು ಮಣ್ಣಿನ ಮುದ್ದೆಯು ಪರಮಾರ್ಥದಲ್ಲಿ ಮಣ್ಣೇ ಎಂದು ತಿಳಿಯುವುದರಿಂದ ಮಣ್ಣಿನ ವಿಕಾರವಾದ ಗಡಿಗೆ, ತಟ್ಟೆ, ಕೊಡ-ಮೊದಲಾದವೆಲ್ಲ ತಿಳಿಯಲ್ಪಟ್ಟವಾಗುತ್ತವೆ. ಏಕೆಂದರೆ, ಎಲ್ಲವೂ ಮಣ್ಣಿನಿಂದಲೇ ಆದ್ದರಿಂದ ವಿಶೇಷವೇನೂ ಇರುವುದಿಲ್ಲ.

ಬ್ರಹ್ಮವನ್ನು ತಿಳಿದರೆ ಜಗತ್ತೆಲ್ಲವೂ ಪರಮಾರ್ಥದಲ್ಲಿ ಬ್ರಹ್ಮವೇ ಎಂದು ಗೊತ್ತಾಗುವುದರಿಂದ ಎಲ್ಲವನ್ನೂ ತಿಳಿದಂತೆಯೇ ಆಗುತ್ತದೆ.

**193**

**ತಚ್ಚೋಪಾದಾನಕಾರಣವಿಜ್ಞಾನೇ. ಸರ್ವವಿಜ್ಞಾನಂ ಸಂಭವತ್ಯುಪಾದಾನ**

**ಕಾರಣಾವ್ಯತಿರೇಕಾತ್ ಕಾರ್ಯಸ್ಯ | ನಿಮಿತ್ತಕಾರಣಾವ್ಯತಿರೇಕಸ್ತು ಕಾರ್ಯಸ್ಯ ನಾಸ್ತಿ, ಲೋಕೇ ತಕ್ಷ್ಣಃ ಪ್ರಾಸಾದವ್ಯತಿರೇಕ ದರ್ಶನವತ್ || -ಸೂ.ಭಾ. 1-4-23**

ಆ ಸರ್ವವಿಜ್ಞಾನವು ಉಪಾದಾನಕಾರಣದ ಜ್ಞಾನವಾದಾಗ ಸಂಭವಿಸುತ್ತದೆ. ಏಕೆಂದರೆ, ಕಾರ್ಯವು ಉಪಾದಾನಕಾರಣಕ್ಕೆ ವ್ಯತಿರಿಕ್ತವಾಗಿ ಬೇರೆ ಇರುವುದಿಲ್ಲ. ಆದರೆ ಕಾರ್ಯವು ನಿಮಿತ್ತಕಾರಣಕ್ಕೆ ಅಭಿನ್ನವಾಗಿರುವುದಿಲ್ಲ. ಏಕೆಂದರೆ, (ನಿಮಿತ್ತ ಕಾರಣನಾದ) ಶಿಲ್ಪಿಗಿಂತ ಗೃಹವು ಭಿನ್ನವಾಗಿರುವುದು ಲೋಕದಲ್ಲಿ ಕಂಡು ಬಂದಿದೆ.

ಘಟಕ್ಕೆ ಮಣ್ಣು ಉಪಾದಾನಕಾರಣ. ಕುಂಬಾರನು ನಿಮಿತ್ತಕಾರಣ. ಉಪಾದಾನ ಕಾರಣನಾದ ಬ್ರಹ್ಮದ ಜ್ಞಾನವಾದರೆ, ಕಾರ್ಯವಾದ ಎಲ್ಲ ಜಗತ್ತಿನ ಜ್ಞಾನವಾದಂತೆ.

**194**

**ಅತಶ್ಚ ಕೃತ್ಸ್ನಸ್ಯ ಜಗತೋ ಬ್ರಹ್ಮಕಾರ್ಯತ್ವಾತ್ತದನನ್ಯತ್ವಾಚ್ಚ ಸಿದ್ಧ್ಯೈಷಾ ಶ್ರೌತೀ ಪ್ರತಿಜ್ಞಾ "ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮ್ ಅವಿಜ್ಞಾತಂ ವಿಜ್ಞಾತಮ್" ಇತಿ | -ಸೂ.ಭಾ. 2-1-20**

ಸಮಸ್ತ ಜಗತ್ತೂ ಬ್ರಹ್ಮದ ಕಾರ್ಯವಾದ್ದರಿಂದಲೂ ಅದಕ್ಕೆ ಅಭಿನ್ನವಾದ್ದರಿಂದಲೂ "ಯಾವ ಉಪದೇಶವು ಶ್ರುತವಾದರೆ ಅಶ್ರುತವೂ ಶ್ರುತವಾಗುವುದೋ, ಅತರ್ಕಿತವೂ ತರ್ಕಿತವಾಗುವುದೋ, ಬುದ್ಧಿಗಮ್ಯವಲ್ಲದ್ದು ಬುದ್ಧಿಗಮ್ಯವಾಗುವುದೋ" ಎಂಬ ಶ್ರುತ್ಯುಕ್ತ ಪ್ರತಿಜ್ಞೆಯು ಸಿದ್ಧವಾಗುತ್ತದೆ.

**195**

**ಯಥಾ ಘಟಕರಕಾದ್ಯಾಕಾಶಾನಾಂ ಮಹಾಕಾಶಾನನ್ಯತ್ವಂ, ಯಥಾ ಚ ಮೃಗತಷ್ಣಿಕೋದಕಾದೀನಾಮೂಷರಾದಿಭ್ಯೋಽನನ್ಯತ್ವಂ| ದೃಷ್ಟನಷ್ಟ ಸ್ವರೂಪ ತ್ವಾತ್ ಸ್ವರೂಪೇಣಾನುಪಾಖ್ಯತ್ವಾತ್ | ಏವಮಸ್ಯ ಭೋಗ್ಯ ಭೋಕ್ತ್ರಾದಿಪ್ರಪಂಚ ಜಾತಸ್ಯ ಬ್ರಹ್ಮವ್ಯತಿರೇಕೇಣಾಭಾವ ಇತಿ ದ್ರಷ್ಟವ್ಯಮ್ | -ಸೂ.ಭಾ. 2-1-14**

ಗಡಿಗೆ, ಹೂಜಿ ಮೊದಲಾದುದರ ಆಕಾಶವು ಮಹಾಕಾಶಕ್ಕಿಂತ ಅನ್ಯವಲ್ಲ. ಬಿಸಿಲ್ಗುದುರೆಯ ನೀರು ಮೊದಲಾದದ್ದು ಮರಳು ನೆಲಕ್ಕಿಂತ ಅನ್ಯವಲ್ಲ; ಏಕೆಂದರೆ ಅವು ದೃಷ್ಟನಷ್ಟ ಸ್ವರೂಪಗಳು ಮತ್ತು ಅದರ ಸ್ವರೂಪವೇನೆಂದು ಹೇಳಲು ಶಕ್ಯವಾಗುವುದಿಲ್ಲ. ಅದರಂತೆಯೇ ಭೋಗ್ಯ ಭೋಕ್ತೃ ಮುಂತಾದ ಪ್ರಪಂಚವು ಬ್ರಹ್ಮವನ್ನು ಬಿಟ್ಟು ಇನ್ನೊಂದಾಗಿ ಇಲ್ಲ ಎಂದು ತಿಳಿಯಬೇಕು.

**196**

ತಸ್ಮಾದಹಂ ಬ್ರಹ್ಮಾಸ್ಮೀತ್ಯೇದವಸಾನಾ ಏವ ಸರ್ವೇ ವಿಧಯಃ ಸರ್ವಾಣಿ ಚೇತರಾಣಿ ಪ್ರಮಾಣಾನಿ | ನ ಹ್ಯಹೇಯಾನುಪಾದೇಯಾದ್ವೈತಾತ್ಮಾವಗತೌ ನಿರ್ವಿಷಯಾಣ್ಯಪ್ರಮಾತೃಕಾಣಿ ಚ ಪ್ರಮಾಣಾನಿ ಭವಿತುಮ್ ಅರ್ಹಂತಿ |

- ಸೂ.ಭಾ. 1-1-4

ಸಕಲವಿಧಿಗಳೂ ಸಕಲಪ್ರಮಾಣಗಳೂ ಸಹ 'ಅಹಂ ಬ್ರಹ್ಮಾಸ್ಮಿ' ಎಂಬ ಅವಗತಿ ಪರ್ಯಂತ ಇದ್ದು ಸಮಾಪ್ತವಾಗುತ್ತವೆ. ಏಕೆಂದರೆ, ಅಹೇಯವೂ ಅನುಪಾದೇಯವೂ ಆದ ಅದ್ವಯಾತ್ಮದ ಜ್ಞಾನವಾದ ಮೇಲೆ ಪ್ರಮೇಯವಾದ ವಿಷಯವೂ ಪ್ರಮಾತೃವೂ ಇಲ್ಲದೇ ಹೋಗುವ ಪ್ರಯುಕ್ತ ಅವು ಪ್ರಮಾಣಗಳೆನಿಸುವುದೇ ಇಲ್ಲ.

ಕರ್ತಾ, ಕ್ರಿಯೆ, ಕರ್ತವ್ಯಗಳಿಲ್ಲದ ಪ್ರಯುಕ್ತ ವಿಧಿಗಳೂ ಇಲ್ಲವಾಗುತ್ತವೆ.

**197**

ಮಿಥ್ಯಾಜ್ಞಾನಕೃತ ಏವ ಜೀವಪರಮೇಶ್ವರಯೋರ್ಭೇದೋ ನ ವಸ್ತು ಕೃತಃ, ವ್ಯೋಮವದಸಂಗತ್ವಾವಿಶೇಷಾತ್ | -ಸೂ.ಭಾ. 1-3-19

ಜೀವ-ಪರಮೇಶ್ವರರಿಗೆ ತೋರುವ ಭೇದವು ಮಿಥ್ಯಾಜ್ಞಾನದಿಂದಾದದ್ದೇ ಹೊರತು ವಸ್ತುಭೇದದಿಂದಲ್ಲ. ಏಕೆಂದರೆ, ಆತ್ಮನಲ್ಲಿ ಅಂಶಾಂಶಿಭಾವವಿಲ್ಲವೆನ್ನುವುದು ಸಮಾನವಾಗಿದೆ. ಇದಕ್ಕೆ ನಿದರ್ಶನ ಆಕಾಶ.

ಜೀವನು ದೇಹಾದಿ ಸಂಬಂಧವುಳ್ಳವನೆಂದು ಸಿದ್ಧವಾಗಿದ್ದರೆ ಜೀವೇಶ್ವರ ಭೇದವು ಸ್ವಾಭಾವಿಕವೆನ್ನಬಹುದಾಗಿತ್ತು. 'ಅಶರೀರಂ ಶರೀರೇಷು' (ಕಠ 1-2-2) 'ಶರೀರಸ್ಥೋऽಪಿ ಕೌಂತೇಯ ನ ಕರೋತಿ ನ ಲಿಪ್ಯತೇ' (ಗೀ. 12-21) ಇತ್ಯಾದಿ ವಚನಗಳಿಂದ ಜೀವಾತ್ಮನು ಪರಮಾರ್ಥದಲ್ಲಿ ಅಸಂಗನೆಂದು ಸಿದ್ಧವಾಗಿದೆ.

**198**

ತೇಷಾಂ ಸರ್ವೇಷಾಮಾತ್ಮೈಕತ್ವ ಸಮ್ಯಗ್ದರ್ಶನಪ್ರತಿಪಕ್ಷಭೂತಾನಾಂ ಪ್ರತಿಬೋಧಾಯೇದಂ ಶಾರೀರಕಮಾರಬ್ಧಮ್ |

-ಸೂ.ಭಾ. 1-3-19

ಆತ್ಮೈಕತ್ವವೆಂಬ ಸಮ್ಯಗ್ದರ್ಶನಕ್ಕೆ ಪ್ರತಿಪಕ್ಷದವರಾದ ಆ ಎಲ್ಲ

ದ್ವೈತವಾದಿಗಳಿಗೂ ತಿಳಿವಳಿಕೆಯನ್ನು ನೀಡುವುದಕ್ಕಾಗಿ ಈ ಶಾರೀರಕಶಾಸ್ತ್ರವು ಪ್ರವೃತ್ತವಾಗಿದೆ.

**199**

**ಯೇ ತು ನಿರ್ಬಂಧಂ ಕುರ್ವಂತಿ ತೇ ವೇದಾಂತಾರ್ಥಂ ಬಾಧಮಾನಾಃ ಶ್ರೇಯೋದ್ವಾರಂ ಸಮ್ಯಗ್ದರ್ಶನಮೇವ ಬಾಧಂತೇ | ಕೃತಕಮನಿತ್ಯಂ ಚ ಮೋಕ್ಷಂ ಕಲ್ಪಯಂತಿ | ನ್ಯಾಯೇನ ಚ ನ ಸಂಗಚ್ಛಂತ ಇತಿ | - ಸೂ. ಭಾ. 1-4-22**

ಜೀವಾತ್ಮನೂ ಪರಮಾತ್ಮನೂ ಭಿನ್ನರೆಂದು ಯಾರು ಆಗ್ರಹವನ್ನಿಟ್ಟುಕೊಂಡಿದ್ದಾರೋ ಅವರು ಉಪನಿಷತ್ತುಗಳ ಅರ್ಥವನ್ನು ವಿರೋಧಿಸುತ್ತಾರೆ. ಶ್ರೇಯೋದ್ವಾರವಾದ ಸಮ್ಯಗ್‌ದರ್ಶನವನ್ನೇ ವಿರೋಧಿಸುತ್ತಾರೆ. ಮೋಕ್ಷವು ಕೃತಕವೆಂದೂ ಅನಿತ್ಯವೆಂದೂ ಕಲ್ಪಿಸುತ್ತಿದ್ದಾರೆ. (ಮೋಕ್ಷವು ನಿತ್ಯವಾದ್ದರಿಂದ )'ಯತ್ಕೃತಕಂ ತದನಿತ್ಯಂ' ಎಂಬ ನ್ಯಾಯಕ್ಕೆ ಅವರು ಹೊಂದಿಕೊಳ್ಳುವುದೂ ಇಲ್ಲ.

**200**

**ಸ್ಥಿತೇ ಚ ಕ್ಷೇತ್ರಜ್ಞಪರಮಾತ್ಮೈಕತ್ವವಿಷಯೇ ಸಮ್ಯಗ್ದರ್ಶನೇ ಕ್ಷೇತ್ರಜ್ಞಃ ಪರಮಾತ್ಮೇತಿ ನಾಮಮಾತ್ರಭೇದಾತ್, ಕ್ಷೇತ್ರಜ್ಞೋಽಯಂ ಪರಮಾತ್ಮನೋ ಭಿನ್ನಃ ಪರಮಾತ್ಮಾಯಂ ಕ್ಷೇತ್ರಜ್ಞಾದ್ಭಿನ್ನ ಇತ್ಯೇವಂ ಜಾತೀಯಕ ಆತ್ಮಭೇದ-ವಿಷಯೋ ನಿರ್ಬಂಧೋ ನಿರರ್ಥಕಃ | ಏಕೋ ಹ್ಯಯಮಾತ್ಮಾ ನಾಮಮಾತ್ರ ಭೇದೇನ ಬಹುಧಾ ಅಭಿಧೀಯತೇ ಇತಿ | -ಸೂ.ಭಾ. 1-4-22**

ಕ್ಷೇತ್ರಜ್ಞ (ಜೀವ), ಪರಮಾತ್ಮ-ಇವರ ಏಕತ್ವವನ್ನು ಕುರಿತ ಸಮ್ಯಗ್ ದರ್ಶನವು ನಿರ್ಣೀತವಾಗಿರಲಾಗಿ, ಕ್ಷೇತ್ರಜ್ಞ ಪರಮಾತ್ಮ ಎಂಬ ಹೆಸರುಗಳ ಭೇದವನ್ನಿಟ್ಟುಕೊಂಡು, "ಈ ಕ್ಷೇತ್ರಜ್ಞನು ಪರಮಾತ್ಮನಿಗಿಂತ ಭಿನ್ನ, ಈ ಪರಮಾತ್ಮನು ಕ್ಷೇತ್ರಜ್ಞನಿಗಿಂತ ಭಿನ್ನ" ಈ ಪ್ರಕಾರವಾಗಿ ಆತ್ಮಭೇದವನ್ನು ಕುರಿತು ಆಗ್ರಹವು ವ್ಯರ್ಥವೇ ಸರಿ. ಒಬ್ಬನೇ ಆತ್ಮನು ಬೇರೆ ಬೇರೆ ಹೆಸರುಗಳಿಂದ ಅನೇಕ ಪ್ರಕಾರವಾಗಿ ಉಕ್ತನಾಗುತ್ತಿದ್ದಾನಲ್ಲವೇ?

**201**

**ನ ಹಿ ವಿವೇಕಿನಾಂ ಪರಸ್ಮಾದನ್ಯೋ ಜೀವೋ ನಾಮ ಕರ್ತಾ ಭೋಕ್ತಾ ವಾ ವಿದ್ಯತೇ| 'ನಾನ್ಯೋಽತೋಽಸ್ತಿ ದ್ರಷ್ಟಾ' ಇತ್ಯಾದಿ ಶ್ರವಣಾತ್ | ಪರ ಏವ ತರ್ಹಿ ಸಂಸಾರೀ ಕರ್ತಾ**

**ಭೋಕ್ತಾ ಚ ಪ್ರಸಜ್ಯೇತ | ಪರಸ್ಮಾದನ್ಯಶ್ಚೇಚ್ಚಿತಿಮಾನ್ ಜೀವಃ ಕರ್ತಾ ಬುದ್ಧ್ಯಾದಿ ಸಂಘಾತ ವ್ಯತಿರಿಕ್ತೋ ನ ಸ್ಯಾತ್ | ನ | ಅವಿದ್ಯಾ ಪ್ರತ್ಯುಪಸ್ಥಾಪಿತತ್ವಾತ್ ಕರ್ತೃತ್ವ ಭೋಕ್ತೃತ್ವಯೋಃ**

**-ಸೂ.ಭಾ. 2-3-40**

ವಿವೇಕಿಗಳಾದ ಜ್ಞಾನಿಗಳ ದೃಷ್ಟಿಯಲ್ಲಿ ಪರಮಾತ್ಮನಿಗೆ ವ್ಯತಿರಿಕ್ತವಾದ ಜೀವನೆಂಬ ಕರ್ತನಾಗಲಿ ಭೋಕ್ತನಾಗಲಿ ಇಲ್ಲವಷ್ಟೆ. ಏಕೆಂದರೆ, 'ನಾನ್ಯೋಽತೋಽಸ್ತಿ ದ್ರಷ್ಟಾ' (ಬೃಹ. 4-3-23) ಇತ್ಯಾದಿ ಶ್ರುತಿಗಳಿವೆ. ಹಾಗಾದರೆ, ಬುದ್ಧ್ಯಾದಿ ಸಂಘಾತಗಳಿಗಿಂತ ಭಿನ್ನನಾಗಿ ಪರಮಾತ್ಮನಿಗಿಂತಲೂ ಭಿನ್ನವಾಗಿ ಇರುವ ಚೇತನನಾದ ಜೀವನೆಂಬ ಕರ್ತೃವನ್ನು ಒಪ್ಪದೇ ಹೋದರೆ, ಪರಮಾತ್ಮನೇ ಸಂಸಾರಿಯೆಂದೂ ಕರ್ತನೆಂದು ಭೋಕ್ತನೆಂದು ಹೇಳಬೇಕಾಗಿ ಬರುತ್ತದೆಯಲ್ಲವೆ? ಇಲ್ಲ. ಕರ್ತೃತ್ವ ಭೋಕ್ತೃತ್ವಗಳು ಅವಿದ್ಯೆಯಿಂದ ತೋರುತ್ತವೆ.

ಕರ್ತೃತ್ವ ಭೋಕ್ತೃತ್ವಗಳು ಅವಿದ್ಯೆಯಿಂದ ತೋರುತ್ತವೆ. ಇವು ಪರಮಾತ್ಮನಿಗೂ ಇಲ್ಲ; ಅಚೇತನವಾದ ಬುದ್ಧ್ಯಾದಿ ಸಂಘಾತಕ್ಕೂ ಇಲ್ಲ. ಬುದ್ಧ್ಯಾದಿ ಸಂಘಾತಗಳಿಂದ ಉಪಹಿತವಾದ ಜೀವ ಭಾವವನ್ನು ಹೊಂದುವ ಆತ್ಮಸ್ವಭಾವಕ್ಕೆ ಮಾತ್ರ ಇದೆ.

**202**

**ತಥಾ ಚಾವಿದ್ಯಾನಿಮಿತ್ತ ಜೀವಭಾವವ್ಯುದಾಸೇನ ಬ್ರಹ್ಮಭಾವಮೇವ ಜೀವಸ್ಯ ಪ್ರತಿಪಾದಯಂತಿ ವೇದಾಂತಾಃ 'ತತ್ತ್ವಮಸಿ' ಇತ್ಯೇವಮಾದಯಃ | ತಸ್ಮಾನ್ನಾಸ್ತಿ ಜೈವೇನ ದುಃಖೇನ ಪರಮಾತ್ಮನೋ ದುಃಖಿತ್ವಪ್ರಸಂಗಃ |**

**-ಸೂ.ಭಾ. 2-3-46**

**'ತತ್ತ್ವಮಸಿ'** ಮುಂತಾದ ಉಪನಿಷದ್ವಾಕ್ಯಗಳು ಅವಿದ್ಯಾಜನ್ಮವಾದ ಜೀವಭಾವವನ್ನು ಹೋಗಲಾಡಿಸಿ, ಜೀವನಿಗೆ ಬ್ರಹ್ಮಭಾವವನ್ನೇ ಪ್ರತಿಪಾದಿಸುತ್ತಿವೆ. ಆದ್ದರಿಂದ ಜೀವನು ದುಃಖಿಯಾದರೆ ಪರಮಾತ್ಮನೂ ದುಃಖಿಯಾಗಲಿ ಎಂಬ ಆಪತ್ತಿ ಇಲ್ಲ.

ಜೀವನ ದುಃಖಿತ್ವವು ಅವಿದ್ಯಾಕಲ್ಪಿತ ಮತ್ತು ಪ್ರತಿಬಿಂಬವು ಕೊಳೆಯಾದರೆ ಬಿಂಬವು ಕೊಳೆಯಾಗುವುದಿಲ್ಲ. ಜೀವನು ಆತ್ಮನ ಪ್ರತಿಬಿಂಬದಂತಿದ್ದಾನೆ.

**203**

**ನ ಹಿ ದ್ವಾವಾತ್ಮಾನಾವೇಕಸ್ಮಿನ್ದೇಹೇ ಸರ್ವಾಂತರೌ ಸಂಭವತಃ | ತದಾ ಹಿ ಏಕಸ್ಯಾಂಜಸ್ಯಂ ಸರ್ವಾಂತರತ್ವಮವಕಲ್ಪ್ಯೇತ | ಏಕಸ್ಯ ತು ಭೂತಗ್ರಾ ಮವನ್ನೈವ ತು ಸರ್ವಾಂತರತ್ವಂ ಸ್ಯಾತ್ |** **-ಸೂ.ಭಾ. 3-3-35**

ಒಂದು ದೇಹದಲ್ಲಿ ಎರಡು ಆತ್ಮಗಳು ಸರ್ವಾಂತರವಾಗಿರುವುದು ಸಂಭವಿಸುವುದಿಲ್ಲ. ಆ ಪಕ್ಷದಲ್ಲಿ ಒಂದು ಆತ್ಮಕ್ಕೆ ಮಾತ್ರ ಸರ್ವಾಂತರತ್ವವು ಸಮಂಜಸವಾಗಿ ಕೂಡಿ ಬಂದೀತು. ಇನ್ನೊಂದು ಆತ್ಮಕ್ಕೆ ಪಂಚಭೂತಗಳಂತೆ ಇನ್ನೊಂದರ ಅಪೇಕ್ಷೆಯಿಂದ ಅಂತರತ್ವ ಬಂದೀತೇ ಹೊರತು ಸರ್ವಾಂತರತ್ವ ಬರುವುದಿಲ್ಲ. (ಆದ್ದರಿಂದ ದೇಹದಲ್ಲಿರುವುದು ಒಂದೇ ಆತ್ಮ)

**'ಯತ್ ಸಾಕ್ಷಾದಪರೋಕ್ಷಾದ್ ಬ್ರಹ್ಮ ಯ ಆತ್ಮಾ ಸರ್ವಾಂತರಃ'** (ಬೃಹ. 3-4-12) ಎಂದು ಆತ್ಮನಿಗೆ ಸರ್ವಾಂತರತ್ವವನ್ನು ಹೇಳಿದೆ. ಎರಡು ಆತ್ಮಗಳಿದ್ದಲ್ಲಿ ಒಂದು ಸರ್ವಾಂತರವಲ್ಲವೆನ್ನಬೇಕಾಗುತ್ತದೆ. 'ದೇಹದಲ್ಲಿ ಪೃಥಿವಿಗಿಂತ ಜಲವು ಅಂತರ, ಜಲಕ್ಕಿಂತ ತೇಜಸ್ಸು ಅಂತರ' ಇತ್ಯಾದಿ ವರ್ಣನೆ ಇದೆ. ಹಾಗೆಯೇ ಒಂದು ಆತ್ಮ ಇನ್ನೊಂದು ಆತ್ಮಕ್ಕಿಂತ ಅಂತರ ಎನ್ನಬೇಕಾಗಿ ಬರುತ್ತದೆ. ಇದು ಶ್ರುತಿವಿರುದ್ಧ.

## 204

**ಅಥ ಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋಽಹಮಿತಿ ನ ಸ ವೇದ |**

**-ಬೃಹ. 1-4-10**

ಇನ್ನು ಯಾರು ಬ್ರಹ್ಮಾತಿರಿಕ್ತವಾದ ಇನ್ನೊಂದು ದೇವತೆಯನ್ನು ಉದ್ದೇಶಿಸಿ 'ಆ ದೇವತೆ ಬೇರೆ, ನಾನು ಬೇರೆ' ಎಂದು ಉಪಾಸನೆ ಮಾಡುತ್ತಾರೋ ಅವರಿಗೆ ಏನೂ ತಿಳಿಯದು.

**"ಅಥ ಯೋಽನ್ಯಾಂ ದೇವತಾಮುಪಾಸ್ತೇಽನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುಃ"** (ಬೃಹ. 1-4-10)

## 205

**ಏಕ ಏವ ಪರಮೇಶ್ವರಃ ಕೂಟಸ್ಥನಿತ್ಯೋ ವಿಜ್ಞಾನಧಾತುರವಿದ್ಯಯಾ ಮಾಯಯಾ ಮಾಯಾವಿವತ್ ಅನೇಕಧಾ ವಿಭಾವ್ಯತೇ, ನಾನ್ಯೋ ವಿಜ್ಞಾನಧಾತುರಸ್ತಿ |**

**ಸೂ.ಭಾ. 1-3-19**

ಕೂಟಸ್ಥನಿತ್ಯನೂ ವಿಜ್ಞಾನಸ್ವರೂಪನೂ ಆದ ಪರಮೇಶ್ವರನು ಒಬ್ಬನೇ ಆಗಿದ್ದು ಇಂದ್ರಜಾಲಿಕನಂತೆ ತನ್ನ ಮಾಯೆಯಿಂದ ಅನೇಕವಾಗಿರುವಂತೆ ಕಾಣಿಸುತ್ತಾನೆ. ಆತನ ಹೊರತನಾಗಿ ಇನ್ನೊಂದು ವಿಜ್ಞಾನಸ್ವರೂಪವಿಲ್ಲ.

**206**

**ತೈರನ್ಯೋನ್ಯವಿರೋಧಿಭಿರಸ್ಮದೀಯೋಽಯಂ ವೈದಿಕಃ ಸರ್ವಾನನ್ಯತ್ವಾತ್ ಆತ್ಮೈಕತ್ವದರ್ಶನಪಕ್ಷಃ ನ ವಿರುಧ್ಯತೇ | ಯಥಾ ಸ್ವಹಸ್ತಪಾದಾದಿಭಿಃ**

**-ಮಾಂ. ಕಾ. ಭಾ. 3-17**

ಪರಸ್ಪರ ವಿರೋಧಿಗಳಾದ ದ್ವೈತಮತಗಳಿಂದ ಆತ್ಮೈಕ್ಯವನ್ನು ಪ್ರತಿಪಾದಿಸುವ ನಮ್ಮ ವೈದಿಕ ಸಿದ್ಧಾಂತಕ್ಕೆ ವಿರೋಧವೇನೂ ಇಲ್ಲ. ಕೈಕಾಲುಗಳಿಂದ ದೇಹಕ್ಕೆ ಹೇಗೆ ವಿರೋಧ ವಿಲ್ಲವೋ ಹಾಗೆ.

**207**

**ನ ಚ ಉಪದೇಶಾರ್ಹಂ ದ್ವೈತಮ್ | ಜಾತಮಾತ್ರ ಪ್ರಾಣಿಬುದ್ಧಿ ಗಮ್ಯತ್ವಾತ್ |**

**-ಬೃಹ. 5-1-1**

ಶಾಸ್ತ್ರವು ದ್ವೈತವನ್ನು ಉಪದೇಶಿಸಬೇಕಾದ್ದಿಲ್ಲ. ಏಕೆಂದರೆ ಹುಟ್ಟಿದ ಸಕಲ ಪ್ರಾಣಿಗಳಿಗೂ ದ್ವೈತವು ತಿಳಿದೇ ಇರುತ್ತದೆ.

ಯಾವುದು ಪ್ರತ್ಯಕ್ಷದಿಂದ ಅಥ‌ವಾ ಅನುಮಾನ ಪ್ರಮಾಣದಿಂದ ತಿಳಿದಿರುವುದಿಲ್ಲವೋ ಅದನ್ನು ಶಾಸ್ತ್ರವು ಬೋಧಿಸಬೇಕು. "ಬೆಂಕಿ ಸುಡುತ್ತದೆ" ಎಂಬುದನ್ನು ಶಾಸ್ತ್ರವು ತಿಳಿಸಬೇಕಾಗಿಲ್ಲ. "ಶಾಸ್ತ್ರವು ಅಜ್ಞಾತ ಜ್ಞಾಪಕ".

**208**

**ನ ಹಿ ಅಹಂಪ್ರತ್ಯಯವಿಷಯಕರ್ತೃವ್ಯತಿರೇಕೇಣ ತತ್ಸಾಕ್ಷೀ ಸರ್ವಭೂತಸ್ಥಃ ಸಮ ಏಕಃ ಕೂಟಸ್ಥನಿತ್ಯಃ ಪುರುಷೋ ವಿಧಿಕಾಂಡೇ ತರ್ಕಸಮಯೇ ವಾ ಕೇನಚಿದಧಿಗತಃ ಸರ್ವಸ್ಯಾತ್ಮಾ |** **- ಸೂ.ಭಾ. 1-1-4**

'ನಾನು' ಎಂಬ ಅಹಂಪ್ರತ್ಯಯಕ್ಕೆ ವಿಷಯನಾದ ಯಾವ ಕರ್ತೃವಿದ್ದಾನೋ ಆತನನ್ನು ಬಿಟ್ಟು ಅಹಂ ಪ್ರತ್ಯಯಕ್ಕೆ ಸಾಕ್ಷಿಯೂ ಸರ್ವಭೂತಸ್ಥನೂ ನಿರ್ವಿಶೇಷನೂ ಅದ್ವಿತೀಯನೂ ಕೂಟಸ್ಥನಿತ್ಯನೂ ಆದ ಇನ್ನೊಬ್ಬ ಪುರುಷನು ವಿಧಿಕಾಂಡವಾದರೆ ಮೀಮಾಂಸೆಯಲ್ಲಾಗಲಿ ಸಾಂಖ್ಯಾದಿತರ್ಕಶಾಸ್ತ್ರದಲ್ಲಾಗಲಿ ತಿಳಿದು ಬರುವುದಿಲ್ಲ.

'ನಾನು' ಎಂಬ ಜ್ಞಾನಕ್ಕೆ ವಿಷಯನಾಗತಕ್ಕವನು ಜೀವಾತ್ಮ. ನನಗೆ ಜ್ಞಾನ ಬಂದಿದೆಯೆಂದು ಯಾರಿಗೆ ಗೊತ್ತಾಗುತ್ತದೆಯೋ ಅವನೇ ಸಾಕ್ಷಿ. ಸಾಕ್ಷಿಯು ನಾನೇ ಎಂದು

ಎಲ್ಲರೂ ಹೇಳುತ್ತಾರೆ. ಅವನೇ ಪರಮಾತ್ಮ. ವಿಷಯನಾದ ಜೀವಾತ್ಮನು ಅಂತಃ ಕರಣವೆಂಬ ಉಪಾಧಿಯಿಂದ ಸಹಿತನಾಗಿದ್ದಾನೆ. ಸಾಕ್ಷಿಯು ಉಪಾಧಿರಹಿತನಾಗಿ ಶುದ್ಧನಾಗಿದ್ದಾನೆ ಎಂಬುದೇ ಭೇದ. ಇದು ವೇದಾಂತ ಶಾಸ್ತ್ರವನ್ನು ಬಿಟ್ಟು ಇನ್ನೆಲ್ಲಿಯೂ ತಿಳಿದು ಬರುವುದಿಲ್ಲ.

**209**

**ಏವಮೇಕಮಪಿ ಬ್ರಹ್ಮ ಅಪೇಕ್ಷಿತೋಪಾಧಿಸಂಬಂಧಿಂ ನಿರಸ್ತೋಪಾಧಿ ಸಂಬಂಧಂ ಚ ಉಪಾಸ್ಯತ್ವೇನ, ಜ್ಞೇಯತ್ವೇನ ಚ ವೇದಾಂತೇಷು ಉಪದಿಶ್ಯತೇ |**

**-ಸೂ.ಭಾ. 1-1-4**

ಬ್ರಹ್ಮವು ಒಂದೇ ಆದರೂ ಉಪಾಸನೆಗಾಗಿ ಉಪಾಧಿ ಸಂಬಂಧದಿಂದ ಅಪರ ಬ್ರಹ್ಮವೆಂದೂ ಉಪಾಧಿಯನ್ನು ತೊರೆದು ಜ್ಞೇಯವಾಗಿ ಪರಬ್ರಹ್ಮವೆಂದೂ ಎರಡು ವಿಧವಾಗಿ ಉಪನಿಷತ್ತುಗಳಲ್ಲಿ ತಿಳಿಸಲ್ಪಟ್ಟಿದೆ.

**'ಏತದ್ವೈ ಸತ್ಯಕಾಮ ಪರಂ ಚ ಅಪರಂ ಚ ಬ್ರಹ್ಮ ಯದೋಂಕಾರಃ'** (ಪ್ರ. 5-2) ಎಂದು ಪ್ರಶ್ನೋಪನಿಷತ್ತಿನಲ್ಲಿದೆ. ಉಪಾಸನಾ ಸೌಕರ್ಯಕ್ಕಾಗಿ ನಾಮರೂಪಗಳನ್ನು ಕಲ್ಪಿಸಿ ಹೇಳಿದ್ದು ಅಪರಬ್ರಹ್ಮ. **'ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ'** (ಬೃಹ. 4-5-15) ಇತ್ಯಾದಿಯಾಗಿ ಉಪಾಧಿರಹಿತವಾದ ಬ್ರಹ್ಮವನ್ನು ಹೇಳಲಾಗಿದೆ. ಇದು ಜ್ಞೇಯವಾದದ್ದು. ಇದೇ ಪರಬ್ರಹ್ಮ. ಹೀಗೆ ನಾಮರೂಪೋಪಾಧಿಗಳಿಂದ ಒಂದೇ ವಸ್ತುವನ್ನು ಎರಡು ಹೆಸರುಗಳಿಂದ ವರ್ಣಿಸಿದ್ದಾರೆ. ಎರಡು ಬ್ರಹ್ಮಗಳಿಲ್ಲ.

**210**

**ತಸ್ಮಾತ್ ಉತ್ಪತ್ತ್ಯಾದಿಶ್ರುತಯಃ ಆತ್ಮೈಕತ್ವ ಬುದ್ಧ್ಯವತಾರಾಯೈವ ನಾನ್ಯಾರ್ಥಾಃ ಕಲ್ಪಯಿತುಂ ಶಕ್ಯಾಃ |**

**-ಮಾಂ. ಕಾ. ಭಾ. 3-15**

ಜಗತ್ತಿನ ಸೃಷ್ಟಿ ಮೊದಲಾದ್ದನ್ನು ಹೇಳುವ ವೇದವಾಕ್ಯಗಳು ಆತ್ಮೈಕತ್ವವನ್ನು ತಿಳಿಸಿಕೊಡುವ ಕಡೆಗೆ ಬುದ್ಧಿಯು ಪ್ರವೇಶಿಸಲೆಂದು ಹೊರಟಿವೆ; ಬೇರೆ ಉದ್ದೇಶಕ್ಕಾಗಿ ಹೊರಟಿವೆಯೆಂದು ಕಲ್ಪಿಸಲಾಗುವುದಿಲ್ಲ.

ಬ್ರಹ್ಮ ಪ್ರಕರಣದಲ್ಲಿಯೇ ಸೃಷ್ಟಿ ವಾಕ್ಯಗಳು ಬಂದಿರುತ್ತವೆ. ಸೃಷ್ಟಿ ಜ್ಞಾನಕ್ಕೆ ಫಲವೇನೆಂದು ಹೇಳಿಲ್ಲ. ಬ್ರಹ್ಮಜ್ಞಾನಕ್ಕೆ ಫಲವನ್ನು ಹೇಳಿದೆ. ಫಲವತ್ತಾದ್ದರ

ಸಂನಿಧಿಯಲ್ಲಿ ಇರುವ ಅಫಲವತ್ತಾದ್ದು ಅದರ ಅಂಗವೆಂದು ಭಾಷಿಸಬೇಕೆಂದು ನ್ಯಾಯವಿದೆ. ಸೃಷ್ಟಿಮೂಲವಾದದ್ದು ಒಂದೇ ಎಂದು ತಿಳಿಸುವುದು ಸೃಷ್ಟಿ ವಾಕ್ಯಗಳ ತಾತ್ಪರ್ಯ.

## 211

**ಯೋಽಪಿ ದೋಷಶ್ಚೋದ್ಯತೇ ಕೈಶ್ಚಿದವಿದ್ಯಯಾ ಶೀಲ ಆತ್ಮನಃ ಸದ್ವಿತೀಯತ್ವಾತ್ ಅದ್ವೈತಾನುಪಪತ್ತಿರಿತಿ ಸೋಽಪ್ಯೇತೇನ ಪ್ರತ್ಯುಕ್ತಃ |**

**-ಸೂ.ಭಾ. 4-1-3**

ಅವಿದ್ಯೆಯೆಂಬುದಿದ್ದ ಮೇಲೆ ಆತ್ಮನು ಸದ್ವಿತೀಯನಾಗುತ್ತಾನೆ. ಆಗ ಅದ್ವೈತವು ಸಿದ್ಧಿಸುವುದಿಲ್ಲವೆಂಬ ಒಂದು ದೋಷವನ್ನು ಕೆಲವರು ಹೇಳುತ್ತಾರೆ. ಇದು ಯುಕ್ತವಲ್ಲ. ಜೀವನಿಗೆ ದ್ವೈತವು ಕಾಣುವುದರಿಂದ ಅವನಿಗೆ ಅವಿದ್ಯೆಯಿದೆ ಎನ್ನಬಹುದು. ಪರಮಾರ್ಥದಲ್ಲಿ ಅವಿದ್ಯೆಯು ತೊಲಗಿದಾಗ ಜೀವ ಎಂಬುವನು ಬ್ರಹ್ಮವೇ ಆಗಿರುತ್ತಾನೆ.

ಜೀವಾವಸ್ಥೆಯಲ್ಲಿ ದ್ವೈತವು ಕಾಣುವುದರಿಂದ ಅವಿದ್ಯೆ ಇರುತ್ತದೆ. ಸಮ್ಯಗ್ ಜ್ಞಾನವಾದಾಗ ಅವಿದ್ಯೆ ಇರುವುದೇ ಇಲ್ಲ. ಪರಮಾರ್ಥದಲ್ಲಿ ಅದು ಇರುವುದೇ ಇಲ್ಲವಾದ್ದರಿಂದ ಅದ್ವೈತಕ್ಕೆ ಹಾನಿ ಇಲ್ಲ. ಪರಮಾರ್ಥದಲ್ಲಿ ಅದ್ವೈತ. ವ್ಯವಹಾರದಲ್ಲಿ ದ್ವೈತ. ಅವಿದ್ಯೆ ಅನಿರ್ವಾಚ್ಯ.

## 212

**ಕಾಪಿಲಕಾಣಾದಾದಿತರ್ಕಶಾಸ್ತ್ರವಿರೋಧ ಇತಿ ಚೇತ್ ತೇಷಾಂ ಮೂಲಾಭಾವೇ ವೇದವಿರೋಧೇ ಚ ಭ್ರಾಂತತ್ವೋಪಪತ್ತೇಃ |**

**-ತೈ. ಭಾ. 3-4**

ಅದ್ವೈತ ದರ್ಶನದಲ್ಲಿ ಕಪಿಲರ ಸಾಂಖ್ಯ. ಕಣಾದರ ವೈಶೇಷಿಕ ಮೊದಲಾದ ಶಾಸ್ತ್ರಗಳಿಗೆ ವಿರೋಧವು ಬರುತ್ತದೆಯಲ್ಲವೆ? ಎಂದರೆ, ಹಾಗಲ್ಲ; ಕಪಿಲಕಣಾದಾದಿಗಳ ಹೇಳಿಕೆಗೆ ಯಾವ ಆಧಾರವೂ ಇಲ್ಲ. ಅದು ವೇದ ವಿರುದ್ಧವೂ ಆಗಿದೆಯಾದ್ದರಿಂದ ಕಪಿಲಾದಿಗಳು ಭ್ರಾಂತಿಯಾದ ಹಾಗೆ ಹೇಳಿದ್ದಾರೆಂದು ಸಿದ್ಧವಾಗುತ್ತದೆ.

## 213

**ಶಾಸ್ತ್ರೋಪಪತ್ತಿಭ್ಯಾಮವಧಾರಿತತ್ವಾತ್ ಅದ್ವಯಾತ್ಮ ದರ್ಶನಂ ಸಮ್ಯಗ್ ದರ್ಶನಮ್ | ತದ್ಬಾಹ್ಯತ್ವಾತ್ ಮಿಥ್ಯಾದರ್ಶನಮನ್ಯತ್ |**

**-ಮಾಂ. ಕಾ. ಭಾಷ್ಯ 3-17**

ವೇದಾಂತ ಶಾಸ್ತ್ರದಿಂದಲೂ ಅನುಭವಾನುಸಾರಿಯಾದ ಯುಕ್ತಿಯಿಂದಲೂ ನಿರ್ಣೀತವಾಗಿರುವುದರಿಂದ ಆತ್ಮನು ಅದ್ವಿತೀಯನೆಂಬ ದರ್ಶನವೇ ಸಮ್ಯಗ್ ದರ್ಶನ. ಉಳಿದುದೆಲ್ಲವೂ ಮಿಥ್ಯಾದರ್ಶನ.



# ೯ ಅಧ್ಯಾಸ-ಮಾಯಾ-ಅವಿದ್ಯಾ

ಅಧಿ ಎಂಬ ಉಪಸರ್ಗಪೂರ್ವಕವಾದ ಅಸ್ ಧಾತುವಿನಿಂದ ಅಧ್ಯಾಸ ಶಬ್ದವು ಹುಟ್ಟಿದೆ. ಅಸು-ಕ್ಷೇಪೇ. ಅಸ್ಯತಿ=ಚೆಲ್ಲುತ್ತಾನೆ, ಎಸೆಯುತ್ತಾನೆ. ಅಧಿ + ಆಸ = ಅಧ್ಯಾಸ. ಇದು ಜ್ಞಾನಕ್ಕೆ ಸಂಬಂಧಿಸಿದ್ದು. ಅದಲ್ಲದ ವಸ್ತುವಿನಲ್ಲಿ ಇನ್ನೊಂದರ ಧರ್ಮವನ್ನು ಎಸೆಯುವುದು, ಹೇರುವುದು. ಕಪ್ಪೆಚಿಪ್ಪಿನಲ್ಲಿ ಬೆಳ್ಳಿಯ ಧರ್ಮವನ್ನು ಹೊರಿಸುವುದು-ಎಂದರೆ ಅದನ್ನು ಬೆಳ್ಳಿಯೆಂದು ತಪ್ಪಾಗಿ ತಿಳಿದುಕೊಳ್ಳುವುದು ಹಗ್ಗವನ್ನು ಹಾವೆಂದು ತಿಳಿದಾಗ ಹಗ್ಗದಲ್ಲಿ ಹಾವಿನ ಧರ್ಮವನ್ನು ಹೊರಿಸಿದಂತಾಯಿತು. 'ಅಧ್ಯಾಸೋ ನಾಮ ಅತಸ್ಮಿನ್ ತದ್ ಬುದ್ಧಿಃ = ಅದಲ್ಲದ್ದರಲ್ಲಿ ಅದೆಂಬ ಬುದ್ಧಿಯನ್ನಿಡುವುದಕ್ಕೆ ಅಧ್ಯಾಸವೆಂದು ಹೆಸರು. ಭ್ರಾಂತಿಯೆಂದು ತಾತ್ಪರ್ಯ. ಆಹಾರ್ಯ ಜ್ಞಾನ ಎಂಬ ಇನ್ನೊಂದು ಬಗೆಯ ಜ್ಞಾನವುಂಟು. ಬೇಕೆಂದು ಉದ್ದೇಶಪೂರ್ವಕವಾಗಿ ಹೊರಿಸಿದ ಜ್ಞಾನವದು. ಅದಕ್ಕೆ ಉತ್ಪ್ರೇಕ್ಷೆಯೆನ್ನುತ್ತಾರೆ. ಈ ಮುಖವನ್ನು ಕಮಲವೆಂದೇ ತಿಳಿಯುತ್ತೇನೆ. ಈ ಮುಖವು ಕಮಲವೇ ಸರಿ-ಎಂಬಲ್ಲಿ ಆಹಾರ್ಯಜ್ಞಾನವಿದೆ. ಅಧ್ಯಾಸವಿಲ್ಲ. ಆಹಾರ್ಯಜ್ಞಾನದಲ್ಲಿ ಅದು ಮುಖವೆಂದೂ ಕಮಲವಲ್ಲವೆಂದೂ ತಿಳಿದಿರುತ್ತದೆ. ಆದರೂ ತನ್ನ ಇಚ್ಛೆಯಿಂದ ಅದು ಕಮಲವೆಂದು ಕಲ್ಪಿಸಿಕೊಂಡಿರುತ್ತಾನೆ. ಅಧ್ಯಾಸದಲ್ಲಿ ಆ ರೀತಿ ಬಾಧಜ್ಞಾನವಿರುವುದಿಲ್ಲ.

ಈ ಅಧ್ಯಾಸವೇ ಅವಿದ್ಯೆ. ಅದೊಂದು ತಮೋಗುಣದಿಂದಾದ ಭ್ರಮೆ. ಅನಾದಿಯಾದ ಈ ಅವಿದ್ಯೆಯಿಂದ ಬ್ರಹ್ಮವಸ್ತುವಿನ ವಿಷಯದಲ್ಲಿ ಜೀವ, ಜಗತ್ತುಗಳೆಂಬ ಭ್ರಮೆ ಗಟ್ಟಿಯಾಗಿ ಕುಳಿತಿರುತ್ತದೆ. ಅವಿದ್ಯಾಕಲ್ಪಿತ ನಾಮರೂಪಗಳನ್ನು ಈಶ್ವರನ ಮಾಯೆ, ಶಕ್ತಿ, ಪ್ರಕೃತಿಯೆಂದು ಹೇಳುತ್ತಾರೆ. ವಸ್ತುತಃ ನಾಮರೂಪಗಳ ತಳದಲ್ಲಿರುವ ಮಾಯೆಯು ಬೀಜಶಕ್ತಿ ಅದು. ಮಾಯೆಯು ಅವಿದ್ಯಾ ಕಲ್ಪಿತವೆಂದು ಹೇಳಿದರೂ ಕೆಲವು ಕಡೆ ಮಾಯೆ, ಅವಿದ್ಯೆಗಳನ್ನು ಒಂದೇ ಅರ್ಥದಲ್ಲಿ ಬಳಸುವುದುಂಟು. ಅಜ್ಞಾನವೆಂದರೂ ಅದೇ. ಅದು ಮೂರು ವಿಧ. ಅಗ್ರಹಣ (ತಿಳಿಯದಿರುವುದು), ವಿಪರೀತಗ್ರಹಣ (ಇನ್ನೊಂದು ವಸ್ತುವೆಂದು ತಪ್ಪಾಗಿ ತಿಳಿಯುವುದು), ಸಂಶಯ ಎಂದು. ಮನುಷ್ಯನು ಹುಟ್ಟಿದಾಗ ಎಲ್ಲ ವಿಷಯಗಳಲ್ಲಿಯೂ ಅಜ್ಞಾನವಿರುತ್ತದೆ. ಅದು ವಿದ್ಯಾಭ್ಯಾಸದಿಂದ ಕ್ರಮವಾಗಿ ತೊಲಗುತ್ತದೆ. ಆದರೆ ತನ್ನ ಸ್ವರೂಪದ ಅಜ್ಞಾನವು ಹೋಗುವುದು ಕಷ್ಟ. ಈ ಆತ್ಮವಿಷಯಕವಾದ ಅವಿದ್ಯೆ ಅತ್ಯಂತ ಪ್ರಬಲವಾದದ್ದು. ಈ ಅವಿದ್ಯೆಯು ಗಟ್ಟಿಯಾಗಿ ಉಳಿದಿರುವುದರಿಂದಲೇ ಪ್ರಮಾಣ ಪ್ರಮೇಯಾದಿ ವ್ಯವಹಾರಗಳು ನಡೆಯುತ್ತವೆ. ಈ ಅವಿದ್ಯೆಯಿಂದಲೇ ಕರ್ತೃತ್ವ, ಭೋಕ್ತೃತ್ವ ಮುಂತಾದ ಸಂಸಾರ ಚಕ್ರವು ಸುತ್ತುತ್ತದೆ. ಅವಿದ್ಯೆಗೆ ಅಥವಾ ಮಾಯೆಗೆ ಅವ್ಯಕ್ತವೆಂದೂ ಹೆಸರಿದೆ. ರೂಪಾದಿಗಳಿಲ್ಲವಾದ್ದರಿಂದ ಇದು ವ್ಯಕ್ತವಾಗಿ ಕಾಣುವುದಿಲ್ಲ. ಇದನ್ನು ಅನಿರ್ವಚನೀಯವೆಂದು ಹೇಳುತ್ತಾರೆ. ಏಕೆಂದರೆ, ಇದು ಸತ್‌ಪದಾರ್ಥವೆ? ಅಸತ್‌ಪದಾರ್ಥವೆ? ಎಂದು ನಿಶ್ಚಯಿಸುವುದಕ್ಕೆ

ಆಗುವುದಿಲ್ಲ. ಆತ್ಮಜ್ಞಾನವಾದಾಗ ಪರಮಾರ್ಥದಲ್ಲಿ ಇಲ್ಲವಾದ್ದರಿಂದ ಸತ್ ಅಲ್ಲ. ಆದರೆ ವ್ಯವಹಾರಕಾಲದಲ್ಲಿ ಇದ್ದೇ ಇರುವುದರಿಂದ ಅಸತ್ ಕೂಡ ಅಲ್ಲ. ಆದ್ದರಿಂದ ಹೀಗೆಂದು ಗುರುತಿಸುವುದಕ್ಕೆ ಆಗದ ಪ್ರಯುಕ್ತ ಅನಿರ್ವಚನೀಯ. 'ಅವಿದ್ಯಾಗ್ರಂಥಿಂವಿಕಿರತೀಹ ಸೋಮ್ಯ', 'ಇಂದ್ರೋ ಮಾಯಾಭಿಃ ಪುರುರೂಪ ಈಯತೇ' ಇತ್ಯಾದಿ ಶ್ರುತಿವಾಕ್ಯಗಳಿಂದ ಇದನ್ನು ಒಪ್ಪಿಕೊಳ್ಳಬೇಕು.

**214**

**ಕೋಽಯಮಧ್ಯಾಸೋ ನಾಮೇತಿ | ಉಚ್ಯತೇ | ಸ್ಮೃತಿರೂಪಃ ಪರತ್ರ ಪೂರ್ವದೃಷ್ಟಾವಭಾಸಃ | ತಂ ಕೇಚಿತ್ ಅನ್ಯತ್ರ ಅನ್ಯಧರ್ಮಾಧ್ಯಾಸಃ ಇತಿ ವದಂತಿ |**

**-ಸೂ.ಭಾ. ಅಧ್ಯಾಸಭಾಷ್ಯ**

ಈ ಅಧ್ಯಾಸವೆಂದರೆ ಯಾವುದು? ಹೇಳುತ್ತೇವೆ. ಇನ್ನೊಂದು ವಸ್ತುವಿನಲ್ಲಿ, ಮೊದಲು ನೋಡಿದ ಮತ್ತೊಂದು ವಸ್ತುವಿಗೆ ಸಂಬಂಧಿಸಿದ ಸ್ಮೃತಿರೂಪವಾದ ಜ್ಞಾನ ಅಧ್ಯಾಸವೆನಿಸುತ್ತದೆ. ಮತ್ತೆ ಕೆಲವರು ಅನ್ಯವಸ್ತುವಿನಲ್ಲಿ ಮತ್ತೊಂದು ವಸ್ತುವಿನ ಧರ್ಮವನ್ನು ತಪ್ಪಾಗಿ ತಿಳಿದುಕೊಳ್ಳುವುದು ಅಧ್ಯಾಸವೆನ್ನುತ್ತಾರೆ.

ಮೊದಲಿನದು ಭಾಷ್ಯಕಾರರು ಹೇಳಿದ ಲಕ್ಷಣ. ಈ ವಾಕ್ಯಕ್ಕೆ ನಾನಾ ವಿಧವಾಗಿ ಅರ್ಥಮಾಡಿದ್ದಾರೆ. ಎರಡನೆಯದು ಅನ್ಯಥಾಖ್ಯಾತಿವಾದಿಗಳ ಲಕ್ಷಣ. ಹೀಗೆ ಇದರ ಲಕ್ಷಣ ಬಹುವಿಧವಾಗಿದೆ. ಅಧ್ಯಾಸವೆಂದರೆ ಭ್ರಮೆಯೆಂದು ಸಾಮಾನ್ಯವಾದ ಅರ್ಥ.

**215**

**ಅಧ್ಯಾಸೋ ನಾಮ ಅತಸ್ಮಿನ್ ತದ್ಬುದ್ಧಿರಿತ್ಯವೋಚಾಮ |**

**-ಸೂ.ಭಾ. ಅಧ್ಯಾಸಭಾಷ್ಯ**

ಅದಲ್ಲದ್ದರಲ್ಲಿ ಅದು ಎಂಬ ಬುದ್ಧಿಯೇ ಅಧ್ಯಾಸವೆಂದು ಹಿಂದೆ ಹೇಳಿದ್ದೇವೆ.

**216**

**ತಮೇತಮೇವಂ ಲಕ್ಷಣಮಧ್ಯಾಸಂ ಪಂಡಿತಾ ಅವಿದ್ಯೇತಿ ಮನ್ಯಂತೇ | ತದ್ವಿವೇಕೇನ ಚ ವಸ್ತುಸ್ವರೂಪಾವಧಾರಣಂ ವಿದ್ಯಾಮಾಹುಃ |**

**-ಸೂ.ಭಾ. ಅಧ್ಯಾಸಭಾಷ್ಯ**

ಈ ಲಕ್ಷಣವುಳ್ಳ ಅಧ್ಯಾಸವನ್ನು ಪಂಡಿತರು ಅವಿದ್ಯೆಯೆಂದು ತಿಳಿದಿದ್ದಾರೆ.

ಅಧ್ಯಸ್ತವಾದದ್ದನ್ನು ನಿಷೇಧಿಸಿ ನಿಜವಾದ ವಸ್ತುಸ್ವರೂಪವನ್ನರಿಯುವುದು ವಿದ್ಯೆಯೆನ್ನುತ್ತಾರೆ.

**217**

**ಅವ್ಯಕ್ತಾ ಹಿ ಸಾ ಮಾಯಾ, ತತ್ತ್ವಾನ್ಯತ್ವನಿರೂಪಣಸ್ಯ ಅಶಕ್ಯತ್ವಾತ್ |**
**-ಸೂ.ಭಾ. 1-1-3**

ಅದರ ನಿಜಸ್ವರೂಪವನ್ನಾಗಲಿ, ಇನ್ನೊಂದಕ್ಕಿಂತ ಯಾವ ರೀತಿ ಅನ್ಯವೆಂದಾಗಲಿ ವಿವರಿಸುವುದಕ್ಕೆ ಅಶಕ್ಯವಾದ್ದರಿಂದ ಮಾಯೆಯು ಅವ್ಯಕ್ತವಾದದ್ದು ಎಂದರೆ ಅನಿರ್ವಚನೀಯವಾದ್ದದು.

**218**

**ಸಾ ಚ ಅವಿದ್ಯಾ ನಾತ್ಮನಃ ಸ್ವಾಭಾವಿಕೋ ಧರ್ಮಃ** **-ಬೃಹ. 4-3-20**

ಆ ಅವಿದ್ಯೆಯು ಆತ್ಮನ ಸ್ವಾಭಾವಿಕ ಧರ್ಮವಲ್ಲ.

ವಿದ್ಯೆಯಿಂದ ಅವಿದ್ಯೆ ಸಂಪೂರ್ಣವಾಗಿ ನಾಶವಾಗುತ್ತದೆ. ಸ್ವಾಭಾವಿಕ ಧರ್ಮವಾಗಿದ್ದರೆ ನಾಶವಾಗುತ್ತಿರಲಿಲ್ಲ.

**219**

**ಸರ್ವಜ್ಞಸ್ಯೇಶ್ವರಸ್ಯಾತ್ಮಭೂತ ಇವಾವಿದ್ಯಾಕಲ್ಪಿತೇ ನಾಮರೂಪೇ ತತ್ತ್ವಾನ್ಯತ್ವಾಭ್ಯಾಮನಿರ್ವಚನೀಯೇ ಸಂಸಾರ ಪ್ರಪಂಚಬೀಜ ಭೂತೇ ಸರ್ವಜ್ಞೇಶ್ವರಸ್ಯ ಮಾಯಾಶಕ್ತಿಃ ಪ್ರಕೃತಿರಿತಿ ಚ ಶ್ರುತಿಸ್ಮೃತ್ಯೋರಭಿಲಪ್ಯೇತೇ ||**
**-ಸೂ. ಭಾ. 2-1-14**

ಸರ್ವಜ್ಞನಾದ ಈಶ್ವರನಲ್ಲಿ ಕೂಡಿಹೋಗಿವೆಯೋ ಎಂಬಂತೆ ಇರತಕ್ಕವು ಅವಿದ್ಯಾಕಲ್ಪಿತಗಳಾದ ನಾಮರೂಪಗಳು. ಇವುಗಳು ತತ್ತ್ವ-ಅನ್ಯತ್ವಗಳಿಂದ ಹೇಳಲು ಶಕ್ಯವಾಗದಿರುವ ಪ್ರಯುಕ್ತ ಅನಿರ್ವಚನೀಯುಗಳು. ಸಂಸಾರ ವಿಸ್ತಾರಕ್ಕೆ ಬೀಜರೂಪವಾದವು. ಈ ನಾಮರೂಪಗಳು ಸರ್ವಜ್ಞನಾದ ಈಶ್ವರನ ಮಾಯಾಶಕ್ತಿಯೆಂದೂ ಪ್ರಕೃತಿಯೆಂದೂ ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟಿವೆ.

**220**

**ನ ಹಿ ರಜ್ಜ್ವಾದೀನಾಮವಿದ್ಯಾಸ್ವಭಾವವ್ಯತಿರೇಕೇಣ ಸರ್ಪಾದ್ಯಾಭಾಸತ್ವೇ ಕಾರಣಂ ಶಕ್ಯಂ ವಕ್ತುಮ್ |** **-ಮಾಂಡೂಕ್ಯ ಆಗಮ 1-9**

ಹಗ್ಗವೇ ಮುಂತಾದವು ಹಾವು ಮುಂತಾದ ರೂಪದಲ್ಲಿ ತೋರಿಕೊಳ್ಳುವುದಕ್ಕೆ ಅವಿದ್ಯಾಸ್ವಭಾವವನ್ನು ಬಿಟ್ಟರೆ ಇನ್ನಾವ ಕಾರಣವನ್ನೂ ಹೇಳಲಾಗುವುದಿಲ್ಲ.

ಜೀವನಿಗೆ ತನ್ನ ಅಜ್ಞಾನದಿಂದ ಹಗ್ಗವು ಹಾವಾಗಿ ತೋರುತ್ತದೆ. ಪರಮಾತ್ಮನು ತನ್ನ ಮಾಯಾಶಕ್ತಿಯ ಬಲದಿಂದ ಆಕಾಶಾದಿರೂಪವಾಗಿ ತೋರುತ್ತಾನೆ.

**221**

**ತಾಮಸೋ ಹಿ ಪ್ರತ್ಯಯಃ ಆವರಣಾತ್ಮಕತ್ವಾತ್ ಅವಿದ್ಯಾ | ವಿಪರೀತಗ್ರಾಹಕಃ, ಸಂಶಯೋಪಸ್ಥಾಪಕಃ, ಅಗ್ರಹಣಾತ್ಮಕೋ ವಾ |** **-ಗೀತಾ 13-2**

ಅವಿದ್ಯೆಯೆಂಬುದು ತಾಮಸವಾದ ತಿಳಿವಳಿಕೆ. ಅದು ಮುಸುಕಿನಂತೆ. (ಸತ್ಯವನ್ನು ಮರೆ ಮಾಡುತ್ತದೆ). ವಸ್ತುವಿನ ಯಥಾರ್ಥತೆಗೆ ವಿರುದ್ಧವಾದ್ದನ್ನು ಗ್ರಹಿಸುವಂತೆಯೋ, ಸಂಶಯವನ್ನುಂಟುಮಾಡುವಂತೆಯೋ, ವಿಷಯವೇನನ್ನೂ ಗ್ರಹಿಸದಂತೆ ಮಾಡತಕ್ಕದ್ದಾಗಿಯೋ ಇರುತ್ತದೆ.

ವಿಪರೀತಜ್ಞಾನ, ಸಂಶಯಜ್ಞಾನ ಅಥವಾ ಜ್ಞಾನಾಭಾವ-ಎಂಬಿವು ಅವಿದ್ಯೆಯ ಮೂರು ಬಗೆಗಳು.

**222**

**ಅವಿದ್ಯಾ ಸರ್ವಾತ್ಮಾನಂ ಸಂತಮಸರ್ವಾತ್ಮತ್ವೇನ ಗ್ರಾಹಯತಿ |**
**-ಬೃಹ. 4-3-20**

ಸರ್ವಾತ್ಮನಾದವನು ಸರ್ವಾತ್ಮನಲ್ಲವೆಂಬ ಬುದ್ಧಿಯನ್ನು (ಭ್ರಾಂತಿಯನ್ನು) ಅವಿದ್ಯೆ ಉಂಟುಮಾಡುತ್ತದೆ.

**223**

**ಅವಿದ್ಯಯಾ ಹಿ ದ್ವಿತೀಯಂ ಪ್ರವಿಭಜ್ಯತೇ |** **-ಬೃಹ. 4-3-32**

ಎರಡನೆಯದು ವಸ್ತುವೆಂದು ವಿಭಕ್ತವಾಗಿ ತೋರುವುದು ಅವಿದ್ಯೆಯಿಂದಲೇ.

**224**

**ಮಿಥ್ಯಾಜ್ಞಾನ ವಿಜೃಂಭಿತಂ ನಾನಾತ್ವಮ್ | -ಸೂ.ಭಾ. 2-1-14**

ಅನೇಕತ್ವವು ಮಿಥ್ಯಾಜ್ಞಾನದ ವಿಜೃಂಭಣೆಯೇ ಸರಿ.

**225**

**ಭಯಂ ಹಿ ನಾಮ ಅವಿದ್ಯಾಕಾರ್ಯಮ್ | -ಬೃಹ. 3-2-1**

ಭಯವೆಂಬುದು ಅವಿದ್ಯೆಯಿಂದ ಹುಟ್ಟತಕ್ಕದ್ದು.

**ಯಸ್ತು ಪರಮಾರ್ಥಾತ್ಮಾ ಅಸಾವಪಿ ಸರ್ವದಾ ಅವಿದ್ಯಯಾ ಹತ ಇವ | ವಿದ್ಯಮಾನಫಲಾಭಾವಾತ್ ಇತಿ ಸರ್ವೇ ಆತ್ಮಹನ ಏವ ಅವಿದ್ವಾಂಸಃ|**
**-ಗೀತಾ 13-28**

ನಿಜವಾಗಿ ಯಾವ ಆತ್ಮನಿದ್ದಾನೋ ಅವನೂ ಸಹ ಅಜ್ಞಾನಿಗಳಿಗೆ ಹತನಂತೆಯೇ ಆಗುತ್ತಾನೆ. ಏಕೆಂದರೆ ಆತ್ಮನ ಅಸ್ತಿತ್ವದಿಂದ ಅವರಿಗೆ ಯಾವ ಫಲವೂ ಇಲ್ಲ. ಆದ್ದರಿಂದ ಅಜ್ಞಾನಿಗಳೆಲ್ಲರೂ ಆತ್ಮಹತ್ಯಾಕಾರಿಗಳೇ.

**226**

**ಅವಿದ್ಯಾಮಾತ್ರಸ್ವಭಾವೋ ಹಿ ಕರೋತಿ ಲಿಪ್ಯತೇ ಇತಿ ವ್ಯವಹಾರೋಭವತಿ| ನ ತು ಪರಮಾರ್ಥತ ಏಕಸ್ಮಿನ್ ಪರಮಾತ್ಮನಿ ತದಸ್ತಿ |**
**-ಗೀತಾ 13-31**

ಆತ್ಮನು ಮಾಡುತ್ತಾನೆ, (ಕರ್ಮಫಲದಿಂದ) ಲಿಪ್ತನಾಗುತ್ತಾನೆ-ಎಂಬ ವ್ಯವಹಾರವು ಅವಿದ್ಯಾಮಾತ್ರ ಸ್ವಭಾವದಿಂದ ಆದದ್ದು. ಅದ್ವಿತೀಯವಾದ ಆ ಪರಮಾತ್ಮನಲ್ಲಿ ಪರಮಾರ್ಥವಾಗಿ ಅದು (ಕ್ರಿಯೆ ಮತ್ತು ಕ್ರಿಯಾಫಲ) ಇರುವುದಿಲ್ಲ.

**227**

**ಕರ್ಮಬೀಜೋಽಹ್ಯವಿದ್ಯಾವೃಕ್ಷಃ ಸಮೂಲಮುದ್ಧರ್ತವ್ಯಃ ತದುದ್ಧರಣೇ ಹಿ**

ಪುರುಷಾರ್ಥ ಪರಿಸಮಾಪ್ತಿಃ | -ಬೃಹ. 1-4-1

ಅವಿದ್ಯೆಯೆಂಬ ವೃಕ್ಷಕ್ಕೆ ಕರ್ಮವು ಬೀಜವಾಗಿರುತ್ತದೆ. ಆ ವೃಕ್ಷವನ್ನು ಬೇರು ಸಹಿತ ಕಿತ್ತುಹಾಕಿದಾಗ ಮನುಷ್ಯನ ಕರ್ತವ್ಯವು ಸಮಾಪ್ತವಾಗುತ್ತದೆ.

**228**

ಸತ್ಯಾಮೇವ ನೈಸರ್ಗಿಕ್ಯಾಮವಿದ್ಯಾಯಾಂ ಲೋಕವೇದ ವ್ಯವಹಾರಾವತಾರಃ |
-ಸೂ.ಭಾ. 3-2-15

ನೈಸರ್ಗಿಕವಾದ ಅವಿದ್ಯೆ ಇದ್ದಾಗಲೇ ಲೌಕಿಕವ್ಯವಹಾರವೂ, ವೈದಿಕ ವ್ಯವಹಾರವೂ ಘಟಿಸುತ್ತದೆ.

**229**

ತಮೇತಮವಿದ್ಯಾಖ್ಯಂ ಆತ್ಮಾನಾತ್ಮನೋಃ ಇತರೇತರಾಧ್ಯಾಸಂ ಪುರಸ್ಕೃತ್ಯ ಸರ್ವೇ ಪ್ರಮಾಣಪ್ರಮೇಯವ್ಯವಹಾರಾಃ ಲೌಕಿಕಾ ವೈದಿಕಾಶ್ಚ ಪ್ರವೃತ್ತಾಃ | ಸರ್ವಾಣಿ ಶಾಸ್ತ್ರಣಿ ವಿಧಿಪ್ರತಿಷೇಧ ಮೋಕ್ಷಪರಾಣಿ |
-ಸೂ.ಭಾ. ಉಪೋದ್ಘಾತ 1-1-1

ಈ ಅವಿದ್ಯೆಯೆಂಬ ಆತ್ಮಾನಾತ್ಮಗಳ ಪರಸ್ಪರಾಧ್ಯಾಸವನ್ನು ಅವಲಂಬಿಸಿಯೇ ಲೌಕಿಕಗಳಾದ ಸಮಸ್ತ ಪ್ರಮಾಣ ಪ್ರಮೇಯ ವ್ಯವಹಾರಗಳೂ. ವೈದಿಕಗಳಾದ ಎಲ್ಲ ಪ್ರಮಾಣ ಪ್ರಮೇಯ ವ್ಯವಹಾರಗಳೂ ಪ್ರವೃತ್ತವಾಗಿವೆ. ವಿಧಿಪ್ರತಿಷೇಧಾತ್ಮಕಗಳಾದ ಕರ್ಮಕಾಂಡದ ಶಾಸ್ತ್ರಗಳೂ ಬ್ರಹ್ಮಬೋಧಕವಾದ ಮೋಕ್ಷಶಾಸ್ತ್ರಗಳೂ ಈ ಅವಿದ್ಯೆಯನ್ನು ಅವಲಂಬಿಸಿಯೇ ಪ್ರವೃತ್ತವಾಗಿವೆ.

ದೇಹೇಂದ್ರಿಯಗಳಲ್ಲಿ ನಾನು ನನ್ನದು ಎಂಬ ಅಭಿಮಾನವಿಲ್ಲದವನು ಪ್ರಮಾತೃವಾಗುವುದಿಲ್ಲ. ಪ್ರಮಾತೃವಿಲ್ಲದೆ ಪ್ರಮಾಣಗಳ ಪ್ರವೃತ್ತಿ ಇಲ್ಲ. ಆದ್ದರಿಂದ ಶಾಸ್ತ್ರಗಳೆಲ್ಲ ಅವಿದ್ಯಾವಂತರ ವಿಷಯವಾದವುಗಳು.

**230**

ಸರ್ವವ್ಯವಹಾರಾಣಾಮೇವ ಪ್ರಾಗ್ ಬ್ರಹ್ಮಾತ್ಮತಾವಿಜ್ಞಾನಾತ್ ಸತ್ಯತ್ವೋಪಪತ್ತೇಃ |ಸ್ವಪ್ನವ್ಯವಹಾರಸ್ಯೇವ ಪ್ರಾಕ್ ಪ್ರಬೋಧಾತ್ | ಯಾವದ್ ಹಿ ನ ಸತ್ಯಾತ್ಮೈಕತ್ವಪ್ರತಿಪತ್ತಿಸ್ತಾವತ್ ಪ್ರಮಾಣಪ್ರಮೇಯಫಲಲಕ್ಷಣೇಷು ವಿಕಾರೇಷು

**ಅನೃತತ್ವಬುದ್ಧಿರ್ನ ಕಸ್ಯಚಿದುತ್ಪದ್ಯತೇ | -ಸೂ.ಭಾ. 2-1-14**

ಬ್ರಹ್ಮವಿಜ್ಞಾನಕ್ಕೆ ಪೂರ್ವದಲ್ಲಿ ಸರ್ವವ್ಯವಹಾರಗಳೂ ಸತ್ಯವಾಗಿಯೇ ಇರಬಹುದು. ಹೇಗೆಂದರೆ ಎಚ್ಚರವಾಗುವುದಕ್ಕೆ ಮೊದಲೆ ಸ್ವಪ್ನವ್ಯವಹಾರವು ಸತ್ಯವಾಗಿರುತ್ತದೆ. ಎಲ್ಲಿಯವರೆಗೆ ಆತ್ಮನೊಬ್ಬನೇ ಸತ್ಯವೆಂಬ ಬುದ್ಧಿ ಹುಟ್ಟುವುದಿಲ್ಲವೋ ಅಲ್ಲಿಯವರೆಗೆ ಪ್ರಮಾಣ-ಪ್ರಮೇಯ ಫಲಾದಿರೂಪ ವಿಕಾರಗಳು ಸುಳ್ಳೆಂಬ ಬುದ್ಧಿ ಯಾರಿಗೂ ಹುಟ್ಟುವುದಿಲ್ಲ.

ಸ್ವಪ್ನದಲ್ಲಿ ಕಾಣುವ ಪದಾರ್ಥಗಳು ಎಚ್ಚರವಾಗುವವರೆಗೆ ಸತ್ಯವೆಂದು ತೋರುತ್ತವೆ. ಹಾಗೆಯೇ ಬ್ರಹ್ಮಜ್ಞಾನವಾಗುವವರೆಗೆ ಲೋಕವ್ಯವಹಾರವು ಸತ್ಯವಾಗಿ ತೋರಬಹುದು.

**231**

**ಯ ಏವ ಶ್ರುತ್ಯಾಚಾರ್ಯದರ್ಶಿತಮಾರ್ಗಾನುಸಾರಿಣಃ, ತ ಏವ ಅವಿದ್ಯಾಯಾಃ ಪಾರಮಧಿಗಚ್ಛಂತಿ | ತ ಏವ ಚಾಸ್ಮಾನ್ ಮೋಹಸಮುದ್ರಾತ್ ಅಗಾಧಾತ್ ಉತ್ತರಿಷ್ಯಂತಿ ಸ್ವಬುದ್ಧಿ ಕೌಶಲಾನುಸಾರಿಣಃ | -ಸೂ.ಭಾ. 1-1-4**

ಶ್ರುತಿಯೂ ಆಚಾರ್ಯರೂ ತೋರಿಸಿದ ಮಾರ್ಗವನ್ನು ಯಾರು ಅನುಸರಿಸುತ್ತಾರೋ ಅವರು ಮಾತ್ರವೇ ಅವಿದ್ಯೆಯನ್ನು ದಾಟಿ ಪಾರವನ್ನು ಸೇರುತ್ತಾರೆ. ಅವರೇ ಅಗಾಧವಾದ ಮೋಹಸಾಗರದಿಂದ ನಮ್ಮನ್ನು ಮೇಲಕ್ಕೆ ಎತ್ತುವರು. ತಮ್ಮ ತಮ್ಮ ಬುದ್ಧಿಕೌಶಲದಿಂದ ನಡೆಯತಕ್ಕವರು ನಮ್ಮನ್ನು ಉದ್ಧರಿಸಲಾರರು.

**232**

**ತಸ್ಮಾನ್ನಾವಗತ ಬ್ರಹ್ಮಾತ್ಮಭಾವಸ್ಯ ಯಥಾಪೂರ್ವ ಸಂಸಾರಿತ್ವಮ್ | ಯಸ್ಯ ತು ಯಥಾಪೂರ್ವಂ ಸಂಸಾರಿತ್ವಂ, ನಾಸಾವವಗತಬ್ರಹ್ಮಾತ್ಮಭಾವಃ |**
**-ಸೂ.ಭಾ. 1-1-4**

ಆದ್ದರಿಂದ ಬ್ರಹ್ಮವೇ ತಾನೆಂದು ಅರಿತುಕೊಂಡವನಿಗೆ ಮೊದಲಿನಂತೆ ಸಂಸಾರಿತ್ವವಿರುವುದಿಲ್ಲ. ಯಾವನಿಗೆ ಮೊದಲಿನಂತೆ ಸಂಸಾರಿತ್ವವಿರುವುದೋ ಅವನು ಬ್ರಹ್ಮವೇ ತಾನೆಂದು ಅರಿತುಕೊಂಡವನಲ್ಲ.

**233**

**ಅವಿದ್ಯಾವಸ್ಥಾಯಾಂ ಕಾರ್ಯ-ಕರಣ-ಸಂಘಾತಾವಿವೇಕದರ್ಶಿನೋ**

**ಜೀವಸ್ಯಾವಿದ್ಯಾ-ತಿಮಿರಾಂಧ್ಯಸ್ಯ ಸತಃ ಪರಸ್ಮಾದಾತ್ಮನಃ ಕರ್ಮಾಧ್ಯಕ್ಷಾತ್ ಸರ್ವಭೂತಾಧಿವಾಸಾತ್ ಸಾಕ್ಷಿಣಃ ಚೇತಯಿತುರೀಶ್ವರಾತ್ತದನುಜ್ಞಯಾ ಕರ್ತೃತ್ವ ಭೋಕ್ತೃತ್ವಲಕ್ಷಣಸ್ಯ ಸಂಸಾರಸ್ಯ ಸಿದ್ಧಿಃ, ತದನುಗ್ರಹಹೇತುಕೇನೈವ ಚ ವಿಜ್ಞಾನೇನ ಮೋಕ್ಷಸಿದ್ಧಿರ್ಭವಿತು ಮರ್ಹತಿ |**

**-ಸೂ.ಭಾ. 2-2-41**

ಜೀವನು ಅವಿದ್ಯಾವಸ್ಥೆಯಲ್ಲಿ ಕಾರ್ಯಕರಣ ಸಂಘಾತವನ್ನು ವಿಂಗಡಿಸಿ ತಾನು ಯಾರೆಂದು ತಿಳಿದುಕೊಂಡಿರುವುದಿಲ್ಲ. ಅವನು ಅವಿದ್ಯೆಯೆಂಬ ಕತ್ತಲೆಯಿಂದ ಕುರುಡಾಗಿರುತ್ತಾನೆ. ಆಗ ಕರ್ಮಾಧ್ಯಕ್ಷನೂ, ಸರ್ವಭೂತಾಧಿವಾಸನೂ, ಸಾಕ್ಷಿಯೂ ಚೈತನ್ಯದಾಯಕನೂ ಆದ ಪರಮೇಶ್ವರನಿಂದ ಅವನ ಅನುಜ್ಞೆಯ ಪ್ರಕಾರ ಕರ್ತೃತ್ವಭೋಕ್ತೃತ್ವ ರೂಪವಾದ ಸಂಸಾರವು ಜೀವನಿಗೆ ಪ್ರಾಪ್ತವಾಗಿರುತ್ತದೆ. ಈಶ್ವರನ ಅನುಗ್ರಹದಿಂದಲೇ ವಿಜ್ಞಾನವು ಲಭಿಸಿ ಅದರಿಂದ ಮೋಕ್ಷವು ಸಿದ್ಧಿಯಾಗುತ್ತದೆ.

'ಏಷ ಹ್ಯೇವ ಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯಃ ಉನ್ನಿನೀಷತೇ' (ಕೌಶೀ. 3-8) ಇತ್ಯಾದಿ ಶ್ರುತಿಯು ಈಶ್ವರಾನುಗ್ರಹವು ಬೇಕೆಂದು ತಿಳಿಸುತ್ತದೆ. ಜೀವನ ಕರ್ಮಾನುಗುಣವಾಗಿ ಈಶ್ವರನು ಪ್ರೇರಕ.

**234**

**ತಸ್ಮಾತ್ಸುಷ್ಠು ವೇದಾಹಂ ಬ್ರಹ್ಮೇತಿ ಪ್ರತಿಪತ್ತಿರ್ಮಿಥ್ಯೈವ |**

**-ಕೇನ 2 ಪೀಠಿಕೆ**

ಆದ್ದರಿಂದ (ಬ್ರಹ್ಮಕ್ಕೆ ಇನ್ನೊಬ್ಬ ವಿಜ್ಞಾತೃವಿಲ್ಲವಾದ್ದರಿಂದ)ನಾನು ಬ್ರಹ್ಮವನ್ನು ಚನ್ನಾಗಿ ಅರಿತಿದ್ದೇನೆ ಎಂಬ ತಿಳಿವಳಿಕೆ ಮಿಥ್ಯೆಯೇ ಸರಿ.

'ನಾನು ಬ್ರಹ್ಮವನ್ನು ತಿಳಿದಿದ್ದೇನೆ'ಎನ್ನುವುದು ತಪ್ಪು. ನಾನು ಬೇರೆ, ಬ್ರಹ್ಮ ಬೇರೆ-ಎಂದು ಮಿಥ್ಯಾಜ್ಞಾನದಿಂದ ಅಂತಹ ಮಾತು ಹೊರಡುತ್ತದೆ.

**235**

**ಅತ್ಯಂತ ಮೂಢಾನಾಮೇವ ಹಿ ವಿಷಯೇಷು ರತಿರ್ದೃಶ್ಯತೇ | ಯಥಾ ಪಶುಪ್ರಭೃತೀನಾಮ್ |**

ಅತ್ಯಂತ ಮೂಢರಿಗೆ ಮಾತ್ರ ವಿಷಯಗಳಲ್ಲಿ ಪ್ರೀತಿ ಇರುತ್ತದೆ. ಪಶು ಮೊದಲಾದವುಗಳಿಗೆ ಇರುವಂತೆ.

ಅಸತ್ಯಗಳಾದ ಭೋಗಗಳಲ್ಲಿ ಅವಿವೇಕಿಗಳಾದ ಪಶುಗಳಿಗೆ ಪ್ರೀತಿಯಿರುವುದು ಸ್ವಾಭಾವಿಕ. ಭೋಗಾಸಕ್ತರಾದ ಮನುಷ್ಯರೂ ಪಶುಗಳಂತೆಯೇ ಆಗುತ್ತಾರೆ.

**236**

**ಅಜ್ಞಾಶ್ರದ್ದಧಾನೌ ಯದ್ಯಪಿ ವಿನಶ್ಯತಃ ತಥಾಪಿ ನ ತಥಾ ಯಥಾ ಸಂಶಯಾತ್ಮಾ| ಸಂಶಯಾತ್ಮಾ ತು ಪಾಪಿಷ್ಠಃ ಸರ್ವೇಷಾಮ್ ||** **-ಗೀತಾ 4-40**

ಅಜ್ಞನೂ, ಶ್ರದ್ಧಾಹೀನನೂ ಕೆಡುವುದು ನಿಜ. ಆದರೆ ಸಂಶಯಾತ್ಮನು ಕೆಡುವಷ್ಟು ಅವರು ಕೆಡುವುದಿಲ್ಲ. ಅವರು ಕೆಡುವುದಿಲ್ಲ. ಇವರೆಲ್ಲರಲ್ಲಿ ಸಂಶಯಾತ್ಮನು ತೀರ ಕೆಟ್ಟವನು.

ಆತ್ಮಜ್ಞಾತವಿಲ್ಲದವನು ಅಜ್ಞ. ಅವನು ಸತ್ಕರ್ಮಶೀಲನಾದರೆ ಇಹದಲ್ಲಿಯೂ, ಪರದಲ್ಲಿಯೂ ಸುಖವನ್ನು ಪಡೆಯಬಹುದು. ಮೋಕ್ಷವು ಮಾತ್ರ ಅವನಿಗಿಲ್ಲ. ಶಾಸ್ತ್ರದಲ್ಲಿ ನಂಬಿಕೆಯಿಲ್ಲದ ನಾಸ್ತಿಕನು ಈ ಲೋಕದಲ್ಲಾದರೂ ಸುಖವನ್ನು ಪಡೆದಾನು. ಸಂಶಯಾತ್ಮನಿಗೆ ಇಹಪರಗಳೆರಡರಲ್ಲೂ ಸುಖವಿಲ್ಲ.

**237**

**ಏವಮಯಮನಾದಿರನಂತೋ ನೈಸರ್ಗಿಕೋಽಧ್ಯಾಸೋ ಮಿಥ್ಯಾಪ್ರತ್ಯಯರೂಪಃ ಕರ್ತೃತ್ವ ಭೋಕ್ತೃತ್ವ ಪ್ರವರ್ತಕಃ ಸರ್ವಲೋಕಪ್ರತ್ಯಕ್ಷಃ |**
**- ಸೂ.ಭಾ. (ಅಧ್ಯಾಸಪ್ರ ಕರಣ)**

ಈ ಅಧ್ಯಾಸವೆಂಬ ತಪ್ಪುತಿಳಿವಳಿಕೆಯು (ಸಹಜವಾಗಿ ಮಾನವರಿಗೆ) ನಿಸರ್ಗದಿಂದಲೇ ಬಂದದ್ದು. ಇದು ಅನಾದಿಯೂ ಅನಂತವೂ ಆಗಿದ್ದು ನಾನು ಕರ್ತಾ, ನಾನು ಭೋಕ್ತಾ-ಎಂಬ ವ್ಯವಹಾರಕ್ಕೆ ಕಾರಣವಾಗಿರುವುದು ಸರ್ವಜನರ ಅನುಭವದಲ್ಲಿಯೂ ಇದೆ.

ಈ ಅಧ್ಯಾಸವು ಸಕಲಪ್ರಾಣಿಗಳಿಗೂ ಇದೆ. ಬ್ರಹ್ಮ ಜ್ಞಾನವಾದಾಗ ಇದು ನಾಶವಾಗುವುದಾದರೂ ಅನ್ಯರಿಗೆ ಅನಂತವಾಗಿಯೇ ಇರುತ್ತದೆ.

**238**

**ಅಜಮದ್ವಯಮಾತ್ಮತತ್ತ್ವಂ ಮಾಯಯೈವ ಭಿದ್ಯತೇ ನ ಪರಮಾರ್ಥತಃ | ತಸ್ಮಾನ್ನ ಪರಮಾರ್ಥಸದ್ ದ್ವೈತಮ್ |** **ಮಾಂ. ಕಾ. 3-19**

ಅಜವೂ ಅದ್ವೈತವೂ ಆದ ಆತ್ಮಸ್ವರೂಪವು ಮಾಯೆಯಿಂದ ಮಾತ್ರ ಅನೇಕವಾಗಿ ಕಾಣುತ್ತದೆ, ಪರಮಾರ್ಥದಿಂದ ಅಲ್ಲ. ಆದ್ದರಿಂದ ದ್ವೈತವು ಪರಮಾರ್ಥ ಸತ್ಯವಲ್ಲ.

ಅವಯವರಹಿತವೂ ಜನ್ಮರಹಿತವೂ ಆದ ಸತ್ಯವಸ್ತು ರೂಪಾಂತರ ಹೊಂದುವುದೂ ಬೇರೆ ಬೇರೆಯಾಗುವುದೂ ಅಸಾಧ್ಯ. ಮಾಯೆಯಿಂದ ಆ ರೀತಿ ತೋರುತ್ತದೆ ಅಷ್ಟೆ.

**239**

**ಉಪಾಧಿಕೃತಂ ಮಿಥ್ಯಾರೂಪಮಪಿ ಅಸ್ತಿತ್ವಾಧಿಗಮಾಯ ಜ್ಞೇಯ ಧರ್ಮವತ್ ಪರಿಕಲ್ಪ್ಯ ಉಚ್ಯತೇ 'ಸರ್ವತಃ ಪಾಣಿಪಾದಮ್....' ಇತ್ಯಾದಿ | ತಥಾ ಹಿ ಸಂಪ್ರದಾಯ ವಿದಾಂ ವಚನಮ್ - "ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ" ಇತಿ |**
**-ಗೀತಾ 11-13**

ಉಪಾಧಿಯಿಂದಾಗಿರುವ ಮಿಥ್ಯಾರೂಪವನ್ನು ಸಹ ಬ್ರಹ್ಮವು ಇದೆಯೆಂದು ನಿಶ್ಚಯಿಸುವುದಕ್ಕಾಗಿ ಜ್ಞೇಯವಾದ ಬ್ರಹ್ಮದ ಧರ್ಮವೋ ಎಂಬಂತೆ ಕಲ್ಪಿಸಿ 'ಸರ್ವತಃ ಪಾಣಿಪಾದಂ.....'ಇತ್ಯಾದಿಯಾಗಿ ಹೇಳಲಾಗಿದೆ. ಹೇಗೆಂದರೆ, ಸಂಪ್ರದಾಯವನ್ನು ಬಲ್ಲವರ ವಚನವು ಈ ರೀತಿ ಉಂಟು. ಯಾವ ಪ್ರಪಂಚವೂ ಇಲ್ಲದ ಆತ್ಮತತ್ತ್ವವನ್ನು ಅಧ್ಯಾರೋಪ, ಅಪವಾದ-ಇವುಗಳ ಮೂಲಕ ವಿಸ್ತರಿಸಿ ತಿಳಿಸಲಾಗುತ್ತದೆ.' ಎಂದು.

**ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ |**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ||**

ಎಂಬುದು ಗೀತೆಯಲ್ಲಿರುವ ಶ್ಲೋಕ (13-13) ಆತ್ಮವಸ್ತುವಿಗೆ ಸರ್ವತೋಮುಖವಾಗಿ ಅಸಂಖ್ಯಾತವಾದ ಕೈಕಾಲುಗಳಿವೆ-ಎಂಬುದು ಅಧ್ಯಾರೋಪ. 'ಅಪಾಣಿಪಾದಂ ಜವನೋ ಗ್ರಹೀತಾ', 'ಅರೂಪಮವ್ಯಯಂ' ಮುಂತಾದದ್ದು ಅಪವಾದ. ಅಧ್ಯಾರೋಪ = ಇಲ್ಲದ ಧರ್ಮವನ್ನು ಹೇರುವುದು. ಅಪವಾದ = ಹೇರಿದ ಧರ್ಮವನ್ನು ನಿರಾಕರಿಸುವುದು.

**240**

**ಕರ್ಮಾಣಿ ಅವಿದ್ಯಾವಸ್ಥಾಯಾಮೇವ ಚೋದ್ಯಂತೇ ನ ವಿದ್ಯಾವಂ. ಸ್ಥಾಯಾಮ್ | ವಿದ್ಯಾಯಾಂ ಹಿ ಸತ್ಯಾಮುದಿತೇ ಸವಿತರಿ ಶಾರ್ವರಮಿವ ತಮಃ ಪ್ರಣಾಶಮುಪಗಚ್ಛತ್ಯವಿದ್ಯಾ |**
**- ಗೀತಾ 269**

ಅವಿದ್ಯಾವಸ್ಥೆಯಲ್ಲಿ ಮಾತ್ರ ಕರ್ಮಗಳು ವಿಹಿತವಾಗಿವೆ, ವಿದ್ಯಾವಸ್ಥೆಯಲ್ಲಿ ಅಲ್ಲ. ವಿದ್ಯೆ ಅಲ್ಲ. ವಿದ್ಯೆ ಹುಟ್ಟಿತೆಂದರೆ, ಸೂರ್ಯನು ಹುಟ್ಟಿದೊಡನೆ ರಾತ್ರಿಯ ಕತ್ತಲಿನ ಹಾಗೆ,

ಅವಿದ್ಯೆಯು ಸಂಪೂರ್ಣ ನಾಶವಾಗಿ ಬಿಡುತ್ತದೆ.

**241**

**ಮೋಕ್ಷಸ್ಯ ಚ ಅಕಾರ್ಯತ್ವಾತ್ ಮುಮುಕ್ಷೋಃ ಕರ್ಮಾನರ್ಥಕ್ಯಮ್ |**

**-ಗೀತಾ 3-1**

ಮೋಕ್ಷವು ಕ್ರಿಯಾಜನ್ಯವಲ್ಲವಾದ್ದರಿಂದ ಮುಮುಕ್ಷುವಿಗೆ ಕರ್ಮವು ವ್ಯರ್ಥವೇ ಸರಿ.

**242**

**ತಥಾ ಚ ಸಂಪ್ರದಾಯವಿದಾಂ ವಚನಮ್ 'ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ' ಇತಿ |** **-ಗೀ.ಭಾ. 13-13**

ಆದ್ದರಿಂದ ಸಂಪ್ರದಾಯವಿದರು ಈ ಮಾತನ್ನು ಹೇಳಿದ್ದಾರೆ. "ಪ್ರಪಂಚದ ರಹಿತವಾದ ಆದ್ದರಿಂದಲೇ ವರ್ಣಿಸಲು ಅಶಕ್ಯವಾದ ಬ್ರಹ್ಮವನ್ನು ಅಧ್ಯಾರೋಪಾಪವಾದ ನ್ಯಾಯದಿಂದ ತಿಳಿಸಿಕೊಡಲಾಗುತ್ತದೆ."

ಸಂಪ್ರದಾಯ-ಗುರುಶಿಷ್ಯ ಪರಂಪರೆಯಿಂದ ಬಂದ ಉಪದೇಶ. ಅಧ್ಯಾರೋಪ-ಲೋಕಸಿದ್ಧವಾದ ವಿಭಾಗವನ್ನಿಟ್ಟುಕೊಂಡು ಮಾಡುವ ವಿಚಾರ. ಅಪವಾದ-ಅದು ಸತ್ಯವಾಗಿ ಇಲ್ಲವೆಂದು ತೋರಿಸಿಕೊಡುವುದು. ಸೃಷ್ಟಿ ಪ್ರಕ್ರಿಯೆ, ಪಂಚಕೋಶ ವಿವೇಕ, ಅವಸ್ಥಾತ್ರಯ -ಇವೆಲ್ಲವೂ ಅಧ್ಯಾರೋಪದಿಂದ ಮಾಡಿದ ವಿಚಾರ. ಇದಾವುದೂ ಸತ್ಯವಲ್ಲವೆಂದು ಅಪವಾದದಿಂದ ತಿಳಿಸಲಾಗುತ್ತದೆ.



# ೧೦ ಸೃಷ್ಟಿ-ಜಗತ್ತು-ಮಿಥ್ಯೆ

ನಮ್ಮ ಮನಸ್ಸಿನ ಊಹೆಗೂ ನಿಲುಕದಂತಹ ಅತ್ಯದ್ಭುತವಾದ ಈ ಜಗತ್ತನ್ನು ಸರ್ವಜ್ಞನೂ ಸರ್ವಶಕ್ತನೂ ಆದ ಪರಮೇಶ್ವರನು ಸೃಷ್ಟಿಸಿದ್ದಾನೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ವೇದವೂ ಸಹ ಹಾಗೆಯೇ ಪ್ರತಿಪಾದಿಸಿದೆ. ಆದರೆ ಈ ಸೃಷ್ಟಿಯು ಸತ್ಯವಾದ್ದಲ್ಲ. ಏಕೆಂದರೆ, "ಆದಿಯಲ್ಲಿ ಪರಮಾತ್ಮನೊಬ್ಬನೇ ಇದ್ದನು. ಆತನು ನಾನು ಬಹುವಾಗಬೇಕೆಂದು ಸಂಕಲ್ಪಿಸಿ ಈ ಜಗತ್ತನ್ನು ನಿರ್ಮಿಸಿದನು. ಪ್ರಾಣಿ ದೇಹವನ್ನು ಸೃಜಿಸಿ ಅದರೊಳಗೆ ತಾನು ಅನುಪ್ರವೇಶ ಮಾಡಿದನು" ಇತ್ಯಾದಿ ವರ್ಣನೆಯಿರುವುದರಿಂದ ಸೃಷ್ಟಿಸಲು ಬೇರೊಂದು ವಸ್ತುವಾಗಲಿ, ಉಪಕರಣವಾಗಲಿ ಇರಲೇ ಇಲ್ಲ. ಹೀಗಿರುವಾಗ ಸೃಷ್ಟಿಯನ್ನು ಮಾಡಿದ್ದು ಯಾವ ಸಲಕರಣೆಯಿಂದ? ಇಚ್ಛಾಮಾತ್ರದಿಂದ ಜಗತ್ತಿನ ಸೃಷ್ಟಿಯಾಗಿದೆಯೆಂದಾಗ ಅದು ಮಾಯಿಕವೆಂಬುದು ಸ್ವತಃ ಸಿದ್ಧವಾಗುತ್ತದೆ. ಆತ್ಮನು ಈ ಜಗತ್ತೆಂಬ ಕಾರ್ಯಕ್ಕೆ ನಿಮಿತ್ತಕಾರಣನೂ ಉಪಾದಾನಕಾರಣನೂ ತಾನೇ ಆಗಿರುತ್ತಾನೆ. ಕಾರಣಕ್ಕಿಂತ ಕಾರ್ಯವು ಬೇರೆಯಲ್ಲ, ಮಣ್ಣಿಗಿಂತ ಗಡಿಗೆಯು ಬೇರೆಯಲ್ಲ. ಚಿನ್ನಕ್ಕಿಂತ ಉಂಗುರುವು ಬೇರೆಯಲ್ಲ. ನಾಮರೂಪಗಳು ಮಾತ್ರ ಬೇರೆಯಾಗಿ ಕಾಣುತ್ತವೆ. ಮಾಯೆಯೆನ್ನುವುದು ಅದೇ. ಇದರಿಂದ 'ಸರ್ವ ಖಲ್ವಿದಂ ಬ್ರಹ್ಮ' ಎಂಬ ಶ್ರುತಿವಾಕ್ಯವು ಉಪಪನ್ನವಾಗುತ್ತದೆ. ಸ್ವಪ್ನವೇ ಈ ಜಗದ್ರಚನೆಗೆ ದೃಷ್ಟಾಂತ. ಬಾಹ್ಯಪ್ರಪಂಚದವಿಲ್ಲದಿದ್ದರೂ ಸ್ವಪ್ನದಲ್ಲಿ ಅದನ್ನು ಕಾಣುತ್ತೇವೆ. ಆದರೆ ಒಂದು ವ್ಯತ್ಯಾಸವಿದೆ. ಕನಸು ಒಂದೇ ರೀತಿ ಪ್ರತಿದಿನವೂ ಮುಂದುವರಿಯುವುದಿಲ್ಲ. ನಿನ್ನೆಯ ಕನಸಿಗೂ ಈ ದಿನದ ಕನಸಿಗೂ ಸಂಬಂಧವೇ ಇರುವುದಿಲ್ಲ. ಜಾಗ್ರತ್ತಿನಲ್ಲಿ ನಾವು ಕಾಣುವ ಪ್ರಪಂಚ ಹಾಗಲ್ಲ. ಅದು ಕ್ರಮಬದ್ಧವಾಗಿ ಕಾರ್ಯಕಾರಣಭಾವಗಳನ್ನನುಸರಿಸಿ ಮುಂದುವರೆಯುತ್ತದೆ. ಇಂತಹ ಈ ಜಗತ್ತು ಮಿಥ್ಯೆಯೆಂದರೆ ಎಲ್ಲರಿಗೂ ಆಶ್ಚರ್ಯವಾಗುತ್ತದೆ.

ಪರಮಾರ್ಥದೃಷ್ಟಿಯನ್ನಿಟ್ಟುಕೊಂಡಿರುವ ಜ್ಞಾನಿಗೆ ಮಾತ್ರ ಈ ಜಗತ್ತು ಬ್ರಹ್ಮವೇ ಸರಿಯೆಂದೂ ಜಗತ್ತೆಂಬುದು ಹುಸಿತೋರಿಕೆಯೆಂದೂ ಗೊತ್ತಾಗುತ್ತದೆ. ವ್ಯವಹಾರದಲ್ಲಿ ಈ ಜಗತ್ತು ಸತ್ಯವಾಗಿಯೇ ಕಾಣುತ್ತದೆ. ವ್ಯವಹಾರದೃಷ್ಟಿಯನ್ನಿಟ್ಟುಕೊಂಡಿರುವ ನಮ್ಮಂತಹವರು ಶಾಸ್ತ್ರೀಯವಾಗಿ ಸರ್ವವ್ಯವಹಾರಗಳನ್ನೂ ಮಾಡಲೇಬೇಕು.

ಪರಮಾರ್ಥವಾದ ಆತ್ಮತತ್ತ್ವವನ್ನರಿಯದೆ ಇರುವಾಗ, ಸರ್ವಪ್ರಮಾಣ ಸಿದ್ಧವಾದ ಲೋಕವ್ಯವಹಾರವನ್ನು ಮಿಥ್ಯೆಯೆಂದು ಅಲ್ಲಗಳೆಯುವ ಹುಚ್ಚುಸಾಹಸಕ್ಕೆ ಹೋಗಬಾರದು. ಜ್ಞಾನಿಯೂ ಸಹ ಲೋಕವ್ಯವಹಾರವನ್ನು ಕಡೆಗಾಣುವುದಿಲ್ಲ. ಸೂರ್ಯನಿಗೆ ಉದಯಾಸ್ತಗಳಿಲ್ಲವೆಂದು ಚೆನ್ನಾಗಿ ತಿಳಿದಿರತಕ್ಕವರೂ ಸಹ ಸೂರ್ಯನು ಹುಟ್ಟುತ್ತಾನೆ, ಸೂರ್ಯನು ಮುಳುಗುತ್ತಾನೆ- ಎಂಬ ವ್ಯವಹಾರವನ್ನೇನೂ ಬಿಡುವುದಿಲ್ಲ. ಚಿನ್ನದ ಒಡವೆಗಳ ಬೆಲೆಯನ್ನು ಕಟ್ಟುವಾಗ ಅಕ್ಕಸಾಲಿಗನು ಒಟ್ಟು ತೂಕಮಾಡಿ ಚಿನ್ನದ ಮೌಲ್ಯವನ್ನು ಮಾತ್ರ ಗಣನೆಗೆ ತಂದುಕೊಳ್ಳುತ್ತಾನೆ. ಒಡವೆಗಳ ನಾಮರೂಪಗಳು ಮಿಥ್ಯೆಯೆಂದು ಅವನ ತೀರ್ಮಾನ.

ಈ ಜಗತ್ತು ವ್ಯವಹಾರದಲ್ಲಿ ಸತ್. ಪರಮಾರ್ಥದಲ್ಲಿ ಅಸತ್ -ಎಂದು ವೇದಾಂತಿಗಳ ಸಿದ್ಧಾಂತ. ಅಲ್ಲಿಗೆ ಇದು ಅನಿರ್ವಚನೀಯವೆನಿಸುವುದರಿಂದ ಮಿಥ್ಯೆಯೆಂಬುದು ಸಿದ್ಧಾಂತ. ಬೌದ್ಧರು ವ್ಯವಹಾರದಲ್ಲಿಯೂ ಈ ಜಗತ್ತು ಅಸತ್ ಎಂದು ಹೇಳುತ್ತಾರೆ. ವೇದಾಂತಿಗಳು ಮಾತ್ರ ವ್ಯವಹಾರದಲ್ಲಿ ಈ ಜಗತ್ತನ್ನು ಒಪ್ಪಿ ಪರಮಾರ್ಥ ದೃಷ್ಟಿಯಲ್ಲಿ ಮಾತ್ರ ಅಸತ್ ಎನ್ನುತ್ತಾರೆ. ಜಗತ್ತು ಮಿಥ್ಯೆಯಾದರೆ ಜಗತ್ತಿನಂತೆ ತೋರತಕ್ಕದ್ದು ಯಾವುದು-ಎಂಬುದನ್ನು ತೋರಿಸಲೇಬೇಕು. ಜಗತ್ತು ಮಿಥ್ಯೆ ಎಂದು ಹೇಳಿದ ಮಾತ್ರಕ್ಕೆ ಮಿಥ್ಯೆಯಾಗಿ ಬಿಡುವುದಿಲ್ಲ. ಬೌದ್ಧರ ಮತದಲ್ಲಿ ಈ ದೋಷ ಉಳಿದುಕೊಳ್ಳುತ್ತದೆ. ವೇದಾಂತಿಗಳ ಮತದಲ್ಲಿ ಈ ದೋಷವಿಲ್ಲ.

**243**

**ಅಸ್ಯ ಜಗತೋ ನಾಮರೂಪಾಭ್ಯಾಂ ವ್ಯಾಕೃತಸ್ಯ ಅನೇಕಕರ್ತೃ ಭೋಕ್ತೃಸಂಯುಕ್ತಸ್ಯ ಪ್ರತಿನಿಯತದೇಶಕಾಲನಿಮಿತ್ತಕ್ರಿಯಾಫಲಾಶ್ರಯ ಯಸ್ಯ ಮನಸಾಪ್ಯಚಿಂತ್ಯರಚನಾರೂಪಸ್ಯ ಜನ್ಮಸ್ಥಿತಿಭಂಗಂ ಯತಃ ಸರ್ವಜ್ಞಾತ್ ಸರ್ವಶಕ್ತೇಃ ಕಾರಣಾದ್ ಭವತಿ ತದ್ ಬ್ರಹ್ಮೇತಿ ವಾಕ್ಯಶೇಷಃ | -ಸೂ.ಭಾ. 1-1-2**

ನಾಮರೂಪಗಳಿಂದ ಬಿಡಿಬಿಡಿಯಾಗಿ ರೂಪಿತಿವಾದ, ಅನೇಕ ಕರ್ತೃ ಭೋಕ್ತೃಗಳಿಂದ ಕೂಡಿರುವ ನಿಯತವಾದ ದೇಶಕಾಲ ನಿಮಿತ್ತಗಳಿಂದ ಹುಟ್ಟುವ ಫಲದಿಂದ ಸಹಿತವಾದ ಮತ್ತು (ಮನುಷ್ಯನ) ಮನಸ್ಸಿನಿಂದಲೂ ಊಹಿಸಲು ಶಕ್ಯವಿಲ್ಲದ ರಚನೆ ರೂಪಗಳಿಂದ ಯುಕ್ತವಾದ. ಈ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳು ಸರ್ವಜ್ಞವೂ ಸರ್ವಶಕ್ತವೂ ಆದ ಯಾವ ಕಾರಣದಿಂದ ಆಗುತ್ತವೆಯೋ ಆ ಕಾರಣವೇ ಬ್ರಹ್ಮ. ಹೀಗೆ ವಾಕ್ಯಶೇಷವನ್ನು ಸೇರಿಸಿಕೊಳ್ಳಬೇಕು.

'ಜನ್ಮಾದ್ಯಸ್ಯಯತಃ' ಎಂಬ ಬ್ರಹ್ಮಸೂತ್ರವಿದೆ. ತದ್‌ಬ್ರಹ್ಮ=ಅದು ಬ್ರಹ್ಮ ಎಂದು ಸೇರಿಸಿಕೊಂಡರೆ ವಾಕ್ಯವು ಪೂರ್ಣವಾಗುತ್ತದೆ. ಹೀಗೆ ಸೇರಿಸಿಕೊಳ್ಳಬೇಕಾದದ್ದು ವಾಕ್ಯಶೇಷ.

**244**

**ನ ಚೇಯಂ ಪರಮಾರ್ಥವಿಷಯಾ ಸೃಷ್ಟಿಶ್ರುತಿಃ | ಅವಿದ್ಯಾಕಲ್ಪಿತ ನಾಮರೂಪಗೋಚರತ್ವಾತ್ | ಬ್ರಹ್ಮಾತ್ಮಭಾವಪ್ರತಿಪಾದನಪರತ್ವಾಚ್ಚೇತ್ಯೇತದಪಿ ನೈವ ವಿಸ್ಮರ್ತವ್ಯಮ್ |** **-ಸೂ.ಭಾ. 2-1-33**

'ಈಶ್ವರನು ಜಗತ್ತನ್ನು ಸೃಷ್ಟಿಸಿದನು' ಎಂಬ ಶ್ರುತಿವಾಕ್ಯವು ನಿಜವಾದ ಸೃಷ್ಟಿಯನ್ನು ವಿಷಯೀಕರಿಸಿ ಹೊರಟದ್ದಲ್ಲ. ಏಕೆಂದರೆ ಈ ಸೃಷ್ಟಿಯು ಅವಿದ್ಯಾಕಲ್ಪಿತ ನಾಮರೂಪಗಳಿಗೆ ಸಂಬಂಧಿಸಿದ್ದು ಮತ್ತು ಇದೆಲ್ಲವೂ ಬ್ರಹ್ಮಸ್ವರೂಪವೇ ಎಂದು ಪ್ರತಿಪಾದಿಸುವುದಕ್ಕಾಗಿ ಹೊರಟದ್ದು ಎಂಬುದನ್ನು ಮರೆಯಬಾರದು.

"ಸ ಇಮಾನ್ ಲೋಕಾನಸೃಜತ" (ಐತ. ೧-೧), "ಯತೋ ವಾ ಇಮಾನಿ ಭೂತಾನಿ ಜಾಯಂತೇ" (ಭೃಗುವಲ್ಲೀ-೧) ಇತ್ಯಾದಿ ಶ್ರುತಿಗಳು ಈಶ್ವರನಿಂದ ಜಗತ್ತಿನ ಸೃಷ್ಟಿಯಾಯಿತೆಂದು ಹೇಳುತ್ತದೆ.

**245**

**ತಸ್ಮಾತ್ ಉತ್ಪತ್ತ್ಯಾದಿಶ್ರುತಯಃ ಆತ್ಮೈಕತ್ವ ಬುದ್ಧ್ಯವತಾರಾಯೈವ ನಾನ್ಯಾರ್ಥಾಃ ಕಲ್ಪಯಿತುಂ ಯುಕ್ತಾಃ |** **-ಮಾ.ಕಾ. 3-15**

ಜಗತ್ತಿನ ಸೃಷ್ಟಿ ಮೊದಲಾದ್ದನ್ನು ಹೇಳುವ ವೇದವಾಕ್ಯಗಳು ಆತ್ಮೈಕತ್ವವನ್ನು ತಿಳಿಸಿಕೊಡುವ ಕಡೆಗೆ ಬುದ್ಧಿಯು ಪ್ರವೇಶಿಸಲೆಂದು ಹೊರಟಿವೆ; ಬೇರೆ ಉದ್ದೇಶಕ್ಕಾಗಿ ಹೊರಟಿವೆಯೆಂದು ಕಲ್ಪಿಸಲಾಗುವುದಿಲ್ಲ.

ಬ್ರಹ್ಮ ಪ್ರಕರಣದಲ್ಲಿಯೇ ಸೃಷ್ಟಿವಾಕ್ಯಗಳು ಬಂದಿರುತ್ತವೆ. ಸೃಷ್ಟಿಜ್ಞಾನಕ್ಕೆ ಫಲವೇನೆಂದು ಹೇಳಿಲ್ಲ. ಬ್ರಹ್ಮಜ್ಞಾನಕ್ಕೆ ಫಲವನ್ನು ಹೇಳಿದೆ. ಫಲವತ್ತಾದ್ದರ ಸಂನಿಧಿಯಲ್ಲಿ ಇರುವ ಅಫಲವತ್ತಾದ್ದು ಅದರ ಅಂಗವೆಂದು ಭಾವಿಸಬೇಕೆಂದು ನ್ಯಾಯವಿದೆ. ಸೃಷ್ಟಿಮೂಲವಾದದ್ದು ಒಂದೇ ಎಂದು ತಿಳಿಸುವುದು ಸೃಷ್ಟಿವಾಕ್ಯಗಳ ತಾತ್ಪರ್ಯ.

**246**

**ತಸ್ಮಾತ್ ಏಕರೂಪೈಕತ್ವಪ್ರತ್ಯಯದಾರ್ಢ್ಯಾಯೈವ ಸರ್ವವೇದಾಂತೇಷು ಉತ್ಪತ್ತಿ ಸ್ಥಿತಿ ಲಯಾದಿಕಲ್ಪನಾ ನ ತತ್ಪ್ರತ್ಯಯ ಕರುಣಾಯ | -ಬೃಹ. 2-1-20**

ಇರತಕ್ಕ ವಸ್ತು ಒಂದೇ ಆದ್ದರಿಂದ ಅದರ ಏಕರೂಪವಾದ ಏಕತ್ವಜ್ಞಾನವನ್ನು ದೃಢಪಡಿಸುವುದಕ್ಕಾಗಿ ಸರ್ವವೇದಾಂತಗಳಲ್ಲಿಯೂ ಉತ್ಪತ್ತಿ ಸ್ಥಿತಿ ಪ್ರಳಯಾದಿಗಳ ಕಲ್ಪನೆಯನ್ನು ಮಾಡಲಾಗಿದೆಯೇ ಹೊರತು ಉತ್ಪತ್ತ್ಯಾದಿಗಳನ್ನು ತಿಳಿಸಿಕೊಡುವುದಕ್ಕಾಗಿ ಅಲ್ಲ.

**247**

**ಅವಿದ್ಯಾ ಸೃಷ್ಟಿ ವಿಷಯೈವ ಸರ್ವಾ ಗೌಣೀ ಮುಖ್ಯಾ ಚ ಸೃಷ್ಟಿರ್ನ ಪರಮಾರ್ಥತಃ |**
**-ಮಾಂಡೂಕ್ಯ 3-23**

ಗೌಣಸೃಷ್ಟಿ, ಮುಖ್ಯಸೃಷ್ಟಿ-ಎಲ್ಲವೂ ಅವಿದ್ಯಾವಿಷಯವಾದದ್ದೇ ಹೊರತು ಸತ್ಯವಾದದ್ದಲ್ಲ.

ಸೃಷ್ಟಿಯೆಲ್ಲವೂ ಮಾಯಿಕವೇ. ವಾಸ್ತವವಾಗಿ ಮುಖ್ಯ ಸೃಷ್ಟಿ ಎಂಬುದೇ ಇಲ್ಲ. ಸೃಷ್ಟಿಕ್ರಮವನ್ನು ಹೇಳುವ ಶ್ರುತಿಗೆ ಆತ್ಮನು ಒಬ್ಬನೇ ಎಂದು ತೋರಿಸಿಕೊಡುವುದರಲ್ಲಿ ತಾತ್ಪರ್ಯ. ಇಲ್ಲದಿದ್ದರೆ 'ನೇಹ ನಾನಾಸ್ತಿ ಕಿಂಚನ' (ಕಠ. 2-2-11)ಇತ್ಯಾದಿ ವಾಕ್ಯಗಳಿಗೆ ವಿರೋಧ ಉಂಟಾಗುತ್ತದೆ. ಗೌಣಸೃಷ್ಟಿ = ಸ್ವಪ್ನ, ಇಂದ್ರಜಾಲಗಳಿಂದಾಗುವ ಸೃಷ್ಟಿ. ಮುಖ್ಯಸೃಷ್ಟಿ=ಆಕಾಶ, ವಾಯು-ಮುಂತಾದವುಗಳ ಸೃಷ್ಟಿ. ನೋಡಿ: ಮಾಯಾಂ ತು ಪ್ರಕೃತಿಂ ವಿದ್ಧಿ ಮಾಯಿನಂ ತು ಮಹೇಶ್ವರಮ್ (ಶ್ವೇತಾ. ೪-೧೦) ಇಂದ್ರೋ ಮಾಯಾಭಿಃ ಪುರುರೂಪ ಈಯತೇ (ಬೃಹ. ೨-೫-೬) :

**248**

**ವಿಭೂತಿರ್ವಿಸ್ತಾರ ಈಶ್ವರಸ್ಯ ಸೃಷ್ಟಿರಿತಿ ಸೃಷ್ಟಿಚಿಂತಕಾ ಮನ್ಯಂತಾ ನ ತು ಪರಮಾರ್ಥಚಿಂತಕಾನಾಂ ಸೃಷ್ಟಾವಾದರಃ | -ಮಾಂಡೂಕ್ಯ 17**

ಸೃಷ್ಟಿಯು ಈಶ್ವರನ ಒಂದು ವಿಭೂತಿಯೆಂದು ಸೃಷ್ಟಿ ಚಿಂತಕರು ತಿಳಿಯುತ್ತಾರೆ.

ಪರಮಾರ್ಥವನ್ನು ಚಿಂತಿಸುವವರಿಗೆ ಸೃಷ್ಟಿಯನ್ನು ತಿಳಿಯುವುದರಲ್ಲಿ ಆದರವಿಲ್ಲ.

ಸೃಷ್ಟಿ ಹೇಗಾಯಿತೆಂಬ ಕ್ರಮವು ಮುಮುಕ್ಷುವಿಗೆ ಬೇಕಾಗಿಲ್ಲ. ಅದು ಈಶ್ವರನ ಮಾಯೆಯಿಂದ ಕಾಣುತ್ತದೆಯೆಂಬುದಿಷ್ಟು ಸಾಕು. ಇಂದ್ರಜಾಲವನ್ನು ನೋಡುವ ಪ್ರೇಕ್ಷಕರಿಗೆ ಮಾಯಾವಿಯು ತೋರಿಸುವ ಚಮತ್ಕಾರ ಹೇಗಾಯಿತೆಂದು ತಿಳಿಯುವ ಬಯಕೆ ಇರುವುದಿಲ್ಲ.

**249**

**ಇದಂ ಪ್ರಪಂಚಾಖ್ಯಂ ಮಾಯಾಮಾತ್ರಂ ದ್ವೈತಂ ರಜ್ಜುವನ್ಮಾಯಾವಿವಚ್ಚಾದ್ವೈತಂ ಪರಮಾರ್ಥತಸ್ತಸ್ಮಾನ್ನ ಕಶ್ಚಿತ್ಪ್ರಪಂಚಃ ಪ್ರವೃತ್ತೋ ನಿವೃತ್ತೋ ವಾ ಅಸ್ತೀತ್ಯಭಿಪ್ರಾಯಃ ||**

**-ಮಾಂಡೂಕ್ಯ 1-7**

ಈ ಪ್ರಪಂಚವೆಂಬ ದ್ವೈತವು ಬರಿಯ ಮಾಯೆ. ಹಾವಾಗಿ ತೋರುವ ಹಗ್ಗದಂತೆಯೂ ಮಾಯಾ ವಿಸ್ತರಗಳನ್ನು ತೋರಿಸುವ ಮಾಯಾವಿಯಂತೆಯೂ ಕಾಣುವುದು ನಿಜವಾಗಿ ಅದ್ವೈತವೇ. ಆದ್ದರಿಂದ ಯಾವ ಪ್ರಪಂಚವೂ ಬರಲು ಇಲ್ಲ, ಹೋಗಲೂ ಇಲ್ಲ ಎಂದು ಅಭಿಪ್ರಾಯ.

**ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ |**
**ಮಾಯಾಮಾತ್ರ ಮಿದಂ ದ್ವೈತಮದ್ವೈತಂ ಪರಮಾರ್ಥತಃ ||**

-ಎಂಬ ಮಾಂಡೂಕ್ಯ ಕಾರಿಕೆಯ ತಾತ್ಪರ್ಯವಿದು.

**250**

**ಏವಂ ಜಗತೋ ಜನ್ಮಕಾರ್ಯಂ ಗೃಹ್ಯಮಾಣಂ ಮಾಯಾವಿನಮಿವ ಪರಮಾರ್ಥಸಂತಮಾತ್ಮಾನಂ ಜಗಜ್ಜನ್ಮಮಾಯಾಸ್ಪದಮವಗಮಯತಿ |**

**-ಮಾಂಡೂಕ್ಯ 3-27**

ಜಗತ್ತು ಹುಟ್ಟಿದೆಯೆಂಬುದು ಕಾರ್ಯ. ಮಾಯಾಕಾರ್ಯವಾದ ಇಂದ್ರಜಾಲವನ್ನು ನೋಡಿದಾಗ ಅದಕ್ಕೆ ಕಾರಣನಾದ ಮಾಯಾವಿಯಿದ್ದಾನೆಂದು ಅದು ಹೇಗೆ ತೋರಿಸಿ ಕೊಡುತ್ತದೆಯೋ ಹಾಗೆ, ಈ ಜಗಜ್ಜನ್ಮವೆಂಬ ಕಾರ್ಯವು ಇದಕ್ಕೆ ಕಾರಣನಾದ ಮಾಯಾವಿಯಾದ ಈಶ್ವರನಿದ್ದಾನೆಂಬುದನ್ನು ತಿಳಿಸಿಕೊಡುತ್ತದೆ.

**251**

**ಸರ್ವಂ ಹ್ಯಂತಃಕರಣವಿಕಾರಮೇವ ಜಗತ್ | ಮನಸ್ಯೇವ ಸುಷುಪ್ತೇ ಪ್ರಲಯದರ್ಶನಾತ್ | ಜಾಗರಿತೇऽಪಿ ತತ ಏವಾಗ್ನಿವಿಸ್ಫುಲಿಂಗವದ್ ವಿಪ್ರತಿಷ್ಠಾನಾತ್ ||**
**-ಮುಂಡ. 2 ಖಂ. 1-4**

ಎಲ್ಲ ಜಗತ್ತು ಅಂತಃಕರಣದ ಕಾರ್ಯವೇ ಆಗಿರುತ್ತದೆ. ಏಕೆಂದರೆ, ಸುಷುಪ್ತಿಯಲ್ಲಿ ಅದು ಮನಸ್ಸಿನಲ್ಲಿಯೇ ಲಯವಾಗುವುದು ಕಂಡುಬರುತ್ತದೆ. ಎಚ್ಚರದಲ್ಲಿ ಆ ಮನಸ್ಸಿನಿಂದಲೇ ಬೆಂಕಿಯ ಕಿಡಿಯಂತೆ ಹೊರಬರುತ್ತದೆ.

**252**

**ತಸ್ಮಾತ್ ಕ್ಷೀರಾದೀನ್ಯೇವ ದ್ರವ್ಯಾಣಿ ದಧ್ಯಾದಿಭಾವೇನಾವತಿಷ್ಠಮಾನಾನಿ ಕಾರ್ಯಾಖ್ಯಾಂ ಲಭಂತೇ ಇತಿ ನ ಕಾರಣಾದನ್ಯತ್ಕಾರ್ಯಂ ವರ್ಷಶತೇನಾಪಿ ಶಕ್ಯಂ ನಿಶ್ಚೇತುಮ್ | ತಥಾ ಮೂಲಕಾರಣಮೇವಾಂತ್ಯಾತ್ಕಾರ್ಯಾತ್ ತೇನ ಕಾರ್ಯಾ ಕಾರೇಣ ನಟವತ್ ಸರ್ವವ್ಯವಹಾರಾಸ್ಪದತ್ವಂ ಪ್ರತಿಪದ್ಯತೇ | - ಸೂ.ಭಾ. 2-1-18**

ಕ್ಷೀರಾದಿ ದ್ರವ್ಯಗಳೇ ಮೊಸರು ಮುಂತಾದ ರೂಪದಲ್ಲಿದ್ದು ಕಾರ್ಯವೆಂಬ ಹೆಸರನ್ನು ಪಡೆಯುತ್ತವೆಯಾದ್ದರಿಂದ, ಕಾರಣಕ್ಕಿಂತ ಕಾರ್ಯವು ಅನ್ಯವೆಂದು ನೂರು ವರ್ಷ ಹೆಣಗಿದರೂ ನಿಶ್ಚಯಿಸಿಕೊಳ್ಳುವುದಕ್ಕಾಗುವುದಿಲ್ಲ. ಹಾಗೆಯೇ ಮೂಲ ಕಾರಣವಾದ ಅಂತ್ಯಕಾರ್ಯದವರೆಗೂ ಇದ್ದು, ನಟನಂತೆ ಸರ್ವವ್ಯವಹಾರಗಳಿಗೂ ಆಸ್ಪದವಾಗುತ್ತದೆ.

ಆ+ಅಂತ್ಯಾತ್ = ಆಂತ್ಯಾತ್ ಎಂದು ಬಿಡಿಸಿಕೊಳ್ಳಬೇಕು. ಜ್ಞಾನೋತ್ಪತ್ತಿಗೆ ಅವ್ಯವಹಿತ ಪೂರ್ವದಲ್ಲಿ ತೋರುವ ಕಾರ್ಯವು ಅಂತ್ಯಕಾರ್ಯವೆನಿಸುತ್ತದೆ.

**253**

**ಸಮಾನಮೇವ ಸರ್ವೇಷು ವೇದಾಂತೇಷು ಚೇತನ ಕಾರಣಾವಗತಿಃ |**
**-ಸೂ.ಭಾ. 1-1-10**

ಜಗತ್ತಿನ ಸೃಷ್ಟಿಗೆ ಚೈತನ್ಯವು ಕಾರಣವೆಂಬ ಬೋಧನೆ ಎಲ್ಲ ಉಪನಿಷತ್ತುಗಳಲ್ಲಿಯೂ ಏಕರೂಪವಾಗಿದೆ.

ಇತರ ಶಾಸ್ತ್ರಗಳಲ್ಲಿ ಜಗತ್ಕಾರಣವು ಬೇರೆ ಬೇರೆ ಎಂದು ವಿರುದ್ಧವಾದಗಳಿವೆ. ಪರಮಾಣು ಕಾರಣವೆಂದು ತಾರ್ಕಿಕರೂ ಪ್ರಕೃತಿ ಕಾರಣವೆಂದು ಸಾಂಖ್ಯರೂ ಹೇಳುತ್ತಾರೆ. ಜಗತ್ತು ನಿತ್ಯವಾದ್ದೆಂದು ಇನ್ನು ಕೆಲವರು. ಇವೆಲ್ಲ ಬರಿಯ ಊಹೆಗಳಾದ್ದರಿಂದ ಅಪ್ರಾಮಾಣಿಕ.

**254**

**ತೇ ಚ ಪುನರ್ನಾಮರೂಪೇ ಸವಿತರಿ ಅಹೋರಾತ್ರೇ ಇವ ಕಲ್ಪಿತೇ ನ ಪರಮಾರ್ಥತೋ ವಿದ್ಯಮಾನೇ |** **-ತೈತ್ತಿ. ಆನಂದ -8**

ಪ್ರಪಂಚರೂಪವಾದ ನಾಮರೂಪಗಳು ಸೂರ್ಯನಲ್ಲಿ ಹಗಲು-ರಾತ್ರಿಗಳಂತೆ, ಎಂದರೆ ಉದಯಾಸ್ತಮಯಗಳಂತೆ ಕಲ್ಪಿತವಾದವು. ನಿಜವಾಗಿ ನಾಮರೂಪಗಳು ಇರತಕ್ಕವಲ್ಲ.

ಸೂರ್ಯನು ಹುಟ್ಟುವುದೂ ಇಲ್ಲ ಮುಳುಗುವುದೂ ಇಲ್ಲ. ಉದಯಾಸ್ತಮಯಗಳು ಕಲ್ಪಿತವಾದವು.

**255**

**ವಿಭುಂ =ವಿವಿಧಂ ಬ್ರಹ್ಮಾದಿಸ್ಥಾವರಾಂತಪ್ರಾಣಿಭೇದೈಃ ಭವತೀತಿ ವಿಭುಮ್ ||**
**-ಮುಂಡಕ 1-1-16**

ಬ್ರಹ್ಮಾದಿ ಸ್ಥಾವರ ಪರ್ಯಂತವಾಗಿ ವಿವಿಧಾಕಾರದಲ್ಲಿ ತೋರಿಕೊಳ್ಳುತ್ತಿರುವುದು ವಿಭು.

ವಿವಿಧಂ ಭವತೀತಿ ವಿಭುಃ ಎಂದು ವ್ಯುತ್ಪತ್ತಿ.

**256**

**ನಾಮರೂಪ ವ್ಯಾಕೃತಂ ಹಿ ವಸ್ತು ಸಚ್ಛಬ್ದಾರ್ಹಂ ಲೋಕೇ ಪ್ರಸಿದ್ಧಮ್ | ಅತಃ ಪ್ರಾಜ್ ನಾಮರೂಪ ವ್ಯಾಕರಣಾದಸದಿವಾಸೀದಿತ್ಯುಪಚರ್ಯತೇ**
**-ಸೂ.ಭಾ. 2-1-18**

ನಾಮರೂಪಗಳಿಂದ ವ್ಯಾಕೃತವಾದ ವಸ್ತು 'ಸತ್' ಎಂಬ ಶಬ್ದಕ್ಕೆ ಅರ್ಹವೆಂಬುದು

ಲೋಕದಲ್ಲಿ ಪ್ರಸಿದ್ಧವಾಗಿದೆ ಆದ್ದರಿಂದ ನಾಮರೂಪ ವ್ಯಾಕರಣವಾಗುವುದಕ್ಕೆ ಮೊದಲು ಅದೇ ಸದ್ವಸ್ತು 'ಅಸತ್'ನಂತೆ ಇತ್ತು ಎಂದು ಔಪಚಾರಿಕವಾಗಿ 'ಅಸತ್' ಎಂದು ಹೇಳಿದೆ.

'ಅಸದೇವೇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿ ಸದ್ವಸ್ತುವನ್ನು ಅಸತ್ ಎಂದು ಕರೆದಿದೆ. ಅದು ಔಪಚಾರಿಕ, ವಾಸ್ತವವಲ್ಲ.

## 257

**ಸ ಚ ಭಗವಾನ್ ಜ್ಞಾನೈಶ್ವರ್ಯ-ಶಕ್ತಿ-ಬಲ-ವೀರ್ಯ-ತೇಜೋಭಿಃ ಸದಾ ಸಂಪನ್ನಃ ತ್ರಿಗುಣಾತ್ಮಿಕಾಂ ವೈಷ್ಣವೀಂ ಸ್ವಾಂ ಮಾಯಾಂ ಮೂಲ ಪ್ರಕೃತಿಂ ವಶೀಕೃತ್ಯ ಅಜೋ ಅವ್ಯಯೋ ಭೂತಾನಾಮೀಶ್ವರಃ ನಿತ್ಯ-ಶುದ್ಧ-ಬುದ್ಧ-ಮುಕ್ತಸ್ವಭಾವೋऽಪಿ ಸನ್ ಸ್ವಮಾಯಯಾ ದೇಹವಾನಿವ ಜಾತ ಇವ ಚ ಲೋಕಾನುಗ್ರಹಂ ಕುರ್ವನ್ ಲಕ್ಷ್ಯತೇ |**
**-ಗೀ.ಭಾ. ಉಪೋದ್ಘಾತ**

ಜ್ಞಾನ, ಐಶ್ವರ್ಯ, ಶಕ್ತಿ, ಬಲ, ವೀರ್ಯ, ತೇಜಸ್ಸುಗಳಿಂದ ಯಾವಾಗಲೂ ಸಹಿತನೇ ಆಗಿರುವ ಆ ಭಗವಂತನು, ತ್ರಿಗುಣ ಸ್ವರೂಪವಾದ ತನ್ನ ವೈಷ್ಣವೀ ಮಾಯೆಯೆಂಬ ಮೂಲಪ್ರಕೃತಿಯನ್ನು ವಶಪಡಿಸಿಕೊಂಡು ತಾನು ಸ್ವತಃ ಜನ್ಮರಹಿತನೂ ನಾಶರಹಿತನೂ ಪ್ರಾಣಿಗಳಿಗೆ ಅಧೀಶ್ವರನೂ ನಿತ್ಯ ಶುದ್ಧ ಬುದ್ಧ ಮುಕ್ತಸ್ವಭಾವದವನೂ ಆಗಿದ್ದರೂ ತನ್ನ ಮಾಯೆಯಿಂದ ದೇಹಧಾರಿಯಂತೆಯೂ ಹುಟ್ಟಿದವನಂತೆಯೂ ಲೋಕಾನುಗ್ರಹವನ್ನು ಮಾಡತಕ್ಕವನಾಗಿ ಕಂಡು ಬರುತ್ತಾನೆ.

ಐಶ್ವರ್ಯ = ಸ್ವಾತಂತ್ರ್ಯ, ಶಕ್ತಿ = ಬೇಕಾದ್ದನ್ನು ಮಾಡುವ ಸಾಮರ್ಥ್ಯ, ಬಲ = ಆಯಾಸವಿಲ್ಲದೆ ಜಗತ್ತನ್ನು ಸೃಷ್ಟಿಸಿ ಕಾಪಾಡುವುದು, ವೀರ್ಯ = ಪರಾಕ್ರಮ, ತೇಜಸ್ಸು = ಇನ್ನೊಂದು ಸಹಕಾರಿ ಸಾಮಗ್ರಿಯಿಲ್ಲದಿದ್ದರೂ ಸೃಷ್ಟಿಮಾಡುವ ಯೋಗ್ಯತೆ. ಮೂಲ ಪ್ರಕೃತಿಯೆಂಬುದೇ ಮಾಯೆ. ಅದು ಈಶ್ವರನ ಅಧೀನ.

## 258

**ಯದ್ರೂಪೇಣ ಯನ್ನಿಶ್ಚಿತಂ ತದ್ರೂಪಂ ನ ವ್ಯಭಿಚರತಿ ತತ್ ಸತ್ಯಮ್ | ಯದ್ರೂಪೇಣ ಯನ್ನಿಶ್ಚಿತಂ ತದ್ರೂಪಂ ವ್ಯಭಿಚರತ್ ಅನೃತಮಿತ್ಯುಚ್ಯತೇ | ಅತೋ ವಿಕಾರೋऽನೃತಮ್ |** **-ತೈ. 2-1**

ಯಾವುದು ಯಾವ ಸ್ವರೂಪದ್ದೆಂದು ನಿಶ್ಚಿತವಾಗಿದೆಯೋ ಅದು ತನ್ನ ಸ್ವರೂಪವನ್ನು

ಎಂದಿಗೂ ಬದಲಾಯಿಸದಿದ್ದರೆ ಅದು ಸತ್ಯ. ಯಾವುದು ಯಾವ ಸ್ವರೂಪದದ್ದೆಂದು ತಿಳಿದು ಬರುತ್ತದೆಯೋ ಆ ತನ್ನ ಸ್ವರೂಪವನ್ನು ಬದಲಾಯಿಸುವುದಾದರೆ ಅದು ಮಿಥ್ಯೆಯೆನಿಸುತ್ತದೆ. ಆದ್ದರಿಂದ ವಿಕಾರವೆಲ್ಲವೂ ಮಿಥ್ಯೆ.

ಗಡಿಗೆ, ಮರ ಮೊದಲಾದದ್ದು ಬೇರೆ ಸಂದರ್ಭದಲ್ಲಿ. ತನ್ನ ಸ್ವರೂಪವನ್ನು ಬದಲಾಯಿಸುವಂತೆ, ದೃಶ್ಯ ಪ್ರಪಂಚವೆಲ್ಲವೂ ಪರಮಾರ್ಥದಲ್ಲಿ ತನ್ನ ಸ್ವರೂಪವನ್ನು ಕಳೆದುಕೊಳ್ಳುತ್ತದೆ. ಆದ್ದರಿಂದ ಇದೆಲ್ಲವೂ ವಿಕಾರ; ಮಿಥ್ಯೆ.

**259**

**ನ ಹ್ಯಯಂ ಸರ್ವಪ್ರಮಾಣಸಿದ್ಧೋ ಲೋಕವ್ಯವಹಾರಃ ಅನ್ಯತ್ತತ್ತ್ವಮನಧಿಗಮ್ಯ ಶಕ್ಯತೇ ನಿಹ್ನೋತುಮ್ | ಅಪವಾದಾಭಾವೇ ಉತ್ಸರ್ಗಪ್ರಸಿದ್ಧೇಃ**

**-ಸೂ.ಭಾ. 2-2-31**

ಸರ್ವಪ್ರಮಾಣಗಳಿಂದಲೂ ಪ್ರಸಿದ್ಧವಾಗಿರುವ ಈ ಲೋಕವ್ಯವಹಾರವನ್ನು ಇನ್ನೊಂದು ಮೂಲತತ್ತ್ವವನ್ನು ತೋರಿಸಿಕೊಡದೆ ಅಲ್ಲಗಳೆಯುವುದಕ್ಕಾಗುವುದಿಲ್ಲ. ಅಪವಾದವಿಲ್ಲದಿದ್ದಾಗ ಉತ್ಸರ್ಗವು ಸಿದ್ಧವಾಗಿ ಉಳಿದುಕೊಳ್ಳುತ್ತದೆ.

ಭ್ರಾಂತಿ ಸ್ಥಳದಲ್ಲಿ ಇದು ಬೆಳ್ಳಿ ಎಂಬುದು ಉತ್ಸರ್ಗ. ಬೆಳ್ಳಿಯಲ್ಲ ಇದು ಕಪ್ಪೆಚಿಪ್ಪು-ಎನ್ನುವುದು ಅಪವಾದ. ಕಪ್ಪೆಚಿಪ್ಪು ಎಂದು ನಿಶ್ಚಯವಾಗುವವರೆಗೆ ಇದು ಬೆಳ್ಳಿಯೆಂಬುದೇ ಗಟ್ಟಿಯಾಗಿ ಉಳಿದುಕೊಳ್ಳುತ್ತದೆ. ಹಾಗೆ ಈ ಜಗತ್ತು ಬ್ರಹ್ಮವೇ ಸರಿ ಎಂದು ನಿಶ್ಚಯಜ್ಞಾನ ಹುಟ್ಟುವವರೆಗೆ ಜಗತ್ತು ಸತ್ಯ ಎಂಬುದು ಉಳಿದುಕೊಳ್ಳುತ್ತದೆ. ಬೌದ್ಧರು ಹೇಳುವಂತೆ ಜಗತ್ತು ಶೂನ್ಯ, ಏನೂ ಇಲ್ಲ-ಎಂದು ಹೇಳಿದ ಮಾತ್ರಕ್ಕೆ ಜಗತ್ತು ಶೂನ್ಯವಾಗಿ ಬಿಡುವುದಿಲ್ಲ. ಜಗತ್ತಿನ ನಿಜ ಸ್ವರೂಪವೇನೆಂಬುದನ್ನು ತೋರಿಸಲೇಬೇಕು.

**260**

**ತಸ್ಮಾತ್ ಪ್ರಾಗ್ ಬ್ರಹ್ಮಾತ್ಮತಾ ಪ್ರತಿಬೋಧಾತ್ ಉಪಪನ್ನಃ ಸರ್ವೋ ಲೌಕಿಕೋ ವೈದಿಕಶ್ಚ ವ್ಯವಹಾರಃ | ಯಥಾ ಸುಪ್ತಸ್ಯ ಪ್ರಾಕೃತಸ್ಯ ಜನಸ್ಯ ಸ್ವಪ್ನೇ ಉಚ್ಚಾವಚಾನ್ ಭಾವಾನ್ ಪಶ್ಯತಃ ನಿಶ್ಚಿತಮೇವ ಪ್ರತ್ಯಕ್ಷಾಭಿಮತಂ ವಿಜ್ಞಾನಂ ಭವತಿ ಪ್ರಾಕ್‌ಪ್ರಬೋಧಾತ್ | ನ ಚ ಪ್ರತ್ಯಕ್ಷಾಭಾಸಾಭಿಪ್ರಾಯಸ್ತತ್ಕಾಲೇ ಭವತಿ ತದ್ವತ್ |** **-ಸೂ.ಭಾ. 2-1-14**

ಬ್ರಹ್ಮಾತ್ಮಜ್ಞಾನ ಹುಟ್ಟುವವರೆಗೆ ಎಲ್ಲ ವಿಧವಾದ ಲೌಕಿಕ ಮತ್ತು ವೈದಿಕ ವ್ಯವಹಾರವು ಯುಕ್ತವೇ ಸರಿ. ಹೇಗೆಂದರೆ, ಕನಸು ಕಾಣುತ್ತಿರುವ ಒಬ್ಬ ಅಜ್ಞಾನಿಯಾದ ಮನುಷ್ಯನು ಕನಸಿನಲ್ಲಿ ನಾನು ಬಗೆಯ ವಸ್ತುಗಳನ್ನು ನೋಡುತ್ತಿರುತ್ತಾನೆ. ಅದೆಲ್ಲವೂ ಪ್ರತ್ಯಕ್ಷವೇ ಎಂದು ಆಗ ನಿಶ್ಚಿತವಾದ ಜ್ಞಾನವು ಎಚ್ಚರವಾಗುವವರೆಗೂ ಅವನಿಗಿರುತ್ತದೆ. "ಇದು ಪ್ರತ್ಯಕ್ಷವೋ ಎಂಬಂತೆ ಇದೆ. ಇದು ಮಿಥ್ಯೆ" ಎಂಬ ಜ್ಞಾನ ಕನಸಿನಲ್ಲಿರುವುದಿಲ್ಲ. ಹಾಗೆಯೇ ಇದು.

ಜ್ಞಾನಿಗೆ ಮಾತ್ರ ಜಗತ್ತು ಮಿಥ್ಯೆ. ಅದು ಪಾರಮಾರ್ಥಿಕ ಸತ್ಯ. ಅಜ್ಞಾನಿಗೆ ಜಗತ್ತೆಲ್ಲವೂ ಸತ್ಯವಾಗಿಯೇ ಕಾಣುತ್ತದೆ. ಮಿಥ್ಯೆಯೆಂದು ತೋರುವುದಿಲ್ಲ. ಇದು ವ್ಯಾವಹಾರಿಕ ಸತ್ಯ. ಈ ಅವಸ್ಥೆಯಲ್ಲಿ ಅವನು ಎಲ್ಲ ಕರ್ತವ್ಯಗಳನ್ನು ಶಾಸ್ತ್ರೀಯವಾಗಿ ಮಾಡಲೇಬೇಕು. ಕನಸಿನ ಜಗತ್ತು ದೃಷ್ಟಾಂತ. ಆಗ ಕನಸು ಸತ್ಯವೆಂದೇ ತೋರುತ್ತದೆ. ಅದು ಪ್ರಾತಿಭಾಸಿಕಸತ್ಯ.

**261**

**ಪ್ರಸಿದ್ಧಂ ತು ಭೇದಮನೂದ್ಯ ಬಂಧಮೋಕ್ಷ ವ್ಯವಸ್ಥಾ ಪ್ರತಿಪಾದ್ಯತೇ |ಭೇದಸ್ತು ಉಪಾಧಿನಿಮಿತ್ತೋ ಮಿಥ್ಯಾಜ್ಞಾನ ಕಲ್ಪಿತೋ ನ ಪಾರಮಾರ್ಥಿಕಃ |**

**-ಸೂ.ಭಾ. 1-4-10**

ಲೋಕ ಪ್ರಸಿದ್ಧವಾದ ದ್ವೈತ ಭೇದವನ್ನಿಟ್ಟುಕೊಂಡು ಬಂಧ, ಮೋಕ್ಷ ಎಂಬುದನ್ನು ಶಾಸ್ತ್ರವು ಪ್ರತಿಪಾದಿಸುತ್ತದೆ. ಭೇದವಾದರೋ ಮಿಥ್ಯಾಜ್ಞಾನದಿಂದುಂಟಾದ ಉಪಾಧಿಗಳಿಂದ ಬಂದದ್ದು. ಅದು ಪಾರಮಾರ್ಥಿಕವಲ್ಲ.



# ೧೧ ಬ್ರಹ್ಮವಿದ್ಯೆಗೆ ಅಧಿಕಾರ; ವೈರಾಗ್ಯ, ಸಾಧನ

ವಿದ್ಯೆಗಳಲ್ಲಿಯೇ ಅತಿಶ್ರೇಷ್ಠವೆನಿಸಿದ ಬ್ರಹ್ಮವಿದ್ಯೆಯನ್ನರಿಯಲು ವಿಶಿಷ್ಟವಾದ ಅಧಿಕಾರಸಂಪತ್ತು ಇರಬೇಕು. ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರಾರ್ಥ ಫಲಭೋಗ ವಿರಾಗ, ಶಮಾದಿಷಟ್ಕಸಂಪತ್, ಮುಮುಕ್ಷುತ್ವ-ಇವು ವೇದಾಂತ ಶ್ರವಣಕ್ಕೆ ಅಧಿಕಾರವನ್ನು ತಂದುಕೊಡತಕ್ಕವು. ಬ್ರಹ್ಮ ಒಂದೇ ನಿತ್ಯಸತ್ಯ. ಉಳಿದುದೆಲ್ಲ ಅನಿತ್ಯ-ಅಸತ್ಯ ಎಂಬ ನಿಶ್ಚಯ ಮೊದಲನೆಯದು. ಇಹಲೋಕ ಪರಲೋಕಗಳೆರಡಲ್ಲಿಯೂ ದೊರೆಯುವ ಸುಖದ ಬಗೆಗೆ ವೈರಾಗ್ಯ ಎರಡನೆಯದು. ಶಮ, ದಮ, ಉಪರತಿ, ತಿತಿಕ್ಷಾ, ಶ್ರದ್ಧಾ, ಸಮಾಧಾನ ಈ ಸಂಪತ್ತು ಮೂರನೆಯದು. ಇವೆಲ್ಲವೂ ಇದ್ದಾಗ ಮೋಕ್ಷವನ್ನು ಪಡೆಯಬೇಕೆಂಬ ತೀವ್ರವಾದ ಇಚ್ಛೆ ತಾನಾಗಿ ಹುಟ್ಟುತ್ತದೆ. ಇದು ನಾಲ್ಕನೆಯದು. ಇವುಗಳಲ್ಲಿ ಮುಮುಕ್ಷುತ್ವವೇ ಮುಖ್ಯವಾದದ್ದು. ಜನ್ಮಾಂತರಸುಕೃತದಿಂದ ಮೋಕ್ಷೇಚ್ಛೆ ಹುಟ್ಟುತ್ತದೆ. ಯಜ್ಞಾದಿಪುಣ್ಯಕಾರಗಳಿಂದ ಜನಿಸುವ ಸುಖವು ಕ್ಷಣಿಕವೆಂಬ ನಿಶ್ಚಯವಿರತಕ್ಕವನು ಭಗವದರ್ಪಣ ಬುದ್ಧಿಯಿಂದ ಅಂತಹ ಕರ್ಮಗಳನ್ನು ಆಚರಿಸುತ್ತಾನೆ, ಯಾವ ಇಹಪರಸುಖಾಪೇಕ್ಷೆಯಿಂದಲೂ ಅಲ್ಲ. ಅದೇ ನಿಷ್ಕಾಮ ಕರ್ಮ. ಅದರಿಂದ ಚಿತ್ತಶುದ್ಧಿಯಾಗಿ ಈಶ್ವರಾನುಗ್ರಹದಿಂದ ವೇದಾಂತಶ್ರವಣದಲ್ಲಿ ಇಚ್ಛೆ ಹುಟ್ಟುತ್ತದೆ. ರಾಗ, ದ್ವೇಷ, ಅಸೂಯೆ-ಮುಂತಾದ ಚಿತ್ತದ ಕೊಳೆಗಳನ್ನು ತೊಡೆದು ಹಾಕುವುದೇ ಚಿತ್ತಶುದ್ಧಿ.

ಭಗವದ್ಗೀತೆಯ ದ್ವಿತೀಯಾಧ್ಯಾದಲ್ಲಿ ಸ್ಥಿತಪ್ರಜ್ಞನ ಲಕ್ಷಣಗಳನ್ನು ವರ್ಣಿಸಿದೆ. ಆ ಲಕ್ಷಣಗಳು ಸಾಧಕನಿಗೆ ಸಾಧನಗಳಾಗುತ್ತವೆಯೆಂದು ಆಚಾರ್ಯರು ಬಹುಸುಂದರವಾಗಿ ವ್ಯಾಖ್ಯಾನ ಮಾಡಿದ್ದಾರೆ. ಕೃತಾರ್ಥನಾದ ಜ್ಞಾನಿಯ ಲಕ್ಷಣಗಳನ್ನು ಕಟ್ಟಿಕೊಂಡು ನಮಗೆ ಆಗಬೇಕಾದ್ದೇನು? ಅಂತಹ ವರ್ಣನೆಯಿಂದ ಪ್ರಯೋಜನವೇನು?-ಎಂಬ ಶಂಕೆಗೆ ಇಲ್ಲಿ ಉತ್ತರ ದೊರೆಯುತ್ತದೆ. ಮುಮುಕ್ಷುವಾದ ಸಾಧಕನಿಗೆ ಯಾವ ಗುಣಗಳು ಯತ್ನಸಾಧ್ಯಗಳೋ ಅವು ಕೃತಾರ್ಥನಾದ ಮಹಾತ್ಮನಿಗೆ ಸ್ವತಃಸಿದ್ಧಗಳಾಗಿದ್ದು ಸಹಜವಾಗಿ ತೋರಿಕೊಳ್ಳುತ್ತವೆ. ಅಮಾನಿತ್ವ, ಅದಂಭಿತ್ವ ಮುಂತಾದ ದೈವೀಸಂಪತ್ತಿನ ವರ್ಣನೆಯೇನುಂಟು, ಅವೂ ಸಹ ಸಾಧಕನಿಗೆ ಸಾಧನಗಳು. ಇವೆಲ್ಲವೂ ಮೇಲೆ ಹೇಳಿದ ನಾಲ್ಕು ಅಧಿಕಾರ ಸಂಪತ್ತುಗಳಲ್ಲಿ ಸೇರಿಹೋಗುತಕ್ಕವು. ಶಮ, ದಮಾದಿಗಳ ವಿವರಣೆಯೇ ಅಧ್ಯಾತ್ಮಶಾಸ್ತ್ರದಲ್ಲಿ ನಾನಾ ವಿಧವಾಗಿ ಬಂದಿರುತ್ತದೆ.

"ಸಂನ್ಯಾಸಿಗೆ ಮಾತ್ರ ವೇದಾಂತಶ್ರವಣದಲ್ಲಿ ಅಧಿಕಾರ, ಸಂನ್ಯಾಸಿಗೆ ಅಧಿಕಾರ, ಸಂನ್ಯಾಸಿಗೆ ಮಾತ್ರ ಮೋಕ್ಷವು ಲಭಿಸುತ್ತದೆ" ಎಂಬ ಅಭಿಪ್ರಾಯವನ್ನು ಕೊಡುವ ವಾಕ್ಯಗಳು ಆಚಾರ್ಯರ ಭಾಷ್ಯಗಳಲ್ಲಿ ಲಭಿಸುತ್ತವೆ. ಆದರೆ ಎಲ್ಲ ಭಾಷ್ಯಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದಾಗ, ಸಂನ್ಯಾಸಿಪದವು ವಿರಕ್ತನಿಗೆ ಉಪಲಕ್ಷಣವೆಂದೂ ವೈರಾಗ್ಯಲಕ್ಷಣಸಂನ್ಯಾಸವೇ ಆಚಾರ್ಯರಿಗೆ ವಿವಕ್ಷಿತವೆಂದೂ ಹೇಳಬಹುದು. ಇತಿಹಾಸ ಪುರಾಣಗಳಲ್ಲಿಯೂ ಸಹ ಗೃಹಸ್ಥರು ವೇದಾಂತಶ್ರವಣ ಮಾಡಿ ಆತ್ಮಜ್ಞಾನವನ್ನು ಪಡೆದು ಮುಕ್ತರಾದುದಕ್ಕೆ ಉದಾಹರಣೆಗಳು ದೊರೆಯುತ್ತವೆ.

**262**

**ಕರ್ಮಗೋಚರಾತ್ ಸಾಧ್ಯಸಾಧನ ಲಕ್ಷಣಾತ್ ಅನಿತ್ಯಾತ್ ವಿರಕ್ತಸ್ಯೈವ ಆತ್ಮಜ್ಞಾನೇऽಧಿಕಾರಃ |** **-ಕಠ 1-20**

ಸಾಧ್ಯ-ಸಾಧನರೂಪವಾದ ಕರ್ಮ ವಿಷಯದಿಂದ ಯಾವನು ವಿರಕ್ತನೋ ಅವನಿಗೆ ಮಾತ್ರ ಆತ್ಮಜ್ಞಾನದಲ್ಲಿ ಅಧಿಕಾರವಿರುತ್ತದೆ.

**263**

**ಸರ್ವೇಷಾಂ ಚಾಧಿಕಾರೋ ವಿದ್ಯಾಯಾಮ್ | ಪರಂ ಚ ಶ್ರೇಯಃ ಕೇವಲಾಯಾ ವಿದ್ಯಾಯಾ ಏವ ಇತಿ ಸಿದ್ಧಮ್ |** **-ತೈತ್ತಿರೀಯ -ಶೀಕ್ಷಾ-11**

ವಿದ್ಯೆಯಲ್ಲಿ ಸರ್ವರಿಗೂ ಅಧಿಕಾರವಿದೆ. ಪರಮ ಶ್ರೇಯಸ್ಸಾದ ಮೋಕ್ಷವಾದರೋ ಕೇವಲ ವಿದ್ಯೆಯಿಂದಲೇ ದೊರಕುತ್ತದೆ-ಎಂದು ನಿರ್ಣೀತವಾಯಿತು.

ಸಂಸಾರದಲ್ಲಿ ಆಸಕ್ತಿಯನ್ನು ತೊರೆದಿರುವ ಕರ್ಮಯೋಗಿಯಾದ ಗೃಹಸ್ಥನಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರ ಉಂಟು.

**264**

**ಶ್ರೌತಸ್ಮಾರ್ತೇಷು ನಿತ್ಯೇಷು ಕರ್ಮಸು ಯುಕ್ತಸ್ಯ ನಿಷ್ಕಾಮಸ್ಯ ಪರಬ್ರಹ್ಮ ವಿವಿಧಿಷೋಃ ಆರ್ಷಾಣಿ ದರ್ಶನಾನಿ ಪ್ರಾದುರ್ಭವಂತಿ ಆತ್ಮಾದಿ ವಿಷಯಾಣಿ |**
**-ತೈತ್ತಿರೀಯ-ಶೀಕ್ಷಾ-10**

ಶ್ರುತಿಸ್ಮೃತಿವಿಹಿತವಾಗಿರುವ ನಿತ್ಯಕರ್ಮಗಳಲ್ಲಿ ತೊಡಗಿರುವ ನಿಷ್ಕಾಮನೂ ಪರಬ್ರಹ್ಮವನ್ನರಿಯಲು ಇಚ್ಛೆಯುಳ್ಳವನೂ ಆದವನಿಗೆ ಆತ್ಮಾದಿವಿಷಯಕಗಳಾದ ಆರ್ಷ ದರ್ಶನಗಳು ಉದಯಿಸುತ್ತವೆ.

ಸಕಾಮನಿಗೆ ಸ್ವರ್ಗಲೋಕವೇ ಮೊದಲಾದದ್ದು ಪ್ರಾಪ್ತಿಯಾಗಬಹುದು. ಅವನಿಗೆ ಮೋಕ್ಷವಿಲ್ಲ.

**265**

**ಅರ್ಥಿತ್ವಾದಿಸಂಭವಾದುಪಪನ್ನೋದೇವಾದೀನಾಮಪಿ ಬ್ರಹ್ಮವಿದ್ಯಾ-ವಿದ್ಯಾಯಾಮಧಿಕಾರಃ |** **- ಸೂ.ಭಾ. 1-3-33**

ಮೋಕ್ಷದ ಅಪೇಕ್ಷೆ ಮೊದಲಾದದ್ದು ದೇವತಾದಿಗಳಿಗೂ ಇರಬಹುದಾದ್ದರಿಂದ ಅವರಿಗೂ ಬ್ರಹ್ಮವಿದ್ಯೆಲ್ಲಿ ಅಧಿಕಾರ ಉಂಟು.

ಅರ್ಥಿತ್ವ, ಸಾಮರ್ಥ್ಯ ಮೊದಲಾದ ಯೋಗ್ಯತೆ ಇದ್ದವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರ ಉಂಟು. ದೇವ, ಸಿದ್ಧ, ಸಾಧ್ಯಾದಿಗಳಿಗೂ ಯೋಗ್ಯತೆ ಇದೆ. ಶೂದ್ರರಿಗೆ ಇತಿಹಾಸ ಪುರಾಣಾದಿಗಳ ಮೂಲಕ ಬ್ರಹ್ಮವಿದ್ಯೆಯಲ್ಲಿ ಅಧಿಕಾರ ಉಂಟು. ವೇದಪೂರ್ವಕವಾಗಿ ಇಲ್ಲ (ನೋಡಿ. ಸೂ.ಭಾ. 1-38)

**266**

**ಸರ್ವತ್ರೈವ ಹಿ ಅಧ್ಯಾತ್ಮ ಶಾಸ್ತ್ರೇ ಕೃತಾರ್ಥಲಕ್ಷಣಾನಿ ಯಾನಿ ತಾನ್ಯೇವ ಸಾಧನಾನಿ ಉಪದಿಶ್ಯಂತೇ |ಯತ್ನಸಾಧ್ಯತ್ವಾತ್ |** **-ಗೀತಾ 2-55**

ಅಧ್ಯಾತ್ಮಶಾಸ್ತ್ರದಲ್ಲಿ ಎಲ್ಲೆಡೆಯೂ ಕೃತಾರ್ಥನಾದವನಿಗೆ ಯಾವುವು ಲಕ್ಷಣಗಳೆನಿಸುತ್ತವೆಯೋ ಅವನ್ನೇ (ಮುಮುಕ್ಷುವಿಗೆ) ಸಾಧನಗಳನ್ನಾಗಿ ಉಪದೇಶಿಸಲಾಗಿದೆ. ಏಕೆಂದರೆ, ಅವು ಪ್ರಯತ್ನದಿಂದ ಸಾಧಸಿಕೊಳ್ಳಬೇಕಾದವುಗಳು.

ಪ್ರಕೃತದಲ್ಲಿ ಸ್ಥಿತಿಪ್ರಜ್ಞನ ಲಕ್ಷಣಗಳನ್ನು ತಿಳಿಸುವುದರ ಮೂಲಕ ಮುಮುಕ್ಷುವಿಗೆ ಅವು ಸಾಧನಗಳೆಂದು ಬೋಧಿಸಲಾಗಿದೆ.

**267**

**ಅತೋಽವಗಮ್ಯತೇ ಅಧೀತವೇದಸ್ಯ ಧರ್ಮಜಿಜ್ಞಾಸಾಮಕೃತ್ವಾ ಗುರುಕುಲಾತ್ ನ ಸಮಾವರ್ತಿತವ್ಯಮ್ ಇತಿ |** **-ತೈತ್ತಿ. ಶೀಕ್ಷಾ-11**

ಆದ್ದರಿಂದ (ವೇದಾಧ್ಯಯನವಾದೊಡನೆ ಶಿಷ್ಯನಿಗೆ ಧರ್ಮ ವಿಚಾರವನ್ನು ಶ್ರುತಿಯು ಉಪದೇಶ ಮಾಡಿರುವುದರಿಂದ) ವೇದಾಧ್ಯಯನ ಮಾಡಿದವನು ಧರ್ಮ ಜಿಜ್ಞಾಸೆಯನ್ನು ಮಾಡದೆ ಗುರುಕುಲದಿಂದ ಹಿಂದಿರುಗಬಾರದೆಂದು ಗೊತ್ತಾಗುತ್ತದೆ.

**268**

**ಚೀರ್ಣವ್ರತಸ್ಯ ಹಿ ವಿದ್ಯಾ ಫಲಾಯ ಸಂಸ್ಕೃತಾ ಭವತಿ |**

**-ಮುಂಡಕ 3-2-11**

ವ್ರತವನ್ನು ಆಚರಿಸಿದವನಿಗೆ ವೇದವಿದ್ಯೆಯು ಸಂಸ್ಕಾರವನ್ನು ಮಾಡಿ ಫಲವನ್ನು ನೀಡುತ್ತದೆ.

ಬ್ರಹ್ಮಚರ್ಯವ್ರತ ಪೂರ್ವಕವಾಗಿ ಅಧ್ಯಯನ ಮಾಡಿದ ವೇದವಿದ್ಯೆಗೆ ವಿಶಿಷ್ಟವಾದ ಶಕ್ತಿಯುಂಟಾಗುತ್ತದೆ.

**269**

**ಆದಾವಿಂದ್ರಿಯಾಣಿ ಸ್ವವಶೇ ಸ್ಥಾಪಯಿತವ್ಯಾನಿ |**

**-ಗೀತಾ 2-60 ಅವತರಣಿಕೆ**

ಮೊದಲು ಇಂದ್ರಿಯಗಳನ್ನು ನಮ್ಮ ಸ್ವಾಧೀನದಲ್ಲಿ ಇರಿಸಿಕೊಳ್ಳಬೇಕು.

**270**

**ವೈರಾಗ್ಯಂ ನಾಮ ದೃಷ್ಟಾದೃಷ್ಟೇಷ್ಟ ಭೋಗೇಷು ದೋಷದರ್ಶನಾಭ್ಯಾಸಾತ್ ವೈತೃಷ್ಣ್ಯಮ್ |** **-ಗೀತಾ 6-37**

ದೃಷ್ಟವಾದ ಮತ್ತು ಅದೃಷ್ಟವಾದ ಇಷ್ಟ ಭೋಗಗಳಲ್ಲಿ ದೋಷವನ್ನು ಮತ್ತೆ ಮತ್ತೆ ಕಂಡುಕೊಂಡು ಭೋಗದಲ್ಲಿ ಆಸೆಯನ್ನು ತೊರೆಯುವುದು ವೈರಾಗ್ಯವೆನಿಸುತ್ತದೆ.

**271**

**ಇಂದ್ರಿಯಾಣಾಂ ಹಿ ವಿಷಯಸೇವಾತೃಷ್ಣಾತೋ ನಿವೃತ್ತಿರ್ಯಾ ತತ್ ಸುಖಮ್ ನ ವಿಷಯವಿಷಯಾ ತೃಷ್ಣಾ ಸುಖಮ್ | ದುಃಖಮೇವ ಹಿ ಸಾ |ನ ತೃಷ್ಣಾಯಾಂ ಸತ್ಯಾಂ ಸುಖಸ್ಯ ಗಂಧಮಾತ್ರ ಮಪಿ ಉಪಪದ್ಯತೇ |**

**-ಗೀತಾ 2-66**

ವಿಷಯಗಳನ್ನು ಸೇವಿಸಬೇಕೆಂಬ ಬಯಕೆಯಿಂದ ಇಂದ್ರಿಯಗಳು ನಿವೃತ್ತವಾಗುವುದೇ ಸುಖ; ವಿಷಯಗಳ ಬಯಕೆ ಸುಖವಲ್ಲ. ಅದು ದುಃಖವೇ ಸರಿ. ವಿಷಯಗಳ ಆಸೆ ಇರುವವರೆಗೆ ಸುಖದ ಲವಲೇಶವೂ ಇರುವುದಿಲ್ಲ.

**272**

**ಸರ್ವಾನರ್ಥಸ್ಯ ಮೂಲಮುಕ್ತಂ ವಿಷಯಾಭಿಧ್ಯಾನಮ್ |**

**-ಗೀತಾ 2-64**

ಎಲ್ಲಾ ಅನರ್ಥಗಳಿಗೂ ಮೂಲವಾದದ್ದು ವಿಷಯಗಳನ್ನು ಆಸಕ್ತಿಯಿಂದ ಚಿಂತಿಸುವುದು. ಎಂದು ಹೇಳಿದ್ದಾಯಿತು.

**273**

**ಸ್ತ್ರ್ಯಾದಿಬಾಹ್ಯವಿಷಯತೃಷ್ಣಾಪಹೃತಚಿತ್ತಾನಾಂ ಪ್ರತ್ಯಗಾತ್ಮ ವಿಜ್ಞಾನಾನುಪಪತ್ತೇಃ**

**-ಛಾಂ. 8-5-4**

ಸ್ತ್ರೀಯೇ ಮೊದಲಾದ ಬಾಹ್ಯವಿಷಯಗಳ ತೃಷ್ಣೆಯಿಂದ ಯಾರ ಚಿತ್ತವು ಅಪಹೃತವಾಗಿರುತ್ತದೆಯೋ ಅವರಿಗೆ ಅಂತರಾತ್ಮ ಜ್ಞಾನವು ಆಗುವುದಿಲ್ಲ.

**274**

**ವಿರಕ್ತಸ್ಯ ಹಿ ಸಂಸಾರಾತ್ ಭಗವತ್ತತ್ತ್ವಜ್ಞಾನೇ ಅಧಿಕಾರಃ ನಾನ್ಯಸ್ಯ |**

**-ಗೀತಾ 15-1**

ಸಂಸಾರದಲ್ಲಿ ವಿರಕ್ತನಾದವನಿಗೇ ಭಗವಂತನ ತತ್ತ್ವವನ್ನು ಅರಿತುಕೊಳ್ಳುವುದಕ್ಕೆ ಅಧಿಕಾರವಿದೆಯೇ ಹೊರತು ಬೇರೆ ಯಾರಿಗೂ ಇಲ್ಲ.

**275**

**ನ ಸಂಸಾರೇ ಸುಖಸ್ಯ ಗಂಧಮಾತ್ರಮಪ್ಯಸ್ತೀತಿ ಬುದ್ಧ್ವಾ ವಿಷಯಮೃಗತೃಷ್ಣಿಕಾಯಾಃ ಇಂದ್ರಿಯಾಣಿ ನಿವರ್ತಯೇತ್ |**

**-ಗೀತಾ 5-22**

ಸಂಸಾರದಲ್ಲಿ ಸುಖದ ವಾಸನೆಯೂ ಇಲ್ಲವೆಂದೂ ತಿಳಿದು ವಿಷಯವೆಂಬ ಬಿಸಿಲ್ಗುದುರೆಯಿಂದ ಇಂದ್ರಿಯಗಳನ್ನು ಹಿಂದಕ್ಕೆ ಜಗ್ಗಬೇಕು.

**276**

**ಇಹಕೃತಾತ್ಪೂರ್ವಕೃತಾದ್ವಾ ಸಂಸ್ಕಾರಶೇಷೋದ್ಭವಾತ್ ವಿರಕ್ತಸ್ಯ ಪ್ರತ್ಯಗಾತ್ಮವಿಷಯಾ ಜಿಜ್ಞಾಸಾ ಪ್ರವರ್ತತೇ |**

**-ಪೀಠಿಕೆ. ಕೇನ.**

ಶುದ್ಧಸತ್ತ್ವನೂ ನಿಷ್ಕಾಮನೂ ಆಗಿ ವಿರಕ್ತನಾದವನಿಗೆ ಈ ಜನ್ಮದಲ್ಲಿಯೋ ಪೂರ್ವಜನದಲ್ಲಿಯೋ ಮಾಡಿದ ಪುಣ್ಯಕರ್ಮದಿಂದ ಸಂಸ್ಕಾರವಿಶೇಷವುಂಟಾಗಿ ಪ್ರತ್ಯಗಾತ್ಮನನ್ನು ತಿಳಿಯುವ ಇಚ್ಛೆ ಹುಟ್ಟುತ್ತದೆ.

**277**

**ಕರ್ಮಾರಂಭಸ್ಯೈವ ನೈಷ್ಕರ್ಮ್ಯೋಪಾಯತ್ವಾತ್ | ನ ಹಿ ಉಪಾಯಮಂತರೇಣ ಉಪೇಯ ಪ್ರಾಪ್ತಿರಸ್ತಿ | ಕರ್ಮಯೋಗೋಪಾಯತ್ವಂ ಚ ನೈಷ್ಕರ್ಮಲಕ್ಷಣಸ್ಯ ಜ್ಞಾನಯೋಗಸ್ಯ ಶ್ರುತಾವಿಹ ಚ ಪ್ರತಿಪಾದನಾತ್ |**

**-ಗೀತಾ 3-4**

ಕರ್ಮಗಳನ್ನು ಮಾಡುವುದೇ ನೈಷ್ಕರ್ಮಕ್ಕೆ ಉಪಾಯವಾಗಿರುತ್ತದೆ. ಉಪಾಯವು ಎಂದರೆ ಸಾಧನವಿಲ್ಲದೆ ಸಾಧ್ಯವು ದೊರೆಯದಷ್ಟೆ. ನೈಷ್ಕರ್ಮ್ಯರೂಪವಾದ ಜ್ಞಾನಯೋಗಕ್ಕೆ

ಕರ್ಮಯೋಗವೇ ಸಾಧನವೆಂದು ಶ್ರುತಿಯಲ್ಲಿಯೂ ಈ ಗೀತಾಶಾಸ್ತ್ರದಲ್ಲಿಯೂ ಉಕ್ತವಾಗಿದೆ.

ನೈಷ್ಕರ್ಮ್ಯವೆಂದರೆ ಜ್ಞಾನನಿಷ್ಠೆ. 'ತಮೇವಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾನಾಶಕೇನ' (ಬೃಹ. 4-4-22) ಇದು ಶ್ರುತಿ. 'ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ' (ಗೀತಾ 5-11) ಇತ್ಯಾದಿ ವಾಕ್ಯಗಳು ಜ್ಞಾನಕ್ಕೆ ಕರ್ಮವು ಉಪಯೋಗಿ ಎಂದು ಹೇಳಿವೆ.



# ೧೨ ಜ್ಞಾನ-ಜ್ಞಾನಿ

ಧರ್ಮಜ್ಞಾನ-ಆತ್ಮಜ್ಞಾನಗಳಲ್ಲಿ ಒಂದು ವಿಶೇಷವಿದೆ. ಅಭ್ಯುದಯ ಫಲವನ್ನು ಕೊಡುವ ಧರ್ಮದ ಜ್ಞಾನವು ಅದಕ್ಕೆ ಸಾಧನವಾದ ಕರ್ಮವನ್ನು ಮಾಡಲು ಪ್ರೇರಿಸುತ್ತದೆ. ಆತ್ಮಜ್ಞಾನವಾದ ಮೇಲೆ ಮತ್ತೆ ಮಾಡಬೇಕಾದ ಕರ್ತವ್ಯವೇನೂ ಇರುವುದಿಲ್ಲ. ತಾನು ಕರ್ತೃವೂ ಭೋಕ್ತೃವೂ ಅಲ್ಲದ ಸರ್ವಾತ್ಮನೆಂಬ ಅರಿವು ಬಂದು ಬಿಡುವುದರಿಂದ ಅವನು ಕೃತಾರ್ಥನಾಗಿ ಬಿಡುತ್ತಾನೆ. ಕೃತಕೃತ್ಯನಾದ ಅವನಿಗೆ ಇನ್ನು ಮಾಡಬೇಕಾದದ್ದು ಯಾವುದೂ ಉಳಿದಿರುವುದಿಲ್ಲ. ಧರ್ಮಜ್ಞಾನದಿಂದ ಕರ್ಮದ ಮೂಲಕ ಸ್ವರ್ಗಾದಿ ಫಲವಿರುತ್ತದೆ. ಧರ್ಮಜ್ಞಾನವು ಸ್ವಯಂಪೂರ್ಣವಲ್ಲ. ಆತ್ಮಜ್ಞಾನವು ಸ್ವಯಂಪೂರ್ಣ. ತನಗೆ ತಾನೇ ಫಲವಾಗಿರುತ್ತದೆ. ಜ್ಞಾನದಿಂದ ಬ್ರಹ್ಮಪ್ರಾಪ್ತಿಯಾಗುತ್ತದೆಯೆಂದರೆ ಜ್ಞಾನದಿಂದ ಅಜ್ಞಾನವು ತೊಲಗುತ್ತದೆಯೆಂದರ್ಥ "ಅಹಂ ಬ್ರಹ್ಮಾಸ್ಮಿ" ಎಂದು ಅನುಭವಪರ್ಯಂತವಾದ ಜ್ಞಾನವೇ ಬ್ರಹ್ಮಪ್ರಾಪ್ತಿ. ಬೇಕಾದರೆ ಆತ್ಯಂತಿಕವಾದ ಸಂಸಾರಾಭಾವವನ್ನು ಫಲವೆಂದಿಟ್ಟುಕೊಳ್ಳಬಹುದು. ಈ ಜ್ಞಾನವೇ ಆಧ್ಯಾತ್ಮವಿದ್ಯೆ.

ಈಶ್ವರಾನುಗ್ರಹ, ತಪಸ್ಸು, ಧ್ಯಾನ, ಅಹಿಂಸಾ, ಬ್ರಹ್ಮಚರ್ಯ ಮುಂತಾದವು ಜ್ಞಾನಸಾಧನಗಳು. ಪರಿಶುದ್ಧಚಿತ್ತನಾದ ಪುರುಷನಿಗೆ ವೇದಾಂತವಾಕ್ಯ ಶ್ರವಣದಿಂದ ಕೂಡಲೇ ಬ್ರಹ್ಮಾತ್ಮವಿಜ್ಞಾನ ಉಂಟಾಗಿಬಿಡುತ್ತದೆ. ಆದರೆ ಅದಕ್ಕೆ ಪೂರ್ವಭಾವಿಯಾಗಿ ಸರಿಯಾದ ಅಧಿಕಾರಸಂಪತ್ತು ಇದ್ದು ಚಿತ್ತಶುದ್ಧಿ ಇರಬೇಕು. ಇಲ್ಲದಿದ್ದರೆ ಲಭಿಸತಕ್ಕದ್ದು ಪರೋಕ್ಷಜ್ಞಾನವೇ ಹೊರತು ಅನುಭವಪರ್ಯಂತವಾದ ಆತ್ಮಜ್ಞಾನವಲ್ಲ.

ಜ್ಞಾನಿಗೆ ಈ ದೇಹದಿಂದ ಉತ್ಕ್ರಾಂತಿ ಏನೂ ಇಲ್ಲ. ಸರ್ವಾತ್ಮನಾದ ಆತನು ಹೋಗಬೇಕಾದದ್ದಾದರೂ ಎಲ್ಲಿಗೆ? ಕರ್ಮ, ಉಪಾಸನೆ, ಶ್ರವಣಾದಿಗಳು ಆತ್ಮಜ್ಞಾನಕ್ಕೆ ಕಾರಣಗಳೇ ಹೊರತು, ಜ್ಞಾನಿಗೆ ಮಾಡಬೇಕಾದ ಕರ್ತವ್ಯ ಯಾವುದೂ ಇಲ್ಲ. ಆದರೂ ಜ್ಞಾನಿಯೂ ಲೋಕಸಂಗ್ರಹಕ್ಕಾಗಿ, ಶಿಷ್ಯಾನುಗ್ರಹಕ್ಕಾಗಿ ಕೆಲವು ಕರ್ತವ್ಯಗಳನ್ನು ಮಾಡಬಹುದು. ಆಚಾರ್ಯರೇ ಅದಕ್ಕೆ ಪ್ರಥಮೋದಾಹರಣೆಯಾಗಿರುತ್ತಾರೆ. ಆತ್ಮಜ್ಞಾನಿಗೆ ಪ್ರಪಂಚವು ಬಾಧಿತವಾಗಿರುತ್ತದೆ, ಜಗತ್ತು ಮಿಥ್ಯೆಯೆಂಬುದು ಅನುಭವಕ್ಕೆ ಬಂದಿರುತ್ತದೆ ಎಂದು ಆಚಾರ್ಯರೇ ಬರೆದಿದ್ದಾರೆ. ಅದು ಪರ್ಯಾಯದಿಂದ ತಮ್ಮ ಅನುಭವವೆಂಬುದನ್ನು

ತೋರಿಸಿಕೊಂಡಿದ್ದಾರೆ. ಜ್ಞಾನಿಯು ಲೋಕ ಸಂಗ್ರಹಕ್ಕಾಗಿ ಕರ್ಮವನ್ನು ಮಾಡುತ್ತಿದ್ದರೂ ಉಚ್ಛೃಂಖಲವಾಗಿ ಯಥೇಷ್ಟಾಚರಣೆಯಲ್ಲಿ ಎಂದಿಗೂ ತೊಡಗುವುದಿಲ್ಲ. ಏಕೆಂದರೆ, ಯಥೇಷ್ಟಾಚರಣೆಗೆ ದೇಹಾಭಿಮಾನವೂ ರಾಗ ದ್ವೇಷಗಳೂ ಕಾರಣವಾಗಿರುತ್ತವೆ. ಆದರೆ ಜ್ಞಾನಿಗೆ ಅದು ಯಾವುದೂ ನಿರ್ಮೂಲವಾಗಿ ತೊಡೆದುಹೋಗಿರುವುದರಿಂದ ಅವನು ಅಧರ್ಮದಲ್ಲಿ ತೊಡಗಲು ಕಾರಣವೇ ಇರುವುದಿಲ್ಲ. ಜ್ಞಾನಿಯು ಮಾಡುವ ಭಿಕ್ಷಾಟನೆ ಮೊದಲಾದದ್ದು ಸಹ ಕರ್ಮವಲ್ಲ. 'ಬ್ರಹ್ಮಾರ್ಪಣಂ ಬ್ರಹ್ಮ ಹವಿಃ .....' ಎಂಬ ಗೀತಾವಚನದಂತೆ ಸರ್ವತ್ರ ಬ್ರಹ್ಮಬುದ್ಧಿಯೇ ಇರುತ್ತದೆ. ಕರ್ತೃತ್ವ ಬುದ್ಧಿಯೇ ಇರುವುದಿಲ್ಲ. ನಿಷ್ಕ್ರಿಯನಾದ ಪರಮಾತ್ಮನೇ ನಾನೆಂಬ ಜ್ಞಾನದಲ್ಲಿ ನೆಲೆ ನಿಲ್ಲುವುದೇ ಸರ್ವಕರ್ಮ ಸಂನ್ಯಾಸ. ಈ ಸಂನ್ಯಾಸವು ಗೃಹಸ್ಥರಿಗೂ ಪುಣ್ಯವಶದಿಂದ ಪ್ರಾಪ್ತವಾಗಬಹುದು. ಆಗ ಅವರು ಆಶ್ರಮಕರ್ಮದಿಂದ ಆಗಬೇಕಾದದ್ದೇನೂ ಇಲ್ಲವೆಂದು ಸಂನ್ಯಾಸವನ್ನು ಸ್ವೀಕರಿಸಬಹುದು. ಅಥವಾ ಯಾವುದಾದರೂ ನಿಮಿತ್ತದಿಂದ ಗೃಹಸ್ಥರಾಗಿಯೇ ಉಳಿಯಬಹುದು. ಕ್ರಿಯಾಕಾರಕ ಫಲಗಳು ಬ್ರಹ್ಮವೇ ಎಂಬ ನಿಶ್ಚಯ ಅವರಿಗಿರುವುದರಿಂದ ಅವರು ಮಾಡುವ ಕರ್ಮವು ಕರ್ಮವೇ ಅಲ್ಲವೆಂದು ತಿಳಿಯಬೇಕು.

**278**

**ಪರಮಾತ್ಮನೋ ವಿದ್ಯಾ ಬ್ರಹ್ಮವಿದ್ಯಾ | (ಪರಮಾತ್ಮ ವಿಷಯಾ ವಿದ್ಯಾ) ಬ್ರಹ್ಮಣಾ ವಾಽಗ್ರ ಜೇನೋಕ್ತೇತಿ ಬ್ರಹ್ಮವಿದ್ಯಾ || -ಮುಂಡಕ 1-1-1**

(ಬ್ರಹ್ಮದ ವಿದ್ಯೆಯು ಬ್ರಹ್ಮವಿದ್ಯೆ) ಬ್ರಹ್ಮ ಎಂದರೆ ಪರಮಾತ್ಮ. ಆತನ ವಿಷಯದ ವಿದ್ಯೆ-ಬ್ರಹ್ಮವಿದ್ಯೆ. ಅಥವಾ ಮೊದಲು ಆವಿರ್ಭವಿಸಿದ ಬ್ರಹ್ಮನಿಂದ ಉಕ್ತವಾದದ್ದು ಬ್ರಹ್ಮವಿದ್ಯೆ.

**279**

**ಯತ್ತು ಬ್ರಹ್ಮಣೋ ವಿಜ್ಞಾನಂ ತತ್ ಸವಿತೃಪ್ರಕಾಶವತ್ ಅಗ್ನ್ಯುಷ್ಣವಚ್ಚ ಬ್ರಹ್ಮಸ್ವರೂಪಾವ್ಯತಿರಿಕ್ತಂ ಸ್ವರೂಪಮೇವ | -ತೈತ್ತಿ. -ಆನಂದವಲ್ಲಿ-1**

ಬ್ರಹ್ಮದ ವಿಜ್ಞಾನ ಎಂದಾಗ ವಿಜ್ಞಾನವು ಬ್ರಹ್ಮಕ್ಕಿಂತ ಬೇರೆಯಲ್ಲ. ಅದು ಬ್ರಹ್ಮ ಸ್ವರೂಪವೇ. ಸೂರ್ಯನ ಪ್ರಕಾಶ, ಅಗ್ನಿಯ ಉಷ್ಣತೆ ಎಂಬಂತೆ ಈ ಪ್ರಯೋಗ ಇದೆ.

**280**

**ತ್ರೈಲೋಕ್ಯರಾಜ್ಯಾಚ್ಚ ಗುರುತರಾ ವಿದ್ಯೇತಿ |** **-ಬೃಹ. 8-7-2**

ತ್ರಿಲೋಕಾಧಿಪತ್ಯಕ್ಕಿಂತಲೂ ಆತ್ಮಜ್ಞಾನ ಹೆಚ್ಚಿನದು.

**281**

**ಜ್ಞಾನಂ ಶಾಸ್ತ್ರೋಕ್ತಪದಾರ್ಥಾನಾಂ ಪರಿಜ್ಞಾನಮ್ | ವಿಜ್ಞಾನಂ ತು ಶಾಸ್ತ್ರತೋ ಜ್ಞಾತಾನಾಂ ತಥೈವ ಸ್ವಾನುಭವಕರಣಮ್ |** **-ಗೀತಾ 6-8**

ಜ್ಞಾನವೆಂದರೆ ಶಾಸ್ತ್ರೋಕ್ತ ವಿಷಯಗಳ ಜ್ಞಾನ. ವಿಜ್ಞಾನವೆಂದರೆ ಶಾಸ್ತ್ರದಿಂದ ತಿಳಿದ ವಿಷಯಗಳನ್ನು ಅದೇ ರೀತಿಯಲ್ಲಿ ತನ್ನ ಅನುಭವಕ್ಕೆ ತಂದುಕೊಳ್ಳುವುದು.

"ಜ್ಞಾನ ವಿಜ್ಞಾನ ತೃಪ್ತಾತ್ಮಾ" ಎಂಬಲ್ಲಿರುವ ಶಬ್ದಗಳ ಅರ್ಥ ವಿವರಣೆ ಇದು. ಸಂದರ್ಭಾನುಸಾರ ಶಬ್ದಗಳ ಅರ್ಥ ಸ್ವಲ್ಪ ಬದಲಾವಣೆ ಹೊಂದುತ್ತದೆ. ಎಂಬುದನ್ನು ನೆನಪಿನಲ್ಲಿಡಬೇಕು.

**282**

**ತತ್ತ್ವಜ್ಞಾನಂ ತು ವೇದಾಂತವಾಕ್ಯೇಭ್ಯ ಏವ ಭವತಿ | 'ನಾವೇದವಿನ್ಮನುತೇ ತಂ ಬೃಹಂತವಮ್' (ತೈ.ಬ್ರಾ. 3-12-9)ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ' (ಬೃಹ. 3-9-26) ಇತ್ಯೇವಮಾದಿ ಶ್ರುತಿಭ್ಯಃ |** **-ಸೂ.ಭಾ. 2-1-3**

ವೇದವನ್ನರಿಯದವನು ದೊಡ್ಡವನಾದ ಆ ಪರಮಾತ್ಮನನ್ನು ತಿಳಿಯಲಾರ, 'ಉಪನಿಷದ್ವೇದ್ಯನಾದ ಆ ಪುರುಷನ ವಿಷಯವಾಗಿ ಪ್ರಶ್ನೆಮಾಡುತ್ತೇನೆ'ಇತ್ಯಾದಿ ಶ್ರುತಿಗಳಿಂದ 'ತತ್ತ್ವಜ್ಞಾನವು ವೇದಾಂತ ವಾಕ್ಯಗಳಿಂದಲೇ ದೊರೆಯುತ್ತದೆ'ಎಂದು ನಿಶ್ಚಿತವಾಗಿ ಗೊತ್ತಾಗುತ್ತದೆ.

**283**

**ಅವಿದ್ಯಾಪಗಮಮಾತ್ರತ್ವಾತ್ ಬ್ರಹ್ಮಪ್ರಾಪ್ತಿಫಲಸ್ಯ|**

**-ಬೃಹ. 1-4-10**

ಬ್ರಹ್ಮ ಪ್ರಾಪ್ತಿಯ ಫಲವೆಂದರೆ ಅವಿದ್ಯೆ ತೊಲಗುತ್ತದೆ. ಎಂದಿಷ್ಟೇ ಅಭಿಪ್ರಾಯ.

ಎಲ್ಲಿಗೋ ಹೋಗಿ ಪಡೆಯಬೇಕಾದ ಬ್ರಹ್ಮ ಬೇರೆ ಇಲ್ಲ. ಆತ್ಮವೇ ಬ್ರಹ್ಮವಾದ್ದರಿಂದ.

**284**

**ಅಸ್ಯಾನರ್ಥಹೇತೋಃ ಪ್ರಹಾಣಾಯ ಆತ್ಮೈಕತ್ವವಿದ್ಯಾಪ್ರತಿಪತ್ತಯೇ ಸರ್ವೇ ವೇದಾಂತಾ ಆರಭ್ಯಂತೇ | -ಸೂ.ಭಾ. ಪೀಠಿಕೆ**

ಈ ಅನರ್ಥಹೇತುವಾದ ಅಧ್ಯಾಸವನ್ನು ಹೋಗಲಾಡಿಸಿ ಆತ್ಮ ಒಂದೇ ಎಂಬ ಜ್ಞಾನವನ್ನುಂಟುಮಾಡುವುದಕ್ಕಾಗಿ ಎಲ್ಲ ಉಪನಿಷತ್ತುಗಳೂ ಪ್ರವೃತ್ತವಾಗಿವೆ.

**285**

**ಅನುಭವಾವಸಾನಂ ಚ ಬ್ರಹ್ಮವಿಜ್ಞಾನಮವಿದ್ಯಾಯಾ ನಿವರ್ತಕಂ ಮೋಕ್ಷಸಾಧನಂ ಚ ದೃಷ್ಟಫಲತಯೇಷ್ಯತೇ | -ಸೂ.ಭಾ. 2-1-4**

ಬ್ರಹ್ಮ ವಿಜ್ಞಾನವು ಅನುಭವದಲ್ಲಿ ಪರ್ಯವಸಾನವಾಗತಕ್ಕದ್ದು. ಅದು ಅವಿದ್ಯೆಯನ್ನು ತೊಲಗಿಸುತ್ತದೆಯೆಂದೂ, ಮೋಕ್ಷಸಾಧನವೆಂದೂ ಒಪ್ಪಲಾಗಿದೆ. ಇದೆಲ್ಲವೂ ಬ್ರಹ್ಮವಿಜ್ಞಾನಕ್ಕೆ ದೃಷ್ಟವಾದ ಫಲ.

**286**

**ಜ್ಞಾನಂ ಚ ತಸ್ಮಿನ್ ಪರಾತ್ಮಭಾವನಿವೃತ್ತಿರೇವ | -ಬೃಹ. 4-4-20**

ಪರವಾದ-ಅನ್ಯವಾದ ದೇಹಾದಿಗಳಲ್ಲಿರುವ ಆತ್ಮಭಾವದ ನಿವೃತ್ತಿಯೇ ಜ್ಞಾನಿಯಲ್ಲಾಗುವ ಜ್ಞಾನ.

ಆತ್ಮನು ಅಪ್ರಮೇಯನೆಂದು ಶ್ರುತಿ ಹೇಳುತ್ತದೆ. ತಾನು ಆತ್ಮನೆಂದು ತಿಳಿಯುವುದು ಜ್ಞಾನ. ಈ ಆತ್ಮಭಾವ ಯಾವಾಗಲೂ ಇರತಕ್ಕದ್ದೇ. ಆದರೆ ದೇಹಾದಿಗಳಲ್ಲಿ ಆತ್ಮಭಾವ ಬಂದಿರುತ್ತದೆಯಲ್ಲ. ಅದು ನಿವೃತ್ತವಾದರೆ ಸಾಕು. ಹೊಸದಾಗಿ ತಾನು ಆತ್ಮನೆಂದು ತಿಳಿಯಬೇಕಾದ್ದಿಲ್ಲ. ತಾನು ತಿಳಿಯಲ್ಪಡಬೇಕಾದವನಲ್ಲವಾದ್ದರಿಂದ ಅಪ್ರಮೇಯ.

**287**

ವಿದ್ಯಾಯಾಶ್ಚ ಕಾರ್ಯಂ ಸರ್ವಾತ್ಮಭಾವಾಪತ್ತಿಃ | -ಬೃಹ. 1-4-10
ಸರ್ವಾತ್ಮಭಾವವನ್ನು ಪಡೆಯುವುದೇ ವಿದ್ಯೆಯ ಕಾರ್ಯ-ವಿದ್ಯೆಯಿಂದ ಆಗತಕ್ಕದ್ದು.

**288**

**ಪ್ರಯೋಜನಂ ಚ ಅಸ್ಯಾ ಬ್ರಹ್ಮವಿದ್ಯಾಯಾ ಅವಿದ್ಯಾನಿವೃತ್ತಿಃ, ತತಶ್ಚ ಆತ್ಯಂತಿಕಃ ಸಂಸಾರಾಭಾವಃ | -ತೈ. ಆನಂದವಲ್ಲಿ (ಪೀಠಿಕೆ)**

ಅವಿದ್ಯೆ ತೊಲಗುವುದೇ ಈ ಬ್ರಹ್ಮವಿದ್ಯೆಗೆ ಪ್ರಯೋಜನ. ಅವಿದ್ಯಾನಿವೃತ್ತಿಯಿಂದ ಆತ್ಯಂತಿಕವಾದ ಸಂಸಾರಾಭಾವ ಉಂಟಾಗುತ್ತದೆ. ಅದು ಪ್ರಯೋಜನ.

**289**

**ಕಿಂ ಚ ಬ್ರಹ್ಮವಿದಾಮನುಭವೋಽಪಿ ಪ್ರಪಂಚಸ್ಯ ಬಾಧಕಃ | ತೇಷಾಂ ನಿಷ್ಪ್ರಪಂಚಾತ್ಮದರ್ಶನಸ್ಯ ವಿದ್ಯಮಾನತ್ವಾತ್ |**

**-ಶ್ವೇತಾಶ್ವತರ (ಸಂಬಂಧ ಭಾಷ್ಯ)**

ಬ್ರಹ್ಮಜ್ಞರಾದ ಜ್ಞಾನಿಗಳ ಅನುಭವವೂ ಸಹ ಪ್ರಪಂಚದ ಸತ್ಯತ್ವಕ್ಕೆ ಬಾಧಕ. ಏಕೆಂದರೆ, ಅವರಿಗೆ ಪ್ರಪಂಚರಹಿತವಾದ ಕೇವಲಾತ್ಮದರ್ಶನವಿರುತ್ತದೆ.

ಇದು ಆಚಾರ್ಯರ ಸ್ವಾನುಭವದ ನುಡಿಯಾಗಿರಬೇಕು. ತಾವು ಆತ್ಮವಿದರುಜ್ಞಾನಿಗಳು ಎಂದು ಹೇಳಿಕೊಳ್ಳಲು ಇಷ್ಟಪಡದೆ, ಅತ್ಯಂತಘನವಾದ ಸ್ವಾನುಭವವನ್ನು ಇಲ್ಲಿ ತಿಳಿಸಿದ್ದಾರೆಂದು ನಮ್ಮ ನಂಬಿಕೆ. ಅದ್ವೈತದರ್ಶನಕ್ಕೆ ಇದಕ್ಕಿಂತ ಪ್ರಬಲವಾದ ಪ್ರಮಾಣವಿರಲಾರದು.

**290**

**ಅದ್ವೈತಜ್ಞಾನಪಸಾನತ್ವಾತ್ ಶಾಸ್ತ್ರಶಿಷ್ಯ ಶಾಸನಾದಿ ದ್ವೈತಭೇದಸ್ಯ |**
**-ಬೃಹ. 5-1-1**

ಶಾಸ್ತ್ರ, ಶಿಷ್ಯ, ಶಾಸನ ಮುಂತಾದ ದ್ವೈತಭೇದವು ಅದ್ವೈತಜ್ಞಾನದಲ್ಲಿ ಕೊನೆಗಾಣುತ್ತದೆ.

ಜ್ಞಾನಿಗೆ ಶಾಸ್ತ್ರವಿಧಿ ತಟ್ಟುವುದಿಲ್ಲ. ಏಕೆಂದರೆ ಅವನಿಗೆ ಶಾಸ್ತ್ರವೆಂಬ ಭೇದವೇ ಕಾಣಿಸುವುದಿಲ್ಲ. ಶ್ರವಣಮಾಡುವುದು, ಉಪದೇಶಮಾಡುವುದು, ಆಚರಿಸುವುದು ಇವೆಲ್ಲ ಭೇದಜ್ಞಾನ ಇರುವಾಗ ಮಾತ್ರ.

**291**

**ನ ಹಿ ಪ್ರತಿಬಂಧಕ್ಷಯಾದೇವ ವಿದ್ಯೋತ್ಪದ್ಯತೇ, ನ ತ್ವೀಶ್ವರ ಪ್ರಸಾದ ತಪೋಧ್ಯಾನಾದ್ಯನುಷ್ಠಾನಾತ್-ಇತಿ ನಿಯಮೋऽಸ್ತಿ । ಅಹಿಂಸಾ ಬ್ರಹ್ಮಚರ್ಯಾದೀನಾಂ ಚ ವಿದ್ಯಾಂ ಪ್ರತ್ಯುಪಕಾರಕತ್ವಾತ್, ಸಾಕ್ಷಾದೇವ ಕಾರಣತ್ವಾತ್ ಶ್ರವಣಮನನ ನಿದಿಧ್ಯಾಸನಾನಾಮ್ ।**

**-ಶೀಕ್ಷಾ 11**

'ಪ್ರತಿಬಂಧಕ್ಷಯದಿಂದಲೇ ವಿದ್ಯೆ ಹುಟ್ಟುತ್ತದೆ. ಈಶ್ವರನ ಅನುಗ್ರಹ, ತಪಸ್ಸು ಧ್ಯಾನಾದಿಗಳಿಂದ ವಿದ್ಯೆ ಹುಟ್ಟುವುದಿಲ್ಲ' ಎಂಬ ನಿಯಮವೇನೂ ಇಲ್ಲ. ಏಕೆಂದರೆ ಅಹಿಂಸೆ ಬ್ರಹ್ಮಚರ್ಯಾದಿಗಳೂ ವಿದ್ಯೆಗೆ ಉಪಕಾರಕಗಳಾಗಿವೆ. ಶ್ರವಣ, ಮನನ, ನಿದಿಧ್ಯಾಸನಗಳು ವಿದ್ಯೆಗೆ ಸಾಕ್ಷಾತ್ ಕಾರಣಗಳು.

**292**

**ನ ಹಿ ಸರ್ವಕ್ರಿಯಾಕಾರಕ ಫಲಭೇದ ಬುದ್ಧಿತಿರಸ್ಕಾರಿಣ್ಯಾ ಬ್ರಹ್ಮ ವಿದ್ಯಾಯಾಃ ಶೇಷಾಪೇಕ್ಷಾ ಸಹಕಾರಿ ಸಾಧನ ಸಂಬಂಧೋ ವಾ ಯುಜ್ಯತೇ ।**

**-ಕೇನ ಪದಭಾಷ್ಯ 4-7**

ಸಮಸ್ತ ಕ್ರಿಯಾಕಾರಕಫಲ ಭೇದ ಬುದ್ಧಿಯನ್ನು ಹೋಗಲಾಡಿಸತಕ್ಕದ್ದು ಬ್ರಹ್ಮ ವಿದ್ಯೆ. ಅದಕ್ಕೆ ಶೇಷವಾದ ಇನ್ನೊಂದರ ಅಪೇಕ್ಷೆಯಾಗಲಿ ಸಹಕಾರಿ ಸಾಧನದ ಸಂಬಂಧವಾಗಲಿ ಕೂಡುವುದಿಲ್ಲ.

ಬ್ರಹ್ಮಜ್ಞಾನವೆಂಬ ಫಲವು ದೊರಕಿದ ಮೇಲೆ ಅದಕ್ಕೆ ಉಪಕಾರಿಗಳಾದ ಶಮದಮಾದಿಗಳೂ ವೇದಗಳೂ ವೇದಾಂಗಗಳೂ ಅನಾವಶ್ಯಕಗಳು. ಶಮದಮಾದಿಗಳು ಬ್ರಹ್ಮಜ್ಞಾನಿಗೆ ಸ್ವತಃ ಇದ್ದು ಕೊಂಡಿರುತ್ತವೆ. ಅವುಗಳಿಂದ ಸಾಧಿಸಬೇಕಾದ್ದು ಏನೂ ಇಲ್ಲ.

**293**

**ಆತ್ಮಾನಂ ಸ್ವ ಶಬ್ದಾದಿವಿಷಯ ಬುದ್ಧಿಪ್ರತ್ಯಯ ಸಾಕ್ಷಿಣಂ ಯೇ ವಿವೇಕಿನೋ ವಿದುಃ ವಿಜಾನಂತಿ,ತೇ ಆತ್ಮವಿದಃ | -ಮುಂ. 2-2-10**

ಯಾವ ವಿವೇಕಿಗಳು ಶಬ್ದಾದಿ ವಿಷಯಗಳನ್ನರಿಯುವ ಬುದ್ಧಿವೃತ್ತಿಗಳಿಗೆ ಸಾಕ್ಷಿಯಾದ ಆತ್ಮನೇ ತಾನೆಂದು ತಿಳಿದುಕೊಂಡಿದ್ದಾರೋ ಅವರು ಆತ್ಮಜ್ಞಾನಿಗಳು

**294**

**ಬೌದ್ಧಾ ಹಿ ಸರ್ವೇ ಪ್ರತ್ಯಯಾಃ ತಪ್ತಲೋಹವನ್ನಿತ್ಯವಿಜ್ಞಾನಸ್ವರೂಪಾತ್ಮ ವ್ಯಾಪ್ತತ್ವಾದ್ವಿಜ್ಞಾನಸ್ವರೂಪಾವಭಾಸಾಃ | -ಕೇನ ವಾಕ್ಯಭಾಷ್ಯ 2-3**

ಅಂತಃಕರಣದ ಬುದ್ಧಿವೃತ್ತಿಗಳೆಲ್ಲವೂ ನಿತ್ಯವಿಜ್ಞಾನ ಸ್ವರೂಪನಾದ ಆತ್ಮನಿಂದ ವ್ಯಾಪ್ತವಾಗಿರುವ ಪ್ರಯುಕ್ತ ಕಾದ ಕಬ್ಬಿಣದ ಹಾಗೆ ವಿಜ್ಞಾನ ಸ್ವರೂಪದಂತೆ ತೋರತಕ್ಕವುಗಳಾಗಿವೆ.

**ನಾನಾಚ್ಛಿದ್ರ-ಘಟೋದರ-ಸ್ಥಿತಮಹಾದೀಪ-ಪ್ರಭಾಭಾಸ್ವರಂ**
**ಜ್ಞಾನಂ ಯಸ್ಯ ತು ಚಕ್ಷುರಾದಿಕರಣದ್ವಾರಾ ಬಹಿಃ ಸ್ಪಂದತೇ ||**
**-ದಕ್ಷಿಣಾಮೂರ್ತಿ ಸ್ತೋತ್ರ**

ನಮಗೆ ಬರುವ ಘಟಪಟಾದಿಜ್ಞಾನಗಳೆಲ್ಲವೂ ಆತ್ಮಪ್ರಕಾಶದಿಂದಲೇ ಇಂದ್ರಿಯಗಳ ಮೂಲಕ ಚಿಮ್ಮುವ ವೃತ್ತಿಜ್ಞಾನಗಳು.

**295**

**ನ ಹಿ ಇಚ್ಛಾದ್ವೇಷವಶೀಕೃತಚಿತ್ತಸ್ಯ ಯಥಾಭೂತಾರ್ಥ ವಿಷಯಜ್ಞಾನಮುತ್ಪದ್ಯತೇ ಬಹಿರಪಿ| ಕಿಮು ವಕ್ತವ್ಯಂ ತಾಭ್ಯಾಮಾವಿಷ್ಟಬುದ್ಧೇಃ ಸಂಮೂಢಸ್ಯ ಪ್ರತ್ಯಗಾತ್ಮನಿ ಬಹುಪ್ರತಿಬಂಧೇ ಜ್ಞಾನಂ ನೋತ್ಪದ್ಯತೇ ಇತಿ || -ಗೀತಾ 7-27**

ಇಚ್ಛಾದ್ವೇಷಗಳಿಗೆ ವಶವಾದ ಚಿತ್ತವುಳ್ಳವನಿಗೆ ಹೊರಗಿನ ವಸ್ತುಗಳಲ್ಲಿ ಕೂಡ, ವಸ್ತು ಇದ್ದಂತೆ ಅದರ ಜ್ಞಾನ ಹುಟ್ಟುವುದಿಲ್ಲ. ಹೀಗಿರುವಾಗ ಅವೆರಡರಿಂದಲೂ

ಆವಿಷ್ಟವಾದ ಬುದ್ಧಿಯುಳ್ಳವನಾಗಿ ಸಂಪೂರ್ಣ ಮೂಢನಾದವನಿಗೆ ಬಹುಪ್ರತಿಬಂಧಕಗಳುಳ್ಳ ಪ್ರತ್ಯಗಾತ್ಮನ ವಿಷಯದಲ್ಲಿ ಜ್ಞಾನವು ಹುಟ್ಟುವುದಿಲ್ಲವೆಂದು ಹೇಳಬೇಕಾದ್ದೇನಿದೆ?

**296**

**ಏವಂ ರಾಗದ್ವೇಷಾದಿದೋಷಾನಾಸ್ಪದತ್ವಾತ್ ಆತ್ಮೈಕತ್ವಬುದ್ಧಿರೇವ ಸಮ್ಯಗ್‌ದರ್ಶನಮ್ ಇತ್ಯಭಿಪ್ರಾಯಃ |** **-ಮಾಂಡೂಕ್ಯ 3-7**

ಹೀಗೆ ರಾಗ, ದ್ವೇಷ-ಮುಂತಾದ ದೋಷಗಳಿಗೆ ಎಡೆಯಿಲ್ಲದಿರುವುದರಿಂದ ಆತ್ಮೈಕತ್ವಬುದ್ಧಿಯೇ ಸರಿಯಾದ ತಿಳಿವಳಿಕೆ-ಎಂದು ಅಭಿಪ್ರಾಯ.

**297**

**ಸಂಸ್ಕೃತಸ್ಯ ಹಿ ವಿಶುದ್ಧಸತ್ತ್ವಸ್ಯ ಆತ್ಮಜ್ಞಾನಮಂಜಸೈವ ಉತ್ಪದ್ಯತೇ |**
**-ತೈತ್ತಿ. -ಶೀಕ್ಷಾ-10**

(ಶ್ರೌತ ಸ್ಮಾರ್ತ ಕರ್ಮಗಳಿಂದ) ಸಂಸ್ಕಾರ ಹೊಂದಿ ವಿಶುದ್ಧಚಿತ್ತನಾದವನಿಗೆ ಆತ್ಮಜ್ಞಾನವು ಪ್ರತಿಬಂಧವಿಲ್ಲದೆಯೇ ಹುಟ್ಟಿಬಿಡುತ್ತದೆ.

**298**

**ಯೋಽಯುಂ ಲೌಕಿಕೋ ವೈದಿಕಶ್ಚ ವ್ಯವಹಾರಃ ಸ ಉತ್ಪನ್ನವಿವೇಕ ಜ್ಞಾನಸ್ಯ ಸ್ಥಿತಪ್ರಜ್ಞಸ್ಯ ಅವಿದ್ಯಾಕಾರ್ಯತ್ವಾತ್ ಅವಿದ್ಯಾನಿವೃತ್ತೌ ನಿವರ್ತತೇ| ಅವಿದ್ಯಾಯಾಶ್ಚ ವಿದ್ಯಾವಿರೋಧಾತ್ ನಿವೃತ್ತಿಃ |** **-ಗೀತಾ 2-69**

ಲೌಕಿಕ ಮತ್ತು ವೈದಿಕ-ಎಂಬ ವ್ಯವಹಾರವು ಅವಿದ್ಯಾಕಾರ್ಯವಾಗಿರುವುದರಿಂದ ವಿವೇಕಜ್ಞಾನವುಂಟಾಗಿರುವ ಸ್ಥಿತಪ್ರಜ್ಞನಿಗೆ ಅವಿದ್ಯೆ ತೊಲಗಿರುವುದರಿಂದ ಅದೂ ತೊಲಗಿಹೋಗಿಬಿಡುತ್ತದೆ. ಅವಿದ್ಯೆಯು ವಿದ್ಯೆಗೆ ವಿರೋಧವಾಗಿರುವುದರಿಂದ ವಿದ್ಯೆ ಹುಟ್ಟಿದೊಡನೆ ಅದು ತೊಲಗುತ್ತದೆ.

**299**

**ನ ಚ ತಜ್ಞಾನಂ ಕರ್ಮಣಾಂ ಪ್ರವರ್ತಕಂ ಭವತಿ, ಪ್ರತ್ಯುತ ಕರ್ಮಾಣ್ಯುಚ್ಛಿನತ್ತಿ|**
**-ಛಾ.ಸೂ. 1-3-1**

ಆ ಬ್ರಹ್ಮಜ್ಞಾನವು ಕರ್ಮಗಳಿಗೆ ಪ್ರವರ್ತಕವಲ್ಲ. ಅದಕ್ಕೆ ಬದಲಾಗಿ ಕರ್ಮಗಳನ್ನು ನಾಶಮಾಡಿಬಿಡುತ್ತದೆ.

**300**

**ಯಾವಜ್ಜೀವಂ ಕರ್ಮ ಕುರ್ವತ್ಯಪಿ ವಿದುಷಿ ಪುರುಷೇ ನ ಕರ್ಮ ಲೇಪಾಯ ಭವತಿ ವಿದ್ಯಾಸಾಮರ್ಥ್ಯಾತ್ ಇತಿ | ತದೇವಂ ವಿದ್ಯಾ ಸ್ತೂಯತೇ**
**-ಬ್ರ.ಸೂ. 3-4-41**

ಬದುಕಿರುವವರೆಗೆ ಜ್ಞಾನಿಯಾದ ಪುರುಷನು ಕರ್ಮವನ್ನು ಮಾಡುತ್ತಿದ್ದರೂ ಕರ್ಮದ ಲೇಪವಾಗುವುದಿಲ್ಲವೆಂದು ಜ್ಞಾನವನ್ನು ಸ್ತುತಿಸಲಾಗಿದೆ.

'ಕುರ್ವನ್ನೇವಹಕರ್ಮಾಣಿ.... ನ ಕರ್ಮ ಲಿಪ್ಯತೇ ನರೇ' (ಈಶ) ಇದರ ತಾತ್ಪರ್ಯ.

**301**

**ವಚನಂ ನಾಮ ಯಥಾಭೂತಸ್ಯ ಅರ್ಥಸ್ಯ ಜ್ಞಾಪಕಂ, ನಾವಿದ್ಯಮಾನಸ್ಯ ಕರ್ತೃ-ನ ಹಿ ವಚನಶತೇನಾಪಿ ನಿತ್ಯಮಾರಭ್ಯತೇ, ಆರಬ್ಧಂ ವಾ ಅವಿನಾಶಿ ಭವೇತ್ |**
**-ಶೀಕ್ಷಾ 11**

ವಚನವು ವಸ್ತು ಹೇಗಿದೆಯೋ ಅದನ್ನು ಜ್ಞಾಪಿಸುತ್ತದೆಯೇ ಹೊರತು ಇಲ್ಲದ್ದನ್ನು ಮಾಡತಕ್ಕದ್ದಲ್ಲ. ನೂರು ವಚನಗಳನ್ನು ಹೇಳಿದರೂ ನಿತ್ಯವು ಹುಟ್ಟಲಾರದು. ಅಥವಾ ಜನ್ಯವಾದದ್ದು ನಾಶವಾಗದೇ ಉಳಿಯಲಾರದು.

ಮೋಕ್ಷವು ನಿತ್ಯವಾದದ್ದು. ಆದ್ದರಿಂದಲೇ ಅದು ಜನ್ಯವಲ್ಲ. 'ನ ಸ ಪುನರಾರ್ತತೇ' ಎಂದು ಹೇಳಿದ್ದರಿಂದ ಜನ್ಯವಾದರೂ ನಿತ್ಯವಾಗಲಿ ಎನ್ನುವುದು ಸರಿಯಲ್ಲ. ವಚನಬಲದಿಂದ ಜನ್ಮವು ನಿತ್ಯವಾಗಿಬಿಡಲಾರದು ಎಂದು ಅಭಿಪ್ರಾಯ.

**302**

**ನ ಹ್ಯನ್ಯಸ್ಯ ಅನ್ಯಭಾವಾಪತ್ತಿರುಪಪದ್ಯತೇ |** **-ತೈತ್ತಿ. ಆನಂದವಲ್ಲೀ-8**

ಇನ್ನೊಂದು ವಸ್ತುವಿಗೆ ಭಿನ್ನವಾದ ಮತ್ತೊಂದು ಸ್ವರೂಪ ಬರುತ್ತದೆಯೆನ್ನುವುದು ಕೂಡುವುದಿಲ್ಲ.

ಜ್ಞಾನ ಹುಟ್ಟಿದ ಮೇಲೆ ಜೀವವು ಬ್ರಹ್ಮವಾಗುತ್ತದೆಯೆನ್ನುವುದು ತಪ್ಪು. ಜೀವಾತ್ಮನು ಸದಾ ಬ್ರಹ್ಮವಾಗಿಯೇ ಇದ್ದಾನೆ.

**303**

**ನ ಹ್ಯಾತ್ಮೈಕತ್ವದರ್ಶಿನಾಮಾಪ್ತಕಾಮಾನಾಮಿಹೈವ ದಗ್ಧಾಶೇಷಕ್ಲೇಶ ಬೀಜಾನಾಮಾರಬ್ಧ ಭೋಗಕರ್ಮಾಶಯ ಕ್ಷಪಣ ವ್ಯತಿರೇಕೇಣಾಪೇಕ್ಷಿತವ್ಯಂ ಕಿಂಚಿದಸ್ತಿ |ತತ್ರಾನರ್ಥಿಕಾ ಗತಿಃ |** **-ಸೂ.ಭಾ. 3-3-30**

ಆತ್ಮೈಕತ್ವದರ್ಶಿಗಳೂ ಆಪ್ತಕಾಮರೂ ಆದ ಜ್ಞಾನಿಗಳಿಗೆ ಎಲ್ಲ ಕ್ಲೇಶಬೀಜಗಳೂ ಸುಟ್ಟುಹೋಗಿರುತ್ತವೆ. ಫಲವನ್ನು ಕೊಡಲು ಆರಂಭಿಸಿರುವ ಕರ್ಮಗಳ ಭೋಗಾಯತನವಾದ ಶರೀರವನ್ನು ಕಳಚಿಕೊಳ್ಳುವುದರ ಹೊರತಾಗಿ ಅವರಿಗೆ ಬೇಕಾದದ್ದು ಇನ್ನು ಯಾವುದೂ ಇರುವುದಿಲ್ಲ. ಹೀಗಿರುವಾಗ ಅವರಿಗೆ ಲೋಕಾಂತರಗಮನವು ವ್ಯರ್ಥವೇ ಸರಿ.

ಶರೀರವನ್ನು ಕಳಚಿಕೊಳ್ಳುವುದೆಂಬುದೂ ವ್ಯವಹಾರ ದೃಷ್ಟಿಯಿಂದ. ಪ್ರಾರಬ್ಧ ಕರ್ಮಭೋಗವು ಜ್ಞಾನಿಗೆ ಅವಿದ್ಯಾಕಲ್ಪಿತವೇ.

**304**

**ನ ತಾವದನಾಶ್ರಿತ್ಯಾರಬ್ಧ ಕಾರ್ಯಂ ಜ್ಞಾನೋತ್ಪತ್ತಿರುಪಪದ್ಯತೇ | ಆಶ್ರಿತೇ ಚ ತಸ್ಮಿನ್ಕುಲಾಲಚಕ್ರವತ್ಪ್ರವೃತ್ತಿವೇಗಸ್ಯಾಂತರಾಲೇ ಪ್ರತಿಬಂಧಾಸಂಭವಾದ್ಭವತಿ ವೇಗಕ್ಷಯ ಪ್ರತಿಪಾಲನಮ್ |** **-ಸೂ.ಭಾ. 3-1-15**

ಆರಬ್ಧಕಾರ್ಯವಾದ ಕರ್ಮಾಶಯವನ್ನು (ದೇಹವನ್ನು) ಆಶ್ರಯಿಸದೆ ಜ್ಞಾನ

ಹುಟ್ಟುವುದೆಂಬುದು ಯುಕ್ತವಾಗುವುದಿಲ್ಲ. ಅದನ್ನು ಆಶ್ರಯಿಸಿದ ಬಳಿಕ ಕುಂಬಾರನ ತಿಗುರಿಯಂತೆ ಅದಕ್ಕೆ ವೇಗವು ಪ್ರವೃತ್ತವಾಗಿರುವಾಗ ಅದಕ್ಕೆ ಅಡ್ಡಿ ಯಾವುದೂ ಇಲ್ಲವಾದ್ದರಿಂದ ತಾನಾಗಿ ವೇಗಕ್ಷಯವಾಗುವುದನ್ನು ಕಾಯಬೇಕಾಗುತ್ತದೆ.

ಜ್ಞಾನವು ಪ್ರಾರಬ್ಧಕರ್ಮವನ್ನು ಮಾತ್ರ ನಾಶಮಾಡುವುದಿಲ್ಲ. ಅದು ಅನುಭವದಿಂದಲೇ ಕ್ಷಯಿಸಬೇಕು-ಎಂದು ಅಭಿಪ್ರಾಯ.

**305**

**ತಸ್ಮಾದಿಹ ವಾಽತೀತೇಷು ವಾ ಬಹುಷು ಜನ್ಮಾಂತರೇಷು ತಪ ಆದಿಭಿಃಕೃತ ಸತ್ತ್ವಶುದ್ಧೇರ್ಜ್ಞಾನಂ ಸಮುತ್ಪದ್ಯತೇ ಯಥಾಶ್ರುತಮ್ |**

**-ಕೇನ 4-8**

ಆದ್ದರಿಂದ (ಗುರೂಪದೇಶವಾದರೂ ವಿರೋಚನನಿಗೆ ಸರಿಯಾದ ಜ್ಞಾನ ಹುಟ್ಟಲಿಲ್ಲವಾದ್ದರಿಂದ) ಈ ಜನ್ಮದಲ್ಲಿ ಅಥವಾ ಹಲವಾರು ಜನ್ಮಾಂತರಗಳಲ್ಲಿ ತಪಸ್ಸೇ ಮೊದಲಾದವುಗಳಿಂದ ಯಾರ ಚಿತ್ತವು ಶುದ್ಧವಾಗುವುದೋ ಅವರಿಗೆ ಮಾತ್ರ ಯಥಾರ್ಥವಾದ ಜ್ಞಾನ ಹುಟ್ಟುತ್ತದೆ.

**306**

**ಇತರೇ ತ್ವಾರಬ್ಧಕಾರ್ಯೇ ಪುಣ್ಯಪಾಪೇ ಉಪಭೋಗೇನ ಕ್ಷಪಯಿತ್ವಾ ಬ್ರಹ್ಮ ಸಂಪದ್ಯತೇ | "ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ" - ಇತಿ "ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" ಇತಿ ಚೈವಮಾದಿಶ್ರುತಿಭ್ಯಃ |**

**-ಸೂ.ಭಾ. 4-1-19**

ಕಾರ್ಯವನ್ನಾರಂಭಿಸಿಬಿಟ್ಟಿರುವ ಪುಣ್ಯ ಪಾಪಗಳನ್ನು ಉಪಭೋಗದಿಂದ ಕ್ಷೀಣಗೊಳಿಸಿ. ಬ್ರಹ್ಮದಲ್ಲಿ ಒಂದಾಗುತ್ತಾನೆ. "ಅವನಿಗೆ ಶರೀರದಿಂದ ಬಿಡುಗಡೆಯಾಗುವುದೇ ತಡ, ಒಡನೆಯೇ ಬ್ರಹ್ಮದಲ್ಲಿ ಒಂದಾಗುತ್ತಾನೆ." (ಛಾಂ. 6-14-2) "ಬ್ರಹ್ಮವೇ ಆಗಿದ್ದು ಬ್ರಹ್ಮ ದಲ್ಲಿ ಸೇರಿಹೋಗುತ್ತಾನೆ" (ಛಾಂ. 4-4-6) ಮುಂತಾದ ಶ್ರುತಿಗಳಿಂದ ಇದು ಸಿದ್ಧವಾಗುತ್ತದೆ.

ಪ್ರಾರಬ್ಧಕರ್ಮವು ಸವೆದ ಮೇಲೆ ಜ್ಞಾನಿಗೆ ದೇಹಪಾತವಾಗುತ್ತದೆ.

**307**

**ಯದಾ ಪ್ರಕ್ರಾಂತಸ್ಯ ವಿದ್ಯಾಸಾಧನಸ್ಯ ಕಶ್ಚಿತ್ಪ್ರತಿಬಂಧೋ ನ ಕ್ರಿಯತೇ ಉಪಸ್ಥಿತವಿಪಾಕೇನ ಕರ್ಮಾಂತರೇಣ, ತದೇಹೈವ ವಿದ್ಯೋತ್ಪದ್ಯತೇ, ಯದಾ ತು ಖಲು ತತ್ಪ್ರಬಂಧಃ ಕ್ರಿಯತೇ ತದಾಮುತ್ರೇತಿ| -ಸೂ.ಭಾ. 3-4-51**

ಪ್ರಾರಂಭಿಸಿದ ವಿದ್ಯಾಸಾಧನಕ್ಕೆ, ಫಲವನ್ನು ಕೊಡಲು ಆರಂಭಿಸಿದ ಕರ್ಮಾಂತರದಿಂದ ಪ್ರತಿಬಂಧಕವಾಗದಿದ್ದರೆ, ಈ ಜನ್ಮದಲ್ಲಿಯೇ ವಿದ್ಯೆ ಹುಟ್ಟುತ್ತದೆ. ಪ್ರತಿಬಂಧ ಉಂಟಾದರೆ ಮುಂದಿನ ಜನ್ಮಾಂತರದಲ್ಲಿ ಹುಟ್ಟುತ್ತದೆ.

**308**

**ಗರ್ಭಸ್ಥ ಏವ ಚ ವಾಮದೇವಃ ಪ್ರತಿಪೇದೇ ಬ್ರಹ್ಮಭಾವಮಿತಿವದಂತೀ ಜನ್ಮಾಂತರಸಂಚಿತಾತ್ ಸಾಧನಾತ್ ಜನ್ಮಾಂತರೇ ವಿದ್ಯೋತ್ಪತ್ತಿಂ ದರ್ಶಯತಿ | -ಸೂ.ಭಾ. 3-4-51**

ವಾಮದೇವನು ಗರ್ಭದಲ್ಲಿದ್ದಾಗಲೇ ಬ್ರಹ್ಮಭಾವವನ್ನು ಪಡೆದನೆಂದು ಹೇಳುವ ಶ್ರುತಿಯು "ಜನ್ಮಾಂತರದಲ್ಲಿ ಗಳಿಸಿದ ಸಾಧನ ಸಂಪತ್ತಿನಿಂದ ಇನ್ನೊಂದು ಜನ್ಮದಲ್ಲಿ ವಿದ್ಯೋತ್ಪತ್ತಿ ಆಗುತ್ತದೆ" ಎಂಬ ಅಂಶವನ್ನು ತೋರಿಸುತ್ತದೆ.

ಸಾಧನಗಳ ಬಲದಿಂದ ಆತ್ಮಜ್ಞಾನವು ಈ ಜನ್ಮದಲ್ಲಿಯೇ ಹುಟ್ಟಬಹುದು. ಅದಕ್ಕೆ ಪ್ರತಿಬಂಧಕವಿದ್ದರೆ ಮುಂದಿನ ಜನ್ಮದಲ್ಲಿಯಾದರೂ ಜ್ಞಾನೋತ್ಪತ್ತಿಯಾಗಬಹುದು. ಅಂತೂ ಅದಕ್ಕಾಗಿ ಮಾಡಿದ ಪ್ರಯತ್ನವು ವ್ಯರ್ಥವಾಗುವುದಿಲ್ಲ.

**309**

**ಯೇ ಸಮ್ಯಗ್ದರ್ಶಿನಃ ತೈರುಪದಿಷ್ಟಂ ಜ್ಞಾನಂ ಕಾರ್ಯಕ್ಷಮಂ ಭವತಿ, ನೇತರತ್, ಇತಿ ಭಗವತೋ ಮತಮ್ | -ಗೀತಾ. 4-33**

ಯಾರು ಸಮ್ಯಗ್ದರ್ಶಿಗಳೋ-ತತ್ತ್ವವನ್ನು ಚೆನ್ನಾಗಿ ಅರಿತ ಜ್ಞಾನಿಗಳೋ-ಅವರು ಉಪದೇಶಮಾಡಿದ ಜ್ಞಾನವೇ ಫಲಕಾರಿಯಾಗುವುದು, ಬೇರೆಯದಲ್ಲ ಎಂದು ಭಗವಂತನ ಅಭಿಪ್ರಾಯ.

'ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ' ಎಂದು ಹೇಳಿದ ಶ್ರೀಕೃಷ್ಣನ ಅಭಿಪ್ರಾಯವಿದು.

**310**

**ಪ್ರತ್ಯಕ್ಷಫಲತ್ವಾಚ್ಚ ಜ್ಞಾನಸ್ಯ ಫಲವಿರಹಾಶಂಕಾನುಪಪತ್ತಿಃ | ಕರ್ಮಫಲೇ ಹಿ ಸ್ವರ್ಗಾದಾವನುಭವಾನಾರೂಢೇ ಸ್ಯಾದಾಶಂಕಾ ಭವೇದ್ವಾ ನ ವೇತಿ | ಅನುಭವಾರೂಢಂ ತು ಜ್ಞಾನಫಲಂ "ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ" ಇತಿ ಶ್ರುತೇಃ |**

**-ಸೂ.ಭಾ. 3-3-32**

ಜ್ಞಾನದ ಫಲವು ಪ್ರತ್ಯಕ್ಷವಾದದ್ದು. ಆದ್ದರಿಂದ ಅಂತಹ ಫಲ ಇದೆಯೋ ಇಲ್ಲವೋ ಎಂಬ ಶಂಕೆಗೆ ಅವಕಾಶವಿಲ್ಲ. ಕರ್ಮದ ಫಲವಾದ ಸ್ವರ್ಗಾದಿಯು ಮಾತ್ರ ಅನುಭವಕ್ಕೆ ಇಲ್ಲಿಯೇ ಬರುವುದಿಲ್ಲವಾದ್ದರಿಂದ ಕರ್ಮಫಲ ಇದೆಯೋ ಇಲ್ಲವೋ ಎಂಬ ಶಂಕೆ ಹುಟ್ಟೀತು. ಜ್ಞಾನಫಲವಾದರೋ ಅನುಭವಾರೂಢವಾದದ್ದು. 'ನೇರವೂ ಅಪರೋಕ್ಷವೂ ಆದದ್ದು ಬ್ರಹ್ಮ' (ಬೃಹ. 3-4-1) ಎಂಬ ಶ್ರುತಿಯು ಇದಕ್ಕೆ ಪ್ರಮಾಣ. ಹಾಗೆಯೇ 'ತತ್ತ್ವಮಸಿ' (ಛಾಂ. 6-17) ಎಂಬುದು.

**311**

**ಅನುಭವಾರೂಢಮೇವ ಚ ವಿದ್ಯಾಫಲಂ ನ ಕ್ರಿಯಾಫಲವತ್ ಕಾಲಾಂತರ ಭಾವೀತ್ಯಸಕೃದವೋಚಾಮ | -ಸೂ.ಭಾ. 3-4-15**

ವಿದ್ಯಾಫಲವು (ಕೂಡಲೇ) ಅನುಭವಕ್ಕೆ ಬರುತ್ತದೆ. ಕ್ರಿಯಾಫಲದಂತೆ ಕಾಲಾಂತರ ದಲ್ಲಿ ಬರತಕ್ಕದ್ದಲ್ಲವೆಂದು ಅನೇಕ ಸಲ ಹೇಳಿದ್ದೇವೆ.

**312**

**ಪ್ರತ್ಯಕ್ಷಾವಗಮಂ ಚೇದಂ ಫಲಮ್, "ತತ್ತ್ವಮಸಿ" ಸಂಸಾರ್ಯಾತ್ಮತ್ವ ಪ್ರತಿಪತ್ತೌ ಸತ್ಯಾಂ ಸಂಸಾರ್ಯಾತ್ಮತ್ವವ್ಯಾವೃತ್ತೇಃ |**

**-ಸೂ,ಭಾ. 1-4-15**

ಈ ಫಲವು ('ತರತಿ ಶೋಕಮಾತ್ಮವಿತ್' ಇತ್ಯಾದಿ ವಾಕ್ಯಗಳಿಂದ ಹೇಳಿದ ಫಲವು ) ಪ್ರತ್ಯಕ್ಷವಾಗಿ ತಿಳಿಯತಕ್ಕದ್ದಾಗಿದೆ. ಏಕೆಂದರೆ 'ತತ್ತ್ವಮಸಿ'ಎಂಬುದಾಗಿ ಆತ್ಮನು ಸಂಸಾರಿಯಲ್ಲವೆಂದು ಜ್ಞಾನವುಂಟಾದಾಗ ಆತ್ಮನಲ್ಲಿ ಕಲ್ಪಿತವಾದ ಸಂಸಾರಿತ್ವವು ಹೊರಟು ಹೋಗಿಬಿಡುತ್ತದೆ.

**313**

**ನ ಚ ಬ್ರಹ್ಮವಿದಃ ಸರ್ವಗತಬ್ರಹ್ಮಾತ್ಮ ಭೂತಸ್ಯ ಪ್ರಕ್ಷೀಣಕಾಮ ಕರ್ಮಣ ಉತ್ಕ್ರಾಂತಿರ್ಗತಿರ್ವೋಪಪದ್ಯತೇ ನಿಮಿತ್ತಾಭಾವಾತ್ ||**

**-ಸೂ.ಭಾ. 4-2-13**

ಸರ್ವಗತನೂ ಬ್ರಹ್ಮಾತ್ಮಭೂತನೂ ಆಗಿರುವ, ಕಾಮಕರ್ಮಗಳೆಲ್ಲವೂ ಕ್ಷಯಿಸಿರುವ ಬ್ರಹ್ಮಜ್ಞಾನಿಗೆ ಉತ್ಕ್ರಾಂತಿಯಾಗಲಿ ಸಂಸಾರ ಗತಿಯಾಗಲಿ ಹೊಂದುವುದಿಲ್ಲ. ಏಕೆಂದರೆ, ಅದಕ್ಕೆ ನಿಮಿತ್ತವೇ ಇಲ್ಲ.

'ಅತ್ರ ಬ್ರಹ್ಮ ಸಮಶ್ನುತೇ' (ಬೃಹ. 4-4-7) ಇಲ್ಲಿಯೇ ಈ ದೇಹದಲ್ಲಿಯೇ ಬ್ರಹ್ಮವನ್ನು ಹೊಂದುವನು ಇತ್ಯಾದಿ ಶ್ರುತಿಗಳೂ ಬ್ರಹ್ಮಜ್ಞಾನಿಗೆ ಗತ್ಯುತ್ಕ್ರಾಂತಿಗಳಿಲ್ಲವೆಂಬುದನ್ನು ತಿಳಿಸುತ್ತವೆ. ಗತಿ ಉತ್ಕ್ರಾಂತಿಗಳಿಗೆ ಕಾಮಕರ್ಮಗಳೇ ನಿಮಿತ್ತ.

**314**

**ಜ್ಞಾನಂ ತು ಪ್ರಮಾಣಜನ್ಯಂ ಯಥಾಭೂತವಿಷಯಂ ಚ | ನ ತನ್ನಿಯೋಗಶತೇನಾಪಿ ಕಾರಯಿತುಂ ಶಕ್ಯತೇ | ನ ಚ ಪ್ರತಿಷೇಧ ಶತೇನಾಪಿ ವಾರಯಿತುಂ ಶಕ್ಯತೇ | ನ ಹಿ ತತ್ಪುರುಷತಂತ್ರಂ ವಸ್ತುತಂತ್ರ ಮೇವ ಹಿ ತತ್ ||** **-ಸೂ. ಭಾ. 3-2-21**

ಜ್ಞಾನವಾದರೋ ಪ್ರಮಾಣದಿಂದ ಹುಟ್ಟತಕ್ಕದ್ದು. ಯಥಾಸ್ಥಿತವಾದ ವಸ್ತುವನ್ನು ವಿಷಯೀಕರಿಸತಕ್ಕದ್ದು ನೂರು ಆಜ್ಞೆಗಳಿಂದಲೂ ಜ್ಞಾನವನ್ನು ಹುಟ್ಟಿಸಲು ಶಕ್ಯವಲ್ಲ. ಬೇಡವೆಂದು ನೂರುಸಲ ನಿಷೇಧಿಸಿದರೂ ಹುಟ್ಟುವ ಜ್ಞಾನವನ್ನು ತಡೆಯಲು ಸಾಧ್ಯವಿಲ್ಲ. ಅದು ಪುರುಷತಂತ್ರವಲ್ಲ. ಅದು ವಸ್ತುತಂತ್ರವೇ ಸರಿ.

**315**

**ತತ್ರೈವಂ ಸತಿ ಬ್ರಹ್ಮಜ್ಞಾನಮಪಿ ವಸ್ತುತಂತ್ರಮೇವ ಭೂತವಸ್ತು ವಿಷಯತ್ವಾತ್ |**
**-ಸೂ.ಭಾ. 1-1-12**

ಭೂತವಸ್ತುವಿಷಯಗಳ ಪ್ರಾಮಾಣ್ಯವು ವಸ್ತುತಂತ್ರವಾದ್ದರಿಂದ ಬ್ರಹ್ಮಜ್ಞಾನವೂ ಸಹ ವಸ್ತುಜನ್ಯವೇ ಹೊರತು ಬೇರೆಯಲ್ಲ. (ಪುರುಷ ಕ್ರಿಯಾಜನ್ಯವಲ್ಲ) ಏಕೆಂದರೆ, ಅದು ಯಥಾಭೂತವಾದ ವಸ್ತುವಿಷಯಕವಾದದ್ದು.

ಭೂತವಸ್ತು = ಈಗ ಇರತಕ್ಕ ಪದಾರ್ಥ.

**316**

**ಏಕರೂಪೇಣ ವ್ಯವಸ್ಥಿತೋ ಯೋಽರ್ಥಃ ಸ ಪರಮಾರ್ಥಃ| ಲೋಕೇ ತದ್ವಿಷಯಂ ಜ್ಞಾನಂ ಸಮ್ಯಗ್ ಜ್ಞಾನಮಿತ್ಯುಚ್ಯತೇ |** **-ಸೂ.ಭಾ. 2-1-11**

ಯಾವ ಬದಲಾವಣೆಯೂ ಇಲ್ಲದೆ ಏಕರೂಪದಲ್ಲಿ ಯಾವುದಿರುತ್ತದೆಯೋ ಅದು ಪರಮಾರ್ಥ. ಅಂತಹ ಪರಮಾರ್ಥದ ಜ್ಞಾನಕ್ಕೆ ಲೋಕದಲ್ಲಿ ಸಮ್ಯಗ್‌ಜ್ಞಾನ ಎಂದು ಹೆಸರು.

**317**

**ಆತ್ಮಾವಗತೌ ಹಿ ಸತ್ಯಾಮನ್ಯದ್ವಸ್ತು ಅನರ್ಥತ್ವೇನ ಅವಗಮ್ಯತೇ | ಅನಿತ್ಯ ದುಃಖಾಶುದ್ಧಾದಿ ಬಹು ದೋಷವತ್ವಾತ್ | ಆತ್ಮವಸ್ತುನಶ್ಚ ತದ್ವಿಲಕ್ಷಣತ್ವಾತ್ |**
**-ಬೃಹ. 1-4-7**

ಆತ್ಮಜ್ಞಾನವಾದ ಮೇಲೆ ಉಳಿದ ವಸ್ತುವೆಲ್ಲವೂ ಅನರ್ಥಕರವೆಂದು ಗೊತ್ತಾಗುತ್ತದೆ. ಏಕೆಂದರೆ, ಅದೆಲ್ಲವೂ ಅನಿತ್ಯ, ದುಃಖಕಾರಿ, ಅಶುದ್ಧವಾಗಿದ್ದು ಅನೇಕ ದೋಷಗಳಿಂದ ಕೂಡಿರುತ್ತದೆ. ಆತ್ಮವಸ್ತುವಾದರೋ ಅಂತಹ ದೋಷಯುಕ್ತವಸ್ತುವಿಗಿಂತ ವಿಲಕ್ಷಣವಾದದ್ದು.

**318**

**ಜ್ಞಾನಂ ತು ಪ್ರಮಾಣಜನ್ಯಮ್ | ಪ್ರಮಾಣಂ ಚ ಯಥಾಭೂತವಸ್ತುವಿಷಯಮ್ | ಅತೋ ಜ್ಞಾನಂ ಕರ್ತುಮಕರ್ತುಮನ್ಯಥಾ ವಾ ಕರ್ತುಮಶಕ್ಯಮ್ | ಕೇವಲಂ ವಸ್ತುತನ್ತ್ರಮೇವ ತತ್ |** **-ಸೂ.ಭಾ. 1-1-4**

ಜ್ಞಾನವಾದರೋ ಪ್ರಮಾಣದಿಂದ ಹುಟ್ಟತಕ್ಕದ್ದು. ಪ್ರಮಾಣವಾದರೋ ಯಥಾಸ್ಥಿತವಾದ ವಸ್ತುವನ್ನು ವಿಷಯೀಕರಿಸಿ ಪ್ರವರ್ತಿಸುತ್ತದೆ. ಆದ್ದರಿಂದ ಜ್ಞಾನವನ್ನು ಕ್ರಿಯೆಯಿಂದ ಉತ್ಪಾದಿಸುವುದಕ್ಕಾಗಲಿ, ಉತ್ಪಾದಿಸದೆ ಇರುವುದಕ್ಕಾಗಲಿ, ಬೇರೆ ಸ್ವರೂಪವನ್ನು ತಳೆಯುವಂತೆ ಮಾಡುವುದಕ್ಕಾಗಲಿ ಸಾಧ್ಯವಾಗುವುದಿಲ್ಲ. ಅದು ವಸ್ತುತಂತ್ರ.

ವಸ್ತು ಯಾವ ರೀತಿ ಇದೆಯೋ ಹಾಗೆಯೇ ಜ್ಞಾನ ಹುಟ್ಟುತ್ತದೆ. ಪ್ರಮಾಣದಲ್ಲಿ ದೋಷವಿಲ್ಲದಿದ್ದರೆ ಜ್ಞಾನದಲ್ಲಿಯೂ ದೋಷವಿರುವುದಿಲ್ಲ. ಅದೂ ಪ್ರಮಾಣಾಧೀನವಾಗಿ ಬರುತ್ತದೆ. ಕ್ರಿಯೆಯಿಂದ ಅದನ್ನು ಹುಟ್ಟಿಸಲಾಗುವುದಿಲ್ಲ. ಘಟಜ್ಞಾನವನ್ನು ಪಟಜ್ಞಾನವಾಗಿ ಮಾಡಲು ಸಾಧ್ಯವಿಲ್ಲ.

**319**

**ನ ಹ್ಯೇಕತ್ವವಿಜ್ಞಾನೇನೋನ್ಮಥಿತಸ್ಯ ದ್ವೈತವಿಜ್ಞಾನಸ್ಯ ಪುನಃ ಸಂಭವೋಽಸ್ತಿ|**
**-ಸೂ.ಭಾ. 1-1-4**

ಏಕತ್ವಜ್ಞಾನದಿಂದ ದ್ವೈತಜ್ಞಾನವು ವಿಧ್ವಸ್ತವಾದ ಮೇಲೆ, ಪುನಃ ಅದರ ಉತ್ಪತ್ತಿಯಿಲ್ಲವಷ್ಟೆ.

**320**

**ನ ಚ ನಿಯೋಗಾಭಾವಾತ್ ಸಮ್ಯಗ್ದರ್ಶಿನೋ ಯಥೇಷ್ಟಚೇಷ್ಟಾ ಪ್ರಸಂಗಃ | ಸರ್ವತ್ರಾಭಿಮಾನಸ್ಯೈವ ಪ್ರವರ್ತಕತ್ವಾತ್ | ಪ್ರವರ್ತಕತ್ವಾಭಿಮಾನಾಭಾವಾಚ್ಚ ಸಮ್ಯಗ್ದರ್ಶಿನಃ |**

**-ಸೂ.ಭಾ. 2-3-48**

ಶಾಸ್ತ್ರದ ನಿಯಮಕ್ಕೆ ಒಳಪಡದೇ ಹೋದರೆ ಸಮ್ಯಗ್‌ದರ್ಶಿಯು ಯಥೇಷ್ಟವಾಗಿ ಪ್ರವರ್ತಿಸುವ ಸಂದರ್ಭ ಬರುವುದಿಲ್ಲ. ಏಕೆಂದರೆ, ಪ್ರವೃತ್ತಿಗೆ ಎಲ್ಲ ಸಂದರ್ಭದಲ್ಲಿಯೂ ಅಭಿಮಾನವೇ ಕಾರಣ. ಸಮ್ಯಗ್‌ದರ್ಶಿಗೆ ಪ್ರವರ್ತಕವಾದ ಅಭಿಮಾನವೇ ಇರುವುದಿಲ್ಲ.

ಆತ್ಮಜ್ಞಾನಿಗೆ ಶಾಸ್ತ್ರದ ವಿಧಿನಿಷೇಧಗಳಿಲ್ಲ. ನಿಷೇಧವಿಲ್ಲದ್ದರಿಂದ ಜ್ಞಾನಿಯು ಯಥೇಷ್ಟವಾಗಿ ಪಾಪಕಾರ್ಯವನ್ನು ಮಾಡಬಹುದಲ್ಲವೆ? ಎಂಬ ಶಂಕೆಗೆ ಇದು ಉತ್ತರ. ಜ್ಞಾನಿಗೆ ಕಾಮನೆಗಳೇ ಇಲ್ಲವಾದ್ದರಿಂದ ಯಾವ ಕಾರ್ಯದಲ್ಲಿಯೂ ಪ್ರವೃತ್ತಿಯೇ ಇರುವುದಿಲ್ಲ. ಕಾಮನೆಗಳಿದ್ದರೆ ಅವನು ಜ್ಞಾನಿಯೇ ಅಲ್ಲ.

**321**

**ಮಿಥ್ಯಾಜ್ಞಾನ ನಿಮಿತ್ತಶ್ಚ ಬಂಧೋ ನ ಸಮ್ಯಗ್ ಜ್ಞಾನಾದೃತೇ ವಿಸ್ರಂಸಿತುಮರ್ಹತಿ |**
**-ಸೂ.ಭಾ. 4-2-8**

ಮಿಥ್ಯಾಜ್ಞಾನದಿಂದ ಉಂಟಾದ ಸಂಸಾರ ಬಂಧನವು ಸಮ್ಯಗ್ ಜ್ಞಾನದಿಂದಲೇ ಹೊರತು ಬೇರೆ ಯಾವುದರಿಂದಲೂ ಸಡಿಲುವುದಿಲ್ಲ.

**322**

**ತಸ್ಮಾತ್ ಮಿಥ್ಯಾ ಪ್ರತ್ಯಯ ನಿಮಿತ್ತತ್ವಾತ್ ಸಶರೀರತ್ವಸ್ಯ ಸಿದ್ಧಂ ಜೀವತೋಽಪಿ ವಿದುಷೋಽಶರೀರತ್ವಮ್ |** **-ಸೂ.ಭಾ. 1-1-4**

ಆತ್ಮನು ಶರೀರವಿಶಿಷ್ಟನೆಂದು ತೋರುತ್ತಿರುವುದು ಮಿಥ್ಯಾಜ್ಞಾನದಿಂದ ಬಂದದ್ದು. ಆದ್ದರಿಂದ ಬದುಕಿರುವಾಗಲೇ ಜ್ಞಾನಿಯು ಅಶರೀರನೆಂಬುದು ಸಿದ್ಧವಾಗುತ್ತದೆ.

ಜೀವನ್ಮುಕ್ತಿಯುಂಟೆಂಬುದು ಇದರಿಂದ ಸಿದ್ಧವಾಗುತ್ತದೆ.

**323**

**ನ ಹಿ ಆತ್ಮನಃ ಸ್ವಾತ್ಮನಿ ಪ್ರವರ್ತಕ ಪ್ರಮಾಣಾಪೇಕ್ಷಾ | ಆತ್ಮತ್ವಾದೇವ| ತದತ್ತತ್ವಾಚ್ಚ ಸರ್ವಪ್ರಮಾಣಾನಾಂ ಪ್ರಮಾಣತ್ವಸ್ಯ|** **-ಗೀತಾ 2-69**

ಆತ್ಮನಿಗೆ ತನ್ನ ಆತ್ಮನ ವಿಷಯದಲ್ಲಿ ಪ್ರವರ್ತಕವಾದ ಪ್ರಮಾಣದ ಅಪೇಕ್ಷೆಯಿಲ್ಲ.

ಏಕೆಂದರೆ, ಆತ್ಮನು ತನ್ನ ಸ್ವರೂಪವೇ ಆಗಿರುತ್ತಾನೆ. ಸರ್ವಪ್ರಮಾಣಗಳೂ ಪ್ರಮಾಣವೆನಿಸಿರುವುದು ಆತ್ಮಸ್ವರೂಪವನ್ನು ಅರಿತುಕೊಳ್ಳುವವರೆಗೆ ಮಾತ್ರ.

ತನ್ನ ಸ್ವರೂಪವು ಅತ್ಯಂತ ಪ್ರಸಿದ್ಧವಾದ್ದರಿಂದ ಅದನ್ನರಿತುಕೊಳ್ಳಲು ಪ್ರವರ್ತಕವಾದ ವಿಧಿಯು ಬೇಕಿಲ್ಲ. ಏಕೆಂದರೆ ಆತ್ಮಜ್ಞಾನವು ವಿಧಿಸಾಧ್ಯವಲ್ಲ. ಆತ್ಮವು ನಿಷ್ಪಾದ್ಯವೂ ಅಲ್ಲ. "ಆತ್ಮಾವಾ ಅರೇ ದ್ರಷ್ಟವ್ಯಃ" ಇತ್ಯಾದಿ ಶ್ರುತಿವಾಕ್ಯಗಳು ಅಜ್ಞಾನ ನಿವೃತ್ತಿಗಾಗಿ ಯತ್ನಿಸಬೇಕೆಂದು ಬೋಧಿಸುತ್ತವೆ. ಆತ್ಮಜ್ಞಾನವಾದ ಮೇಲೆ ಎಲ್ಲ ವ್ಯವಹಾರಗಳೂ ನಿಂತು ಹೋಗುವುದರಿಂದ ವ್ಯವಹಾರ ನಿಯಮವಾದ ವಿಧಿಯು ಜ್ಞಾನಿಗೆ ಬೇಕಿಲ್ಲ.

**324**

**ನ ಚ ಸ ನಿಯೋಕ್ತುಂ ಶಕ್ಯತೇ ಕೇನಚಿತ್ | ಆಮ್ನಾಯಸ್ಯಾಪಿ ತತ್ಪ್ರಭವತ್ವಾತ್ | ನ ಹಿ ಸ್ವವಿಜ್ಞಾನೋತ್ಥೇನ ವಚಸಾ ಸ್ವಯಂ ನಿಯುಜ್ಯತೇ |**

**-ಐತರೇಯ 1-1 ಉಪೋದ್ಘಾತ**

ಬ್ರಹ್ಮಜ್ಞಾನಿಯನ್ನು ನಿಯೋಜಿಸಲು ಯಾರಿಂದಲೂ ಶಕ್ಯವಿಲ್ಲ. ವೇದವೂ ಅವನನ್ನು ನಿಯಮಿಸಲಾರದು. ಏಕೆಂದರೆ ಈಶ್ವರಾತ್ಮನಾದ ಆತನಿಂದಲೇ ವೇದವು ಪ್ರಕಾಶವಾಗಿದೆ. ತನ್ನ ವಿಜ್ಞಾನದಿಂದ ಉದ್ಭವಿಸಿದ ವಾಕ್ಯದಿಂದ ತಾನೇ ನಿಯೋಜಿತನಾಗುವುದಿಲ್ಲ.

**325**

**ಯಸ್ತು ಪೂರ್ಣಾನಂದಬ್ರಹ್ಮರೂಪೇಣಾತ್ಮಾನಮವಗಚ್ಛತಿ ಸ ಮುಚ್ಯತೇ | ಯಸ್ತು ಪರಮಾತ್ಮನೋಽನ್ಯಮಾತ್ಮಾನಂ ಜಾನಾತಿ ಸ ಬಧ್ಯತ ಇತಿ |**

**-ಶ್ವೇತಾಶ್ವತರ 1-6**

ಯಾವನು ತನ್ನನ್ನು ಪೂರ್ಣಾನಂದ ಬ್ರಹ್ಮಸ್ವರೂಪನೆಂದು ತಿಳಿಯುತ್ತಾನೋ ಅವನು ಮುಕ್ತನಾಗುತ್ತಾನೆ. ಯಾವನು ತನ್ನನ್ನು ಪರಮಾತ್ಮನಿಗಿಂತ ಭಿನ್ನನೆಂದು ತಿಳಿಯುತ್ತಾನೋ ಅವನು ಬದ್ಧನಾಗಿರುತ್ತಾನೆ.

**326**

**ನ ಹಿ ಸದಾತ್ಮೈಕತ್ವದರ್ಶಿನಃ ಸತ್ಯಾಭಿಸಂಧಸ್ಯ ದೇಶಕಾಲನಿಮಿತ್ತ ಫಲಾದ್ಯನೃತಾಭಿಸಂಧಿರುಪಪದ್ಯತೇ | -ಛಾಂ. 6-15-2**

ಸದ್ರೂಪವಾದ ಆತ್ಮವು ಒಂದೇ ಎಂದು ತಿಳಿದಿರತಕ್ಕ ಸತ್ಯನಿಷ್ಠನಿಗೆ ದೇಶಕಾಲ ನಿಮಿತ್ತಗಳಿಂದ ಹುಟ್ಟುವ ಫಲವೇ ಮೊದಲಾದ ಅನೃತವಸ್ತುವಿನಲ್ಲಿ ಅಭಿಲಾಷೆ ಕೂಡುವುದಿಲ್ಲ.

**327**

**ಸ ಏಷ ಆನಂದಃ ಯಸ್ಯ ಮಾತ್ರಾಃ ಸಮುದ್ರಾಂಭಸ ಇವ ವಿಪ್ರುಷಃ ಪ್ರವಿಭಕ್ತಾಃ ಯತ್ರೈಕತಾಂ ಗತಾಃ | ಸ ಏಷ ಪರಮಾನಂದಃ ಸ್ವಾಭಾವಿಕಃ ಅದ್ವೈತತ್ವಾತ್ | ಆನಂದಾನಂದಿನೋಶ್ಚ ಅವಿಭಾಗೋऽತ್ರ |**

**-ತೈತ್ತಿ-ಆನಂದ-ಅನು-8**

ಈ ಬ್ರಹ್ಮಾನಂದವು ಸಮುದ್ರಜಲದಂತೆ. ಲೌಕಿಕಾನಂದಗಳು ಅದರ ಕಣಗಳು. ಸಮುದ್ರಜಲದ ಹನಿಗಳಿದ್ದಂತೆ. ಈ ಆನಂದಗಳೆಲ್ಲ ಏಕತ್ವವನ್ನು ಹೊಂದತಕ್ಕದ್ದು ಎಲ್ಲಿಯೋ ಅದು ಪರಮಾನಂದ-ಬ್ರಹ್ಮಾನಂದ. ಅದು ಅದ್ವೈತವಾದ್ದರಿಂದ ಸ್ವಾಭಾವಿಕವಾದದ್ದು. (ಇನ್ನೊಂದರಿಂದ ಜನ್ಯವಲ್ಲ) ವಿದ್ಯಾಕಾಲದಲ್ಲಿ ಆನಂದ-ಆನಂದಿಗಳಿಗೆ ಭೇದವಿಲ್ಲ. (ಬ್ರಹ್ಮವೇ ಆನಂದ ಸ್ವರೂಪವಾದ್ದರಿಂದ).

**328**

**ಯೇಷಾಂ ಪುನಃ ಈಶ್ವರೋऽನ್ಯಃ ಕಾರ್ಯಂ ಚ ಅನ್ಯತ್, ತೇಷಾಂ ಭಯಾನಿವೃತ್ತಿಃ | ಭಯಸ್ಯ ಅನ್ಯನಿಮಿತ್ತತ್ವಾತ್ |** **-ತೈತ್ತಿ-ಆನಂದ-ಅನು-8**

ಯಾರ ಮತದಲ್ಲಿ ಈಶ್ವರನು ಜೀವಾತ್ಮನಿಗಿಂತ ಅನ್ಯನೆಂದೂ ಕಾರ್ಯವಾದ ಜಗತ್ತು ಭಿನ್ನವೆಂದೂ ಆಗಿದೆಯೋ ಆ ಮತದಲ್ಲಿ ಜ್ಞಾನಿಗಳಿಗೆ ಭಯ ತೊಲಗುವುದಿಲ್ಲ. ಭಯವು ಇನ್ನೊಬ್ಬರಿಂದ ಉಂಟಾಗುವುದೇ ಇದಕ್ಕೆ ಕಾರಣ.

'ಅಭಯಂ ಪ್ರತಿಷ್ಠಾಂವಿಂದತೇ', 'ಅಥ ಸೋऽಭಯಂ ಗತೋ ಭವತಿ' (ಆನಂದ 7-1) ಎಂಬುದಾಗಿ ಜ್ಞಾನಿಗೆ ಅಭಯವನ್ನು ಹೇಳಿದೆ. ತನಗಿಂತ ಭಿನ್ನನಾದ ಇನ್ನೊಬ್ಬನಿದ್ದರೆ ಭಯ ತಪ್ಪುವುದಿಲ್ಲ ಎಂದು ಅಭಿಪ್ರಾಯ. 'ದ್ವಿತೀಯಾದ್ವೈಭಯಂ ಭವತಿ.

**329**

**ಸರ್ವೋ ಹಿ ಲೋಕಃ ಈಶ್ವರಾದ್ ಗುಪ್ತಿಮಿಚ್ಛತಿ ಭೇದದರ್ಶೀ ಅಯಂ ತ್ವೇಕತ್ವದರ್ಶೀ ನ ಬಿಭೇತಿ ಕುತಶ್ಚನ |** **-ಬೃಹ. 4-4-15**

ಭೇದದರ್ಶಿಗಳಾದ ಸರ್ವಜನರೂ ಈಶ್ವರನಿಂದ ಸಂರಕ್ಷಣೆಯನ್ನು ಬಯಸುತ್ತಾರೆ. ಅಭೇದದರ್ಶಿಯಾದರೋ ಯಾರಿಗೂ ಅಂಜುವುದೇ ಇಲ್ಲ.

ಸರ್ವವೂ ಆತ್ಮನೇ ಎಂದು ತಿಳಿದವನಿಗೆ ಯಾರಿಂದರೂ ಭಯವಿಲ್ಲ. ಏಕೆಂದರೆ ಭಯಪಡಿಸತಕ್ಕ ಇನ್ನೊಂದು ವಸ್ತುವೇ ಆತ್ಮನಿಗೆ ಕಾಣುವುದಿಲ್ಲ. ಅವನು ಯಾರನ್ನು ನಿಂದಿಸುವ ಸಂಭವವೂ ಇಲ್ಲ. ಸಮದರ್ಶಿಯೆಂದರೆ ಈತನೇ.

**330**

**ಅನಾತ್ಮೈವ ಭಯಕಾರಣಮ್ | ಸರ್ವತೋ ಹಿ ನಿರ್ಭಯಾ ಬ್ರಾಹ್ಮಣಾ ದೃಶ್ಯಂತೇ ಸತ್ಸು ಭಯಹೇತುಷು |** **-ತೈತ್ತಿ. ಆನಂದವಲ್ಲಿ-7**

ಅನಾತ್ಮ ವಸ್ತುದರ್ಶನವೇ ತನ್ನ ಭಯಕ್ಕೆ ಕಾರಣವಾಗುತ್ತದೆ. ಬ್ರಹ್ಮಜ್ಞಾನಿಗಳಾದರೇ ಭಯಹೇತುಗಳಿದ್ದರೂ ಎಲ್ಲ ವಿಧದಲ್ಲಿಯೂ ನಿರ್ಭಯರಾಗಿಯೇ ಇರುವುದು ಕಂಡುಬರುತ್ತದೆ.

ಭಯವಾಗಬೇಕಾದರೆ ತನಗಿಂತ ಬೇರೆಯಾದ ಇನ್ನೊಂದು ವಸ್ತುವಿರಬೇಕು. ಬ್ರಹ್ಮಜ್ಞಾನಿಯು ನಿರ್ಭಯನಾಗಿಯೇ ಇರುತ್ತಾನೆ. ಏಕೆಂದರೆ ಅವನಿಗೆ ಆತ್ಮನಿಗಿಂತ ಬೇರೆಯಾಗಿ ಇನ್ನೊಂದು ವಸ್ತು ಗೋಚರವಾಗುವುದಿಲ್ಲ.

**331**

**ಆತ್ಮಾನಾತ್ಮ ವಿವೇಕಿನಾಮಪಿ ಪಂಡಿತಾನಾಂ ಅಜಾವಿಪಾಲಾನಾಮಿವ ಅವಿವಿಕ್ತೌ ಶಬ್ದಪ್ರತ್ಯಯೌ ಭವತಃ |** **-ಸೂ.ಭಾ. 1-1-4**

ಇದು ಆತ್ಮ, ಇದು ಅನಾತ್ಮ-ಎಂಬ ವಿವೇಕ ಜ್ಞಾನವುಳ್ಳ ಪಂಡಿತರಿಗೂ ಸಹ ಮೇಕೆ, ಕುರಿಗಳನ್ನು ಕಾಯುವವರಿಗಿರುವ ಹಾಗೆ ಶಬ್ದ ಮತ್ತು ಜ್ಞಾನಿಗಳು ಒಂದುಗೂಡಿ ಬರುತ್ತವೆ.

ದೇಹ ಬೇರೆ, ಆತ್ಮನಾದ ತಾನು ಬೇರೆ ಎಂಬ ಜ್ಞಾನ ವಿದ್ವಾಂಸರಿಗಿರುತ್ತದೆ. ಆದರೂ ಅವರು ವ್ಯವಹಾರದಲ್ಲಿ ದೇಹವನ್ನೇ ನಾನು ಎಂಬ ಶಬ್ದದಿಂದ ಕರೆದುಕೊಳ್ಳುತ್ತಾರೆ. ಹಾಗೆಯೇ ತಿಳಿದುಕೊಂಡು ವ್ಯವಹರಿಸುತ್ತಾರೆ. ಇವರು ಜ್ಞಾನಿಗಳಲ್ಲವೆಂದು ಅಭಿಪ್ರಾಯ.

**332**

**ತಸ್ಮಾನ್ನಾಪಗತ ಬ್ರಹ್ಮಾತ್ಮಭಾವಸ್ಯ ಯಥಾಪೂರ್ವಂ ಸಂಸಾರಿತ್ವಮ್ | ಯಸ್ಯ**

**ತು ಯಥಾ ಪೂರ್ವಂ ಸಂಸಾರಿತ್ವಂ ನಾಸಾವವಗತ ಬ್ರಹ್ಮಾತ್ಮ ಭಾವ ಇತ್ಯನವದ್ಯಮ್ |**
**-ಸೂ.ಭಾ. 1-1-4**

ಆದ್ದರಿಂದ ಬ್ರಹ್ಮವೇ ತಾನೆಂದು ಸಾಕ್ಷಾತ್ಕರಿಸಿಕೊಂಡವನಿಗೆ ಹಿಂದಿನಂತೆ ಸಂಸಾರ ಬಂಧನವಿರುವುದಿಲ್ಲ. ಯಾರಿಗೆ ಸಂಸಾರವು ಅಂಟಿಕೊಂಡಿರುತ್ತದೆಯೋ ಅವನು ಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಂಡ ಜ್ಞಾನಿಯಲ್ಲ. ಈ ಸಿದ್ಧಾಂತವು ಯಾವ ದೋಷವೂ ಇಲ್ಲದೆ ಶುದ್ಧವಾದದ್ದು.

**333**

**ಬ್ರಹ್ಮವಿದಶ್ಚ ಆಪ್ತಕಾಮತ್ವಾತ್ ಆಪ್ತಕಾಮಸ್ಯ ಕಾಮಾನುಪಪತ್ತೇಃ |**
**ಬೃಹ. ಭಾ. 2-4-1**

ಬ್ರಹ್ಮಜ್ಞಾನಿಯು ಆಪ್ತಕಾಮನಾಗಿರುವುದರಿಂದ ಆಪ್ತಕಾಮನಿಗೆ ಮತ್ತೆ ಕಾಮವು ಇರಲು ಶಕ್ಯವಿಲ್ಲ.

**334**

**ತಸ್ಯ ಕರ್ಮಣಿ ಕರ್ಮಪ್ರಯೋಜನೇ ಚ ನಿವೃತ್ತೇಽಪಿ ಲೋಕ ಸಂಗ್ರಹಾರ್ಥಂ ಯತ್ನಪೂರ್ವಂ ಯಥಾ ಪ್ರವೃತ್ತಃ ತಥೈವ ಪ್ರವೃತ್ತಸ್ಯ ಯತ್ ಪ್ರವೃತ್ತಿರೂಪಂ ದೃಶ್ಯತೇ ನ ತತ್ ಕರ್ಮ |**
**-ಗೀತಾ 2-11 (ಪೀಠಿಕೆ)**

ಆತ್ಮಜ್ಞಾನಿಗೆ ಕರ್ಮವೂ ಕರ್ಮದಿಂದಾಗಬೇಕಾದ ಪ್ರಯೋಜನವೂ ಹೋಗಿಬಿಟ್ಟಿರುತ್ತದೆ. ಆತನು ಯಾವ ಕರ್ಮದಲ್ಲಿ ಹಿಂದೆ ಹೇಗೆ ಪ್ರವರ್ತಿಸುತ್ತಿದ್ದನೋ ಹಾಗೆ ಲೋಕಸಂಗ್ರಹಕ್ಕಾಗಿ ಪ್ರವರ್ತಿಸುತ್ತಿರುವಾಗ ಪ್ರವೃತ್ತಿಯಂತೆ ಯಾವುದು ಕಾಣುವುದೋ ಅದು ನಿಜವಾಗಿ ಕರ್ಮವಲ್ಲ.

ಜ್ಞಾನೋತ್ಪತ್ತಿಗೆ ಪೂರ್ವದಲ್ಲಿ ಕರ್ಮ ಮಾಡುತ್ತಿದ್ದಂತೆ ಜ್ಞಾನಾನಂತರವೂ ನಡೆಯುವ ಪ್ರವೃತ್ತಿಯು ಕರ್ಮವೇ ಅಲ್ಲ. ಏಕೆಂದರೆ, ಕರ್ಮ ಲಕ್ಷಣ ಅದರಲ್ಲಿಲ್ಲ. ಫಲಾಭಿಲಾಷೆಯಿಂದ ಅಹಂಕಾರ ಪೂರ್ವಕ ನಡೆಯುವ ಪ್ರವೃತ್ತಿಯೇ ಕರ್ಮವೆನಿಸುತ್ತದೆ. ಜ್ಞಾನಿಯೂ ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುವುದುಂಟು.

**335**

**ಅವಿದ್ಯಾಧ್ಯಾರೋಪಣ ನಿರಾಕರಣಮಾತ್ರಂ ಬ್ರಹ್ಮಣಿ ಕರ್ತವ್ಯಮ್, ನ ತು ಬ್ರಹ್ಮವಿಜ್ಞಾನೇ ಯತ್ನಃ | ಅತ್ಯಂತ ಪ್ರಸಿದ್ಧತ್ವಾತ್ | -ಗೀ.ಭಾ. ೧೮-೫೦**

ಬ್ರಹ್ಮವು ಅತ್ಯಂತ ಪ್ರಸಿದ್ಧವಾಗಿರುವುದರಿಂದ ಅದರ ಜ್ಞಾನಕ್ಕಾಗಿ ಪ್ರಯತ್ನಿಸಬೇಕಾದ್ದೇನೂ ಇಲ್ಲ. ಅವಿದ್ಯೆಯಿಂದ ಮಾಡಿಕೊಂಡಿರುವ ಅಧ್ಯಾರೋಪವನ್ನು ಮಾತ್ರ ಹೋಗಲಾಡಿಸಿಕೊಳ್ಳಬೇಕಾಗುತ್ತದೆ.

'ನಾನು ಇದ್ದೇನೆ' ಎಂಬುದು ಎಲ್ಲರಿಗೂ ತಿಳಿದಿದೆ. 'ನಾನು' ಎಂಬುದರ ಸರಿಯಾದ ಪರಮಾರ್ಥವೇ ಆತ್ಮ-ಬ್ರಹ್ಮ. ಇದರಲ್ಲಿ ದೇಹೇಂದ್ರಿಯಾದಿಗಳನ್ನು ಆರೋಪಿಸಿಕೊಂಡು ನಾನು ಮನುಷ್ಯ, ಗಂಡಸು, ನಾನು ಹೆಂಗಸು-ಇತ್ಯಾದಿ ತಪ್ಪು ತಿಳಿವಳಿಕೆ ಅವಿದ್ಯೆಯಿಂದ ಬಂದಿದೆ. ಈ ಎಲ್ಲ ಅಧ್ಯಾರೋಪವೂ ತೊಲಗಿದಾಗ ನಿಜವಾದ ನಾನು ಎಂಬುದೇ ಬ್ರಹ್ಮ. ಆಗ 'ನಾನು' ಎಂಬ ಕರ್ತೃತ್ವವೂ ಇರುವುದಿಲ್ಲ.



# ೧೩ ಉಪಾಸನೆ-ಭಕ್ತಿ

ಉಪಾಸ್ಯದೇವತೆಯ ನಾಮರೂಪಾದಿಗಳನ್ನು ಚಿಂತಿಸುತ್ತ ಮನಸ್ಸನ್ನು ದೇವತೆಯಲ್ಲಿಯೇ ಸ್ಥಿರವಾಗಿ ನಿಲ್ಲಿಸುವುದು ಉಪಾಸನೆ. ಇದೊಂದು ಮಾನಸಕ್ರಿಯೆಯಾಗಿರುತ್ತದೆ. ಉಪಾಸ್ಯ-ಉಪಾಸಕ ಎಂಬ ಭೇದವು ಇಲ್ಲಿರುವುದರಿಂದ ಉಪಾಸನೆಯು ದ್ವೈತದಲ್ಲಿ ಸೇರತಕ್ಕದ್ದು. ಈ ಉಪಾಸ್ಯವು ಸಗುಣವಾದ್ದರಿಂದ ಅಪರಬ್ರಹ್ಮ ಎಂದು ವ್ಯವಹಾರವಿದೆ. ನಾಮ, ರೂಪ, ಗುಣಾದಿಗಳು ಉಪಾಸನೆಗಾಗಿ ಕಲ್ಪಿತವಾದ್ದರಿಂದ ಉಪಾಸ್ಯ ದೇವತೆಯ ನಾಮರೂಪಾದಿಗಳು ನಾನಾ ವಿಧವಾಗಬಹುದು. ಮೂಲದಲ್ಲಿ ದೇವತೆಯು ಒಂದೇ ಆದರೂ ಕಲ್ಪಿತನಾಮರೂಪಗಳು ಭಿನ್ನವಾದ್ದರಿಂದಲು ಉಪಾಸಕನ ಅಭಿಲಾಷೆಗಳು ಬೇರೆ ಬೇರೆಯಾದ್ದರಿಂದಲೂ ಈ ಉಪಾಸನೆಯಿಂದ ಫಲವು ಭಿನ್ನವಾಗಿ ದೊರೆಯುತ್ತದೆ. ಉಪಾಸಕನು ಮೋಕ್ಷಕಾಮಿಯಾಗಿದ್ದರೆ ಕ್ರಮಮುಕ್ತಿಯೂ ದೊರಕುತ್ತದೆ. ಅದು ಸಾಲೋಕ್ಯ, ಸಾಮೀಪ್ಯಗಳಿಂದ ಕೂಡಿದ್ದು. ಸಾಯುಜ್ಯ ರೂಪವಾದ ಮುಖ್ಯಮೋಕ್ಷವಲ್ಲ. ಮುಂದೆ ಆಯಾ ಉಪಾಸ್ಯ ದೇವತೆಯ ಅನುಗ್ರಹದಿಂದ ಸಮಗ್ಜ್ಞಾನ ಉಂಟಾಗಿ ಮುಖ್ಯ ಮೋಕ್ಷವು ದೊರಕುತ್ತದೆಯೆಂದು ಉಪನಿಷತ್ತುಗಳ ಸಿದ್ಧಾಂತವಿದೆ. ಉಪಾಸನೆಯಿಂದ ಕ್ರಮಮುಕ್ತಿಯನ್ನು ಪಡೆದವನಿಗೆ ಇಚ್ಛಾಕಲ್ಪಿತವಾದ ಶರೀರವೂ ಮನಸ್ಸೂ ಇರುತ್ತದೆ. ಜ್ಞಾನದಿಂದ ಪಡೆದ ಕೇವಲ ಮುಕ್ತಿಯಲ್ಲಿ ಶರೀರ ಮನಸ್ಸುಗಳಿರುವುದಿಲ್ಲ.

ರಾಜನನ್ನು ಉಪಾಸನೆ ಮಾಡುತ್ತಾನೆ, ಗುರುವನ್ನು ಉಪಾಸನೆ ಮಾಡುತ್ತಾನೆ ಇತ್ಯಾದಿ ಪ್ರಯೋಗಗಳಲ್ಲಿ ಉಪಾಸನೆಯೆಂದರೆ ಸೇವೆಯೆಂದರ್ಥ. ಸಗುಣೋಪಾಸನೆಯಲ್ಲಿ ಸೇವೆಯೂ ಸೇರುತ್ತದೆ. ಧ್ಯಾನವೂ ಉಪಾಸನೆಗೆ ಸೇರತಕ್ಕದ್ದೇ. ಉಪಾಸನೆಗೂ ಭಕ್ತಿಗೂ ಅಂತರವೇನೂ ಇಲ್ಲ. ಭಗವದ್ಗೀತೆಯಲ್ಲಿ ವಿಶೇಷವಾಗಿ ಭಕ್ತಿ ಶಬ್ದವನ್ನೇ ಬಳಸಿದ್ದಾರೆ. 'ಭಕ್ತ್ಯಾ ಮಾಮಾಭಿಜಾನಾತಿ' ಎಂದಿರುವುದರಿಂದ ಭಕ್ತಿಯು ಜ್ಞಾನಕ್ಕೆ ಸಾಧನವಾಗಿರುತ್ತದೆ. ಇತಿಹಾಸ ಪುರಾಣಗಳಲ್ಲಿ ಭಕ್ತಿಶಬ್ದದ ಬಳಕೆಯೇ ಅಧಿಕ. ಈ ಭಕ್ತಿಯನ್ನು ಒಂಬತ್ತು ವಿಧವಾಗಿ ವಿಂಗಡಿಸಬಹುದು ಭಾಗವತದಲ್ಲಿ ಕಂಡುಬರುತ್ತದೆ.

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ |**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ||**

ಸರ್ವಸ್ವವನ್ನೂ ಭಗವಂತನಿಗೆ ಅರ್ಪಿಸುವುದು ಆತ್ಮನಿವೇದನೆ. ಭಗವದ್ಗೀತೆಯಲ್ಲಿ ಭಕ್ತರು ನಾಲ್ಕು ವಿಧದಲ್ಲಿರುತ್ತಾರೆಂದು ಶ್ರೀಕೃಷ್ಣನು ಹೇಳಿ, ಆ ನಾಲ್ವರಲ್ಲಿ ಜ್ಞಾನಿಯನ್ನು

ಸೇರಿಸಿದ್ದಾನೆ. ಈ ಜ್ಞಾನಿಭಕ್ತನು ತಾನೇ ಎಂದೂ 'ಜ್ಞಾನೀ ತ್ವಾತ್ಮೈವ ಮೇ ಮತಮ್' ಎಂದೂ ಹೇಳಿದ್ದಾನೆ. ಜ್ಞಾನಿಗೂ ಭಗವಂತನಿಗೂ ಭೇದವೇ ಇಲ್ಲವೆಂದು ಇದರಿಂದ ಗೊತ್ತಾಗುತ್ತದೆ. ತಾತ್ಪರ್ಯವೇನೆಂದರೆ, ಭಕ್ತಿಯು ಸರ್ವೋತ್ಕರ್ಷವನ್ನು ಪಡೆದಾಗ ಜ್ಞಾನವೇ ಆಗಿ ಬಿಡುತ್ತದೆ. ಇದೇ ಪರಾಭಕ್ತಿ. 'ಆತ್ಮೇತ್ಯೇವೋಪಾಸೀತ' ಎಂಬ ಉಪನಿಷದ್ವಚನದಂತೆ ಆತ್ಮಗ್ರಹೋಪಾಸನೆಯೇ ಇದು. ಆತ್ಮವೇ ಪರಮಪ್ರಿಯವಾದ್ದರಿಂದ ಭಗವಂತನೇ ತನ್ನ ಆತ್ಮನೆಂದೂ ಅವನೇ ತಾನೆಂದೂ ತಿಳಿಯುವುದು ಪರಮಪ್ರೇಮರೂಪವಾದ ಭಕ್ತಿಯೇ ಆಗಿರುತ್ತದೆ.

**336**

**ಉಪಾಸನಂ ತು ಯಥಾಶಾಸ್ತ್ರಸಮರ್ಪಿತಂ ಕಿಂಚಿದಾಲಂಬನಮುಪಾದಾಯ ತಸ್ಮಿನ್ ಸಮಾನ ಚಿತ್ತವೃತ್ತಿಕರಣಂ ತದ್ವಿಲಕ್ಷಣ ಪ್ರತ್ಯಯಾನಂತರಿತಮ್ |**

**-ಛಾಂದೋಗ್ಯ ಅವತರಣಿಕೆ**

ಉಪಾಸನವೆಂದರೆ ಶಾಸ್ತ್ರೋಕ್ತವಾದ ಒಂದಾನೊಂದು ಆಲಂಬನವನ್ನಿಟ್ಟುಕೊಂಡು ಅದರಲ್ಲಿ ಏಕಪ್ರಕಾರವಾದ ಚಿತ್ತವೃತ್ತಿಯನ್ನಿಡುವುದು. ಅದಕ್ಕೆ ಹೊರತಾದ ಇನ್ನೊಂದು ಚಿತ್ತವೃತ್ತಿಯು ನಡುವೆ ಸೇರಿಕೊಳ್ಳಬಾರದು.

**337**

**ಏಕಮಪಿ ಹಿ ಬ್ರಹ್ಮ ವಿಭೂತಿಭೇದೈರನೇಕಧೋಪಾಸ್ಯತ ಇತಿ ಸ್ಥಿತಿಃ |**

**-ಸೂ.ಭಾ. 3-3-23**

ಬ್ರಹ್ಮವು ಒಂದೇ ಆಗಿದ್ದರೂ ತನ್ನ ವಿಭೂತಿಭೇದಗಳಾದ ಅನೇಕ ಪ್ರಕಾರವಾಗಿ ಉಪಾಸ್ಯವಾಗಿರುತ್ತದೆ-ಎನ್ನುವುದೇ ಸಿದ್ಧಾಂತ.

ಶಾಂಡಿಲ್ಯವಿದ್ಯೆ, ದಹರವಿದ್ಯೆ, ಉಪಕೋಸಲವಿದ್ಯೆ, ಮೊದಲಾದ ವಿದ್ಯೆಗಳಲ್ಲಿ ಬೇರೆ ಬೇರೆ ಸ್ಥಾನಗಳಲ್ಲಿ ವಿಭಿನ್ನ ರೂಪವಾಗಿ ಬ್ರಹ್ಮದ ಉಪಾಸನೆಯನ್ನೇ ಹೇಳಿದೆ. ರೂಪಭೇದಗಳೆಲ್ಲವೂ ಬ್ರಹ್ಮದ ವಿಭೂತಿಯ ಮಹಿಮೆಯೇ. ಈ ಉಪಾಸನೆಯೇ ಭಕ್ತಿ ಎನ್ನಿಸುತ್ತದೆ.

**338**

**ಉಪಾಸನಂ ಚ ಯಥಾಶಾಸ್ತ್ರಂ ತುಲ್ಯಪ್ರತ್ಯಯಸಂತತಿಃ | ಅಸಂಕೀರ್ಣಾ ಚ ಅತತ್ಪ್ರತ್ಯಯೈಃ ಶಾಸ್ತ್ರೋಕ್ತಾಲಂಬನವಿಷಯಾ ಚ |** **-ತೈತ್ತಿರೀಯ 1-3**

ಶಾಸ್ತ್ರೋಕ್ತವಾದ ವಿಧಾನವನ್ನನುಸರಿಸಿದ ಏಕಾಕಾರವಾದ ಜ್ಞಾನಧಾರೆಯು ಉಪಾಸನೆಯೆನಿಸುತ್ತದೆ, ಧ್ಯೇಯವಸ್ತುವಿನ ಹೊರತಾಗಿ ಇನ್ನೊಂದು ಜ್ಞಾನವು ಆ ಜ್ಞಾನಧಾರೆಯಲ್ಲಿ ಸೇರಬಾರದು ಮತ್ತು ಧ್ಯೇಯವಾದ ಆಲಂಬನವು ಶಾಸ್ತ್ರವಿಹಿತವಾಗಿ ಇರಬೇಕು.

**339**

**ಧ್ಯಾನಂ ನಾಮ ಶಬ್ದಾದಿಭ್ಯೋ ವಿಷಯೇಭ್ಯಃ ಶ್ರೋತ್ರಾ ದೀನಿ ಕರಣಾನಿ ಮನಸಿ ಉಪಸಂಹೃತ್ಯ ಮನಶ್ಚ ಪ್ರತ್ಯಕ್‌ಚೇತಯಿತರಿ ಏಕಾಗ್ರತಯಾ ಯತ್ ಚಿಂತನಂ ತತ್ ಧ್ಯಾನಮ್ |**

**-ಗೀತಾ 13-24**

ಶಬ್ದಾದಿವಿಷಯಗಳಿಂದ ಶ್ರೋತ್ರಾದೀಂದ್ರಿಯಗಳನ್ನು ಸೆಳೆದು ಮನಸ್ಸಿನಲ್ಲಿ ಅದುಮಿ, ಆ ಮನಸ್ಸನ್ನು ಪ್ರತ್ಯಗಾತ್ಮನಲ್ಲಿ ಏಕಾಗ್ರತೆಯಿಂದ ತೊಡಗಿಸಿ ಚಿಂತಿಸುವುದು ಧ್ಯಾನವೆನಿಸುತ್ತದೆ.

**340**

**ಉಪಾಸನಂ ನಾಮ ಉಪಾಸ್ಯಾರ್ಥವಾದೇ ಯಥಾ ದೇವತಾದಿ ಸ್ವರೂಪಂ ಶ್ರುತ್ಯಾ ಜ್ಞಾಪ್ಯತೇ, ತಥಾ ಮನಸಾ ಉಪಗಮ್ಯ ಆಸನಂ ಚಿಂತನಮ್ | ಲೌಕಿಕಪ್ರತ್ಯಯಾವ್ಯವಧಾನೇನ ಯಾವತ್ ತದ್ದೇವತಾದಿ ಸ್ವರೂಪಾಭಿಮಾನಾಭಿವ್ಯಕ್ತಿಃ ||**

**-ಬೃಹ. 1-3-9**

ಉಪಾಸನೆಯೆಂದರೆ, ಉಪಾಸನೆಯನ್ನು ಹೇಳುವ ಅರ್ಥವಾದದಲ್ಲಿ ದೇವತಾದಿ ಸ್ವರೂಪವು ಹೇಗಿದೆಯೆಂದು ಶ್ರುತಿಯು ಬೋಧಿಸುತ್ತದೆಯೋ ಆ ಸ್ವರೂಪವನ್ನು ಮನಸ್ಸಿಗೆ ತಂದುಕೊಂಡು ನಿರಂತರವಾಗಿ ಚಿಂತಿಸುವುದು. ಈ ಚಿಂತನೆಯ ನಡುವೆ ಲೌಕಿಕವಾದ ಬೇರೆ ಯಾವುದರ ಜ್ಞಾನವೂ ಬರಬಾರದು. ಆಯಾ ದೇವತೆಯ ಸ್ವರೂಪವೇ ನಾನು ಎಂಬ ಅಭಿಮಾನವು ಅಭಿವ್ಯಕ್ತವಾಗುವ ಪರ್ಯಂತ ಈ ಧಾನ್ಯವು ಪಡೆಯಬೇಕು. ಇದು ಉಪಾಸನೆ.

ಉಪಾಸ್ಯ = ಮನಸಾ ಉಪಗಮ್ಯ, ಆಸನಂ =ಚಿಂತನಮ್.

**341**

**ತಾನ್ಯೇತಾನಿ ಉಪಾಸನಾನಿ ಸತ್ತ್ವಶುದ್ಧಿಕರತ್ವೇನ ವಸ್ತುತದ್ಭಾವಭಾಸಕ ತ್ವಾತ್ ಅದ್ವೈತಜ್ಞಾನೋಪಕಾರಕಾಣಿ | ಆಲಂಬನ ವಿಷಯತ್ವಾತ್ ಸುಸಾಧ್ಯಾನಿ ಚ ||**

**-ಛಾಂ. ಅವತರಣಿಕೆ**

ಓಂಕಾರಾದ್ಯುಪಾಸನೆಗಳು ಚಿತ್ತಶುದ್ಧಿಯನ್ನುಂಟು ಮಾಡುವುದರಿಂದ ವಸ್ತುತತ್ತ್ವವು ಚಿತ್ತದಲ್ಲಿ ಚೆನ್ನಾಗಿ ಪ್ರಕಾಶಿಸುವಂತೆ ಮಾಡುತ್ತವೆ. ಆದ್ದರಿಂದ ಅವು ಅದ್ವೈತಜ್ಞಾನಕ್ಕೆ ಉಪಕಾರಿಗಳು. ಅಲ್ಲದೆ ಈ ಉಪಾಸನೆಗಳು ಸಾಕಾರ ವಸ್ತುವನ್ನು ಅವಲಂಬಿಸುತ್ತವೆಯಾದ್ದರಿಂದ ಆಚರಿಸುವುದು ಸುಲಭ.

**342**

**ತೈಲಧಾರಾವತ್ ಸಂತತಃ ಅವಿಚ್ಛಿನ್ನಪ್ರತ್ಯಯೋ ಧ್ಯಾನಮ್ |**

**-ಗೀತಾ 13-5**

ಎಣ್ಣೆಯ ಧಾರೆಯಂತೆ ನಿಬಿಡವೂ ಅವಿಚ್ಛಿನ್ನವೂ ಆದ ಮನೋವೃತ್ತಿಯು ಧ್ಯಾನವೆನಿಸಿಕೊಳ್ಳುತ್ತದೆ.

**343**

**ಯತ್ರಾವಿದ್ಯಾಕೃತನಾಮರೂಪಾದಿ ವಿಶೇಷ ಪ್ರತಿಷೇಧಾದಸ್ಥೂಲಾದಿ ಶಬ್ದೈಃ ಬ್ರಹ್ಮೋಪದಿಶ್ಯತೇ ತತ್ಪರಮ್ | ತದೇವ ಯತ್ರ ನಾಮರೂಪಾದಿ ವಿಶೇಷೇಣ ಕೇನಚಿದ್ವಿಶಿಷ್ಟಮುಪಾಸನಾಯೋಪದಿಶ್ಯತೇ! "ಮನೋಮಯಃ ಪ್ರಾಣಶರೀರೋ ಭಾರೂಪಃ" ಇತ್ಯಾದಿಶಬ್ದೈಸ್ತದಪರಮ್ |**

**-ಸೂ.ಭಾ. 4-3-14**

ನಾಮರೂಪಾದಿ ವಿಶೇಷಗಳು ಅವಿದ್ಯಾಕೃತವಾದವು. ಅವುಗಳನ್ನು ನಿಷೇಧಿಸಿ 'ಅಸ್ಥೂಲಮನಣು' ಇತ್ಯಾದಿ ಶಬ್ದಗಳಿಂದ ಎಲ್ಲಿ ಬ್ರಹ್ಮವು ಉಪದಿಷ್ಟವಾಗಿದೆಯೋ ಅದು ಪರಬ್ರಹ್ಮ. ಅದೇ ಎಲ್ಲಿ 'ಮನೋಮಯಃ ಪ್ರಾಣಶರೀರಃ ಭಾರೂಪಃ' ಇತ್ಯಾದಿ ವಿಶೇಷಣ ವಿಶಿಷ್ಟವಾಗಿ ಉಪದಿಷ್ಟವಾಗಿದೆಯೋ ಅದು ಅಪರಬ್ರಹ್ಮ. ಉಪಾಸನಾರ್ಥವಾಗಿ

ಹೀಗೆ ನಾಮರೂಪಾದಿ ವಿಶೇಷ ಸಹಿತವಾಗಿ ಅದು ಉಪದಿಷ್ಟವಾಗಿರುತ್ತದೆ.

ಪರಬ್ರಹ್ಮ, ಅಪರಬ್ರಹ್ಮ ಎಂದು ಶ್ರುತಿಗಳಿಂದ ಎರಡು ಬಗೆಯಲ್ಲಿ ಬ್ರಹ್ಮವು ಉಪದಿಷ್ಟವಾಗಿದೆ. ನಾಮರೂಪಗಳು ಅವಿದ್ಯಾಕೃತಗಳಾದ್ದರಿಂದ ಅದ್ವಿತೀಯವಾದ ಸತ್ಯ ಪರಬ್ರಹ್ಮ ಒಂದೇ.

**344**

**ಏಕ ಏವ ತು ಪರಮಾತ್ಮಾ ಈಶ್ವರಃ ತೈಸ್ತೈರ್ಗುಣವಿಶೇಷೈರ್ವಿಶಿಷ್ಟ ಉಪಾಸ್ಯೋ ಯದ್ಯಪಿ ಭವತಿ, ತಥಾಪಿ ಯಥಾಗುಣೋಪಾಸನಮೇವ ಫಲಾನಿ ಭಿದ್ಯಂತೇ|**

**-ಸೂ.ಭಾ. (ಉಪೋದ್ಘಾತ)**

ಪರಮಾತ್ಮನಾದ ಈಶ್ವರನು ಒಬ್ಬನೇ ಆದರೂ ಬೇರೆ ಬೇರೆ ಗುಣಗಳಿಂದ ವಿಶಿಷ್ಟನಾಗಿ ಉಪಾಸ್ಯನಾಗಿರುತ್ತಾನೆ. ಆದರೂ ಆಯಾ ಗುಣಭೇದಗಳ ಉಪಾಸನೆಯಿಂದಾಗಿ ಫಲಗಳು ಬೇರೆ ಬೇರೆಯಾಗುತ್ತವೆ.

**345**

**ವಿದ್ಯೋಪಾಸ್ತ್ಯೋಶ್ಚ ವೇದಾಂತೇಷು ಅವ್ಯತಿರೇಕೇಣ ಪ್ರಯೋಗೋ ದೃಶ್ಯತೇ |**

**-ಸೂ.ಭಾ. 4-1-1**

ಜ್ಞಾನ(ವಿದ್ಯೆ), ಉಪಾಸನೆ ಇವುಗಳಿಗೆ ಯಾವ ಭೇದವೂ ಇಲ್ಲದಂತೆ ಶಬ್ದ ಪ್ರಯೋಗ ಮಾಡಿರುವುದು ಉಪನಿಷತ್ತುಗಳಲ್ಲಿ ಕಂಡುಬರುತ್ತದೆ.

1) 'ಓಮಿತ್ಯೇತದಕ್ಷರಮುದ್ಗೀಥಮುಪಾಸೀತ'
ಇಲ್ಲಿ ಭಾವನಾರೂಪವಾದ ಉಪಾಸನೆ. **-ಛಾಂ. 1-1-1**

2) 'ಆತ್ಮೇತ್ಯೇವೋಪಾಸೀತ' **-ಛಾಂ 1-1-1**
ಇಲ್ಲಿ ವಿದ್ಯಾ ಎಂಬ ಅರ್ಥದಲ್ಲಿ ಪ್ರಯೋಗವಿದೆ.
ಇಲ್ಲಿ ಉಪಾಸನೆಯೆಂದರೆ ಅರಿತುಕೊಳ್ಳುವುದು.

**346**

**ತದನುಗ್ರಹಹೇತುಕೇನೈವ ಚ ವಿಜ್ಞಾನೇನ ಮೋಕ್ಷಸಿದ್ಧಿರ್ಭವಿತುಮರ್ಹತಿ |**

**-ಸೂ.ಭಾ. 2-3-41**

(ಅವಿದ್ಯೆಯಿಂದ ಕುರುಡಾದ ಜೀವನಿಗೆ) ಭಗವಂತನ ಅನುಗ್ರಹದಿಂದಲೇ ಆತ್ಮಜ್ಞಾನ ಹುಟ್ಟಿ ಮೋಕ್ಷವು ಸಿದ್ಧಿಸುತ್ತದೆ.

**347**

**ಏವಂ ಭಗವತಃ ಸತ್ಯಪ್ರತಿಜ್ಞತ್ವಂ ಬುದ್ಧ್ವಾ ಭಗವದ್ಭಕ್ತೇರವಶ್ಯಂ ಭಾವಿ ಮೋಕ್ಷಫಲಮವಧಾರ್ಯ ಭಗವಚ್ಛರಣೈಕಪರಾಯಣೋ ಭವೇದಿತಿ ವಾಕ್ಯಾರ್ಥಃ |**

**-ಗೀತಾ 18-65**

ಈ ರೀತಿಯಾಗಿ ಭಗವಂತನು ಸತ್ಯಪ್ರತಿಜ್ಞನೆಂಬುದನ್ನು ನಿಶ್ಚಯಿಸಿಕೊಂಡು, ಭಗವದ್‌ಭಕ್ತಿಗೆ ಮೋಕ್ಷವು ಫಲವಾಗಿ ಅವಶ್ಯ ದೊರೆಯುತ್ತದೆಯೆಂದು ತಿಳಿದು, ಭಗವಂತನಿಗೇ ಪೂರ್ತಿಯಾಗಿ ಶರಣು ಹೋಗಬೇಕೆಂದು ಈ ಶ್ಲೋಕದ ತಾತ್ಪರ್ಯಾರ್ಥ.

**348**

**ಭಕ್ತೇಃ ಪುನರ್ಗ್ರಹಣಾತ್ ಭಕ್ತಿಮಾತ್ರೇಣ ಕೇವಲೇನ ಶಾಸ್ತ್ರ ಸಂಪ್ರದಾನೇ ಪಾತ್ರಂ ಭವತೀತಿ ಗಮ್ಯತೇ |** **-ಗೀತಾ 18-68**

ಭಕ್ತಿಯೆಂಬುದನ್ನು ಪುನರುಕ್ತವಾಗಿ ಹೇಳಿದ್ದರಿಂದ, ಕೇವಲ ಭಕ್ತಿಯೊಂದರಿಂದಲೇ ಗೀತಾದಿಶಾಸ್ತ್ರೋಪದೇಶವನ್ನು ಪಡೆಯುವುದಕ್ಕೆ ಅರ್ಹತೆ ಬರುತ್ತದೆಯೆಂದು ಗೊತ್ತಾಗುತ್ತದೆ.

ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ |
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ||

ಎಂಬುದೇ ಆ ಶ್ಲೋಕ.

**349**

**ಫಲಂ ತು ಅತಿಥ್ಯಾದ್ಯುಪಾಸನೇ ಇವ ಆದಿತ್ಯಾದ್ಯುಪಾಸನೇऽಪಿ ಬ್ರಹ್ಮೈವ ದಾಸ್ಯತಿ| ಸರ್ವಾಧ್ಯಕ್ಷತ್ವಾತ್ |**

**-ಸೂ.ಭಾ. 3-3-312**

ಅತಿಥಿ ಮೊದಲಾದವರನ್ನು ಸತ್ಕರಿಸಿದಾಗ ಹೇಗೋ ಹಾಗೆ ಸೂರ್ಯಾದಿ ದೇವತೆಗಳನ್ನು ಉಪಾಸನೆ ಮಾಡಿದಾಗಲೂ ಬ್ರಹ್ಮವೇ ಫಲವನ್ನೀಯುತ್ತದೆ. ಏಕೆಂದರೆ ಅದು ಸರ್ವಾಧ್ಯಕ್ಷವಾದದ್ದು.

**350**

**ವಿಷಯೇಭ್ಯಃ ಪ್ರತಿಸಂಹೃತ್ಯ ಚೇತಸ ಆತ್ಮನಿ ಸಮಾಧಾನಮಧ್ಯಾತ್ಮಯೋಗಃ |**
**ಕಠ 1-2-12**

ಮನಸ್ಸನ್ನು ವಿಷಯಗಳಿಂದ ವಿಮುಖಗೊಳಿಸಿ ಆತ್ಮದಲ್ಲಿ ನೆಲೆಗೊಳಿಸುವುದು ಅಧ್ಯಾತ್ಮಯೋಗವೆನಿಸುತ್ತದೆ.



# ೧೪ ಕರ್ಮ

ಕರ್ಮವೆಂದರೆ, ಕ್ರಿಯೆ. ಕೃಷಿ-ವಾಣಿಜ್ಯಾದಿ ಲೌಕಿಕವ್ಯಾಪಾರಗಳೂ ಕರ್ಮಗಳೇ. ವೇದಾಂತಶಾಸ್ತ್ರದಲ್ಲಿ ಕರ್ಮವೆಂದಾಗ ಅಗ್ನಿಹೋತ್ರಾದಿ ವೈದಿಕಕರ್ಮಗಳನ್ನು ಮಾತ್ರ ಗಣನೆಗೆ ತಂದು ವಿಚಾರ ಮಾಡುತ್ತಾರೆ. ಇದಕ್ಕೆ ಕಾರಣವಿಷ್ಟೆ: 'ಯಾವಜ್ಜೀವಮಗ್ನಿ ಹೋತ್ರಂ ಜುಹುಯಾತ್-ಬದುಕಿರುವವರೆಗೂ ಅಗ್ನಿಹೋತ್ರವನ್ನು ನಡೆಸುತ್ತಲೇ ಇರಬೇಕು' ಇತ್ಯಾದಿ ವೈದಿಕವಿಧಿಗಳಿವೆ. ಇದು ವೇದಾಜ್ಞೆಯಾದ್ದರಿಂದ ಮಾಡಲೇಬೇಕು. ಸಂನ್ಯಾಸಿಸ್ವೀಕಾರಕ್ಕೆ ಅವಕಾಶವಿಲ್ಲ -ಇತ್ಯಾದಿಯಾಗಿ ವಾದಿಸಿ ವಿಚಾರಮಾಡಲು ವಿಷಯವಿರುತ್ತದೆ. ಲೌಕಿಕ ಕರ್ಮದಲ್ಲಿ ಪೂರ್ವಪಕ್ಷಮಾಡಲು ಸಾಕಷ್ಟು ಕಾರಣಗಳು ಸಿಗುವುದಿಲ್ಲ. ಅಲ್ಲದೆ ಮೀಮಾಂಸಕರಿಗೆ ವೇದಾಂತಿಯು ಉತ್ತರಕೊಡಬೇಕಾದ್ದರಿಂದ ವೈದಿಕಕರ್ಮವನ್ನು ಮಾತ್ರ ವಿಚಾರಕ್ಕೆ ತೆಗೆದುಕೊಳ್ಳಲಾಗುತ್ತದೆ. ಲೌಕಿಕವ್ಯವಹಾರವೂ ಕರ್ಮವೇ.

ಕರ್ಮದಲ್ಲಿ 'ಅಹಂ ಕರ್ತಾ, ಅಹಂ ಭೋಕ್ತಾ' ಎಂಬ ಅಹಂಕಾರ ಪ್ರತ್ಯಯವಿದ್ದೇ ಇರಬೇಕು. ಕರ್ಮ, ಕರಣ, ಸಂಪ್ರದಾನ, ಅಧಿಕರಣ ಮೊದಲಾದವುಗಳ ಜ್ಞಾನವೂ ಅತ್ಯಾವಶ್ಯಕ. 'ಯಸ್ಯ ಸರ್ವಮಾತ್ಮೈವಾಭೂತ್' ಎಂಬ ಶ್ರುತಿಯಂತೆ ಯಾವ ಜ್ಞಾನಿಗೆ ಸರ್ವವೂ ಬ್ರಹ್ಮಮಯವಾಗಿಬಿಡುತ್ತದೆಯೋ ನಿಷ್ಕ್ರಿಯವಾದ ಪರಬ್ರಹ್ಮವೇ ತಾನೆಂಬ ನಿಶ್ಚಯವುಂಟಾಗುತ್ತದೆಯೋ ಆತನು ಕರ್ಮವನ್ನು ಏಕೆ ಮಾಡುತ್ತಾನೆ? ಹೇಗೆ ಮಾಡುತ್ತಾನೆ? ಆದ್ದರಿಂದ ಜ್ಞಾನಿಗೆ ಕರ್ಮವಿಲ್ಲವೆಂದೂ ಕರ್ಮಕಾಂಡವೆಲ್ಲವೂ ಅವಿದ್ಯಾಭೂಮಿಯಲ್ಲಿ ಮಾತ್ರವೆಂದೂ ಆಚಾರ್ಯರ ಸಿದ್ಧಾಂತವಿದೆ. 'ನಾಸ್ತ್ಯಕೃತಃ ಕೃತೇನ-ಕೃತವಾದ ಕರ್ಮದಿಂದ ಅಕೃತಕವಾದ-ನಿತ್ಯವಾದ ಮೋಕ್ಷವಿಲ್ಲ'-ಎಂದು ಶ್ರುತಿಯು ಸ್ಪಷ್ಟವಾಗಿ ಘೋಷಿಸಿರುವುದರಿಂದ ಕರ್ಮನಿಷ್ಠೆಯಿಂದ ಮೋಕ್ಷವು ಎಂದಿಗೂ ದೊರಕಲಾರದು. ಅಲ್ಲದೆ ಮೋಕ್ಷವೆಂದರೆ ಸ್ವರೂಪದಲ್ಲಿ ನೆಲೆನಿಲ್ಲುವುದು ಮಾತ್ರವಾಗಿರುತ್ತದೆ. ಅದನ್ನು ಎಲ್ಲಿಗೋ ಹೋಗಿ ಹೊಸದಾಗಿ ಪಡೆಯಬೇಕಾದ್ದಿಲ್ಲ. ನಿತ್ಯಸಿದ್ಧನಾದ ಆತ್ಮನೇ ತಾನೆಂದು ನಿಶ್ಚಯಿಸಿಕೊಳ್ಳುವುದೇ ಮೋಕ್ಷ. ಅಜ್ಞಾನದ ಪರದೆ ಹೋಗಬೇಕು. ಅಜ್ಞಾನವನ್ನು ಹೋಗಲಾಡಿಸತಕ್ಕದ್ದು. ಜ್ಞಾನವೇ ಹೊರತು ಕರ್ಮವಲ್ಲವೆಂಬುದು ಸರಳವಾಗಿ ತಿಳಿದುಕೊಳ್ಳಬಹುದಾದ ವಿಷಯ.

ಶಾಸ್ತ್ರವು ಕರ್ಮವನ್ನೇಕೆ ವಿಧಿಸಿದೆಯೆಂದರೆ, ಅಜ್ಞಾನಿಗಳ ಹಿತಕ್ಕಾಗಿ. ಅದ್ವೈತ ಜ್ಞಾನವು ಸುಲಭವಲ್ಲ. ಅಜ್ಞಾನಿಗಳಾದ ಜನರು ನಾನಾಫಲಗಳನ್ನು ಬಯಸುತ್ತಾರೆ. ಅವುಗಳನ್ನೀಡೇರಿಸಿಕೊಳ್ಳುವ ವಿಧಾನವನ್ನು ಶ್ರುತಿಯು ತಿಳಿಸಿಕೊಡುತ್ತದೆ. ಇನ್ನು ಯಾರಿಗೆ ಮೋಕ್ಷದ ಅಪೇಕ್ಷೆಯುಂಟೋ ಅವರೂ ಸಹ ಅವಿದ್ಯಾವಸ್ಥೆಯಲ್ಲಿ ಕರ್ಮವನ್ನು

ಮಾಡುತ್ತಲೇ ಇರಬೇಕು. ಆದರೆ ಕರ್ಮವನ್ನು ಭಗದರ್ಪಣಬುದ್ಧಿಯಿಂದ ಮಾಡಬೇಕೇ ಹೊರತು ಬೇರೆ ಫಲಾಪೇಕ್ಷೆಯನ್ನು ಇಟ್ಟುಕೊಳ್ಳಬಾರದು. ಅಂತಹ ನಿಷ್ಕಾಮ ಕರ್ಮದಿಂದ ಚಿತ್ತಶುದ್ಧಿಯುಂಟಾಗಿ ವೇದಾಂತದ ಬೋಧವು ಮನಸ್ಸಿಗೆ ನಾಟುತ್ತದೆ. ಕರ್ಮನಿಷ್ಠೆಯು ಜ್ಞಾನನಿಷ್ಠೆಗೆ ರಾಜಮಾರ್ಗವಾಗಿರುತ್ತದೆ. ಸಂಧ್ಯಾವಂದನಾದಿ ನಿತ್ಯಕರ್ಮಕ್ಕೆ ಸಹ ಚಿತ್ತಶುದ್ಧಿಯೆಂಬ ಫಲ ಉಂಟು. ಹೀಗೆ ಕರ್ಮವು ಜ್ಞಾನದ್ವಾರಾ ಮೋಕ್ಷಕ್ಕೆ ಉಪಕಾರಿಯಾಗುತ್ತದೆ.

**351**

**ಸರ್ವಮೇತದ್ಯಥೋಕ್ತಂ ಕರ್ಮ ಚ ಜ್ಞಾನಂ ಚ ಸಮ್ಯಗನುಷ್ಠಿತಂ ನಿಷ್ಕಾಮಸ್ಯ ಮುಮುಕ್ಷೋಃ ಸತ್ತ್ವಶುದ್ಧ್ಯರ್ಥಂ ಭವತಿ |**

**-ಕೇನ. ಪ.ಭಾ. ಭೂಮಿಕೆ**

ಶಾಸ್ತ್ರವಿಹಿತವಾದ ಸಮಸ್ತಕರ್ಮವೂ ಜ್ಞಾನಸಾಧನವೂ, ಸರಿಯಾಗಿ ಅನುಷ್ಠಾನ ಮಾಡಲ್ಪಟ್ಟರೆ, ನಿಷ್ಕಾಮನಾದ ಮುಮುಕ್ಷುವಿಗೆ ಆತನ ಮನಸ್ಸನ್ನು ಶುದ್ಧಿಗೊಳಿಸಲು ಉಪಕಾರಿಯೂ ಆಗುತ್ತದೆ.

**352**

**ಕರ್ಮನಿಷ್ಠಾಯಾ ಜ್ಞಾನನಿಷ್ಠಾಪ್ರಾಪ್ತಿಹೇತುತ್ವೇನ ಪುರುಷಾರ್ಥ ಹೇತುತ್ವಂ, ನ ಸ್ವಾತಂತ್ರ್ಯೇಣ | ಜ್ಞಾನನಿಷ್ಠಾ ತು ಕರ್ಮನಿಷ್ಠೋಪಾಯಲಬ್ಧಾತ್ಮಿಕಾ ಸತೀ ಸ್ವಾತಂತ್ರ್ಯೇಣ ಪುರುಷಾರ್ಥಹೇತು;, ಅನ್ಯಾನಪೇಕ್ಷಾ |**

ಕರ್ಮಯೋಗವು ಜ್ಞಾನಯೋಗದ ಪ್ರಾಪ್ತಿಗೆ ಕಾರಣವಾಗಿ ಅದರ ಮೂಲಕ ಪುರುಷಾರ್ಥವಾದ ಮೋಕ್ಷಕ್ಕೆ ಕಾರಣವಾಗಬಲ್ಲುದು, ಸ್ವತಂತ್ರವಾಗಿ ಅದು ಮೋಕ್ಷ ಕಾರಣವಲ್ಲ. ಜ್ಞಾನಯೋಗವು ಕರ್ಮಯೋಗದಿಂದ ಪ್ರಾಪ್ತವಾಗಿದ್ದರೂ ಸಾಕ್ಷಾತ್ತಾಗಿ ಮೋಕ್ಷಕ್ಕೆ ಕಾರಣವಾಗುತ್ತದೆ. ಅದಕ್ಕೆ ಇನ್ನೊಂದರ ಅಪೇಕ್ಷೆ ಇಲ್ಲ.

**353**

**ದೇಹಾದ್ಯಾತ್ಮಬುದ್ಧಿಃ ಅವಿದ್ವಾನ್ ರಾಗದ್ವೇಷಾದಿಪ್ರಯುಕ್ತೋ ಧರ್ಮಾಧರ್ಮಾದ್ಯನುಷ್ಠಾನಕೃತ್ |** **-ಗೀತಾ. 13-2**

ಯಾವನು ದೇಹಾದಿಗಳನ್ನು ಆತ್ಮವೆಂದು ತಿಳಿದಿರುವ ಅಜ್ಞಾನಿಯೋ ಅವನು ರಾಗದ್ವೇಷಗಳಿಂದ ಪ್ರೇರಿತನಾಗಿ ಪುಣ್ಯಕರ್ಮ, ಪಾಪಕರ್ಮ ಮುಂತಾದ್ದನ್ನು ಮಾಡುತ್ತಾನೆ.

**354**

**ತಸ್ಮಾತ್ ಸ್ವಾಭಾವಿಕ್ಯೈವ ಅವಿದ್ಯಯಾ ಯುಕ್ತಾಯ ರಾಗಾದಿದೋಷವತೇ ಯಥಾಭಿಮತಪುರುಷಾರ್ಥಸಾಧನಾಯ ಕರ್ಮ ಉಪದಿಶತ್ಯಗ್ರೇ |**

**-ಬೃಹ. 1-1-1**

ಆದ್ದರಿಂದ ಸ್ವಾಭಾವಿಕವಾದ ಅವಿದ್ಯೆಯಿಂದ ಕೂಡಿ ರಾಗಾದಿದೋಷ ಗ್ರಸ್ತನಾದವನಿಗೆ, ಅವನಿಗಿಷ್ಟವಾದ ಪುರುಷಾರ್ಥವನ್ನು ಸಾಧಿಸಿಕೊಳ್ಳಲೆಂದು ಉಪನಿಷತ್ತು ಆದಿಯಲ್ಲಿಯೇ ಕರ್ಮವನ್ನು ಉಪದೇಶಿಸುತ್ತದೆ.

**355**

**ತಸ್ಮಾತ್ ಯಜ್ಞಾದೀನಿ ಶಮದಮಾದೀನಿ ಚ ಯಥಾಶ್ರಮಂ ಸರ್ವಾಣ್ಯೇವ ಆಶ್ರಮಕರ್ಮಾಣಿ ವಿದ್ಯೋತ್ಪತ್ತೌ ಅಪೇಕ್ಷಿತವ್ಯಾನಿ |** **-ಸೂ.ಭಾ. 3-4-27**

ಆದ್ದರಿಂದ ಯಜ್ಞಾದಿ ನಿತ್ಯನೈಮಿತ್ತಿಕಕರ್ಮಗಳೂ ಶಮದಮಾದಿಜ್ಞಾನ ಸಾಧನಗಳೂ ಜ್ಞಾನೋತ್ಪತ್ತಿಗೆ ಆವಶ್ಯಕ. ಆಶ್ರಮಾನುಗುಣವಾಗಿ ಆ ಕರ್ಮಗಳೆಲ್ಲವನ್ನು ಮಾಡಲೇಬೇಕು.

**356**

**ಆತ್ಮತತ್ತ್ವವಿದಃ ಸಮ್ಯಗ್‌ದರ್ಶನವಿರುದ್ಧೋ ಮಿಥ್ಯಾದರ್ಶನಹೇತುಕಃ ಕರ್ಮಯೋಗಃ ಸ್ವಪ್ನೇಽಪಿ ಸಂಭಾವಯಿತುಂ ನ ಶಕ್ಯಃ |** **-ಗೀತಾ. ಭಾ. 5-1**

ಸಮ್ಯಗ್‌ದರ್ಶನಕ್ಕೆ ವಿರುದ್ಧವೂ ಮಿಥ್ಯಾಜ್ಞಾನದಿಂದ ಬರತಕ್ಕದ್ದೂ ಆದ ಕರ್ಮಯೋಗವು ಜ್ಞಾನಿಗೆ ಇದೆಯೆಂದು ಸ್ವಪ್ನದಲ್ಲಿಯೂ ಊಹಿಸಲು ಶಕ್ಯವಿಲ್ಲ.

**357**

**ನಿತ್ಯಸ್ಥ ಚ ಕರ್ಮಣೋ ವೇದಪ್ರಮಾಣಬೋಧ್ಯತ್ವಾತ್ ಫಲೇನ ಭವಿತವ್ಯಮ್ | ಅನ್ಯಥಾ ವೇದಸ್ಯ ಆನರ್ಥಕ್ಯಪ್ರಸಂಗಾತ್ |** **-ಗೀತಾ. 16 ಪೀಠಿಕೆ**

ನಿತ್ಯಕರ್ಮವೂ ವೇದಪ್ರಮಾಣ ಬೋಧಿತವಾದ್ದರಿಂದ ಫಲವಿದ್ದೇ ಇರಬೇಕು. ಇಲ್ಲದಿದ್ದರೆ (ಕರ್ಮವಿಧಾಯಕ) ವೇದಭಾಗವು ಅನರ್ಥಕವಾಗಿ ಬಿಟ್ಟೀತು.

ಸಂಧ್ಯಾವಂದನೆ ಮುಂತಾದ ನಿತ್ಯವಿಧಿಗೆ ಪ್ರಯೋಜನವೇನೂ ಇಲ್ಲವೆಂದೂ ಆದರೆ ಅದನ್ನು ಆಚರಿಸದಿದ್ದರೆ ಪಾಪ ಬರುತ್ತದೆಯೆಂದೂ ಮೀಮಾಂಸಕರು ಹೇಳುತ್ತಾರೆ. ಆದರೆ ಆಚಾರ್ಯರು ನಿತ್ಯವಿಧಿಗೂ ಪುಣ್ಯಫಲವಿದೆಯೆಂದು ಸಾಧಿಸಿದ್ದಾರೆ. ಅದನ್ನು ನಿಷ್ಕಾಮವಾಗಿ ಆಚರಿಸಿದರೆ ಚಿತ್ತಶುದ್ಧಿಯಾಗಿ ಕಾಲಕ್ರಮದಲ್ಲಿ ಜ್ಞಾನೋತ್ಪತ್ತಿಗೆ ಉಪಕಾರವಾಗುತ್ತದೆ.

**358**

**ಅಜ್ಞಾನಮೇವ ಹಿ ಕರ್ಮಯೋಗೋ ನ ಜ್ಞಾನಿನಾಮ್ | ಜ್ಞಾನಿನಾಂ ತು ಗುಣೈರಚಾಲ್ಯಮಾನಾನಾಂ ಸ್ವತಃ ಚಲನಾಭಾವಾತ್ ಕರ್ಮಯೋಗೋ ನೋಪಪದ್ಯತೇ |**

**-ಗೀತಾ ಭಾ. 3-5**

ಕರ್ಮಯೋಗವು ಅಜ್ಞಾನಿಗಳಿಗೇ ಹೊರತು ಜ್ಞಾನಿಗಳಿಗಲ್ಲ. ಗುಣಗಳಿಂದ ಅಲುಗಾಡಲ್ಪಡದಿರುವ ಜ್ಞಾನಿಗಳಿಗಾದರೋ ಸ್ವಸ್ವರೂಪದಲ್ಲಿಯೂ ಚಲನೆಯಿಲ್ಲ. ಆದ್ದರಿಂದ ಕರ್ಮಯೋಗವು ಅವರಿಗೆ ಕೂಡುವುದಿಲ್ಲ.

**359**

**ಯಾವತ್ ಧ್ಯಾನಾರೋಹಣಾಸಮರ್ಥಃ ತಾವತ್ ಗೃಹಸ್ಥೇನಾಧಿಕೃತೇನ ಕರ್ತವ್ಯಂ ಕರ್ಮ |**

**-ಗೀತಾ 6 (ಉಪೋದ್ಘಾತ)**

ಧ್ಯಾನದ ಮೆಟ್ಟಿಲನ್ನು ಏರುವ ಸಾಮರ್ಥ್ಯವು ಬರುವವರೆಗೂ ಅಧಿಕೃತನಾದ ಗೃಹಸ್ಥನು ಕರ್ಮವನ್ನಾಚರಸಬೇಕು.

**360**

**ಯದ್ಯಪಿ ಶಾಸ್ತ್ರಾವಗತಂ ನಿತ್ಯಂ ಕರ್ಮ, ತಥಾಪ್ಯವಿದ್ಯಾವತ ಏವ ಭವತಿ |**

**-ಗೀತಾ 18-66**

ನಿತ್ಯಕರ್ಮವೂ ಶಾಸ್ತ್ರ ಬೋಧಿತವಾಗಿರುವುದು ಹೌದು, ಆದರೆ ಅದು ಅವಿದ್ಯಾವಂತನಿಗೆ ಮಾತ್ರ ಇರುತ್ತದೆ.

**361**

**ನಿತ್ಯಸ್ಯ ಚ ಕರ್ಮಣಃ ವೇದಪ್ರಮಾಣಾವಬುದ್ಧತ್ವಾತ್ ಫಲೇನ ಭವಿತವ್ಯಮಿತ್ಯವೋಚಾಮ, ಅನ್ಯಥಾ ವೇದಸ್ಯ ಆನರ್ಥಕ್ಯ ಪ್ರಸಂಗಾತ್ ಇತಿ |**

**-ಗೀತಾ. 16 ಪೀಠಿಕೆ**

ನಿತ್ಯಕರ್ಮವನ್ನಾಚರಿಸಬೇಕೆಂದು ವೇದ ಪ್ರಮಾಣದಿಂದ ಗೊತ್ತಾಗಿರುವ ಕಾರಣ ನಿತ್ಯಕರ್ಮಕ್ಕೆ ಫಲವಿರಲೇಬೇಕು ಹೇಳಿದ್ದೇವೆ. ಇಲ್ಲದಿದ್ದರೆ ವೇದವು ಅನರ್ಥಕವೆಂದು ಆಗಿಬಿಟ್ಟೀತು.

**362**

**ನಿತ್ಯಾನಾಂ ಕರ್ಮಣಾಂ ಫಲವತ್ತ್ವೇ ಭಗವದ್ವಚನಂ ಪ್ರಮಾಣಮ್ |**

**-ಗೀತಾ 18-9**

ನಿತ್ಯಕರ್ಮಗಳಿಗೆ ಫಲವಿದೆಯೆಂಬುದಕ್ಕೆ ಭಗವಂತನ ವಚನವೇ ಪ್ರಮಾಣವಾಗಿದೆ.

ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ (ಗೀತಾ 18-6) ಎಂಬಲ್ಲಿ ಫಲಾಪೇಕ್ಷೆಯನ್ನು ಬಿಟ್ಟು ಈ ನಿತ್ಯಕರ್ಮಗಳನ್ನು ಮಾಡಬೇಕೆಂದು ಹೇಳಿದ್ದರಿಂದ ನಿತ್ಯ ಕರ್ಮಗಳಿಗೆ ಫಲವಿದೆಯೆಂದು ಗೊತ್ತಾಗುತ್ತದೆ.

ಬೃಹ. ಭಾ. 3-3-1ರಲ್ಲಿ ನಿತ್ಯಕರ್ಮಕ್ಕೆ ಫಲವಿದೆಯೆಂದು ಶಾತಪಥ ಶ್ರುತಿಯನ್ನು ಉದಾಹರಿಸಿದೆ.

**363**

**ವಿದುಷಾ ಕ್ರಿಯಮಾಣಂ ಕರ್ಮ ಪರಮಾರ್ಥತಃ ಅಕರ್ಮೈವ ತಸ್ಯ ನಿಷ್ಕ್ರಿಯಾತ್ಮದರ್ಶನಸಂಪನ್ನತ್ವಾತ್ |** **-ಗೀತಾ 4-20**

ಜ್ಞಾನಿಯಾದವನು ಮಾಡುವ ಕರ್ಮವೆನ್ನುವುದು ನಿಜವಾಗಿ ಕರ್ಮವೇ ಅಲ್ಲ. ಏಕೆಂದರೆ, ಅವನು ನಿಷ್ಕ್ರಿಯನಾದ ಆತ್ಮನೇ ತಾನೆಂಬ ನಿಶ್ಚಯದಿಂದ ಕೂಡಿರುತ್ತಾನೆ.

ಜ್ಞಾನಿಯೂ ಸಹ ಭಿಕ್ಷಾಟನೆ ಮಾಡಬಹುದು. ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುತ್ತಿರಬಹುದು. 'ನಾನು ಕರ್ತ' ಎಂಬ ಭಾವನೆ ಇಲ್ಲದ್ದರಿಂದ ಅದು ಕರ್ಮವಲ್ಲ.

**364**

**ಜ್ಞಾನಾಗ್ನಿದಗ್ಧಕರ್ಮತ್ವಾತ್ ತದೀಯಂ ಕರ್ಮ ಅಕರ್ಮೈವ ಸಂಪದ್ಯತೇ |**
**-ಗೀತಾ 4-19**

ಜ್ಞಾನವೆಂಬ ಬೆಂಕಿಯಿಂದ ಜ್ಞಾನಿಯ ಕರ್ಮವು ಸುಟ್ಟು ಹೋಗಿರುವುದರಿಂದ ಅವನ ಕರ್ಮವು ಅಕರ್ಮವೇ ಆಗಿರುತ್ತದೆ.

ಜ್ಞಾನಿಯು ಲೋಕಸಂಗ್ರಹಕ್ಕಾಗಿ ಮೊದಲಿನಂತೆ ಕರ್ಮದಲ್ಲಿ ತೊಡಗಿದ್ದರೂ ಅವನು ಏನನ್ನೂ ಮಾಡುತ್ತಿಲ್ಲವೆಂದೇ ತಿಳಿಯಬೇಕು.

**365**

**ಮುಕ್ತೇಷುವತ್ ಪ್ರವೃತ್ತಫಲತ್ವಾತ್ ತದ್ಧೇತುಕಸ್ಯ ಕರ್ಮಣಃ |**
**-ಬೃಹ. 1-4-10**

ಪ್ರಾರಬ್ಧ ಕರ್ಮವು ಧನುಸ್ಸಿನಿಂದ ಹೊರಟ ಬಾಣವಿದ್ದಹಾಗೆ. ವೇಗವು ಕ್ಷಯಿಸಿದ ಮೇಲೆಯೇ ಬಾಣವು ಬೀಳುವಂತೆ, ಕರ್ಮವು ದೇಹಕಾರ್ಯವನ್ನು ಮುಗಿಸದೆ ನಾಶವಾಗುವುದಿಲ್ಲ. (ಆತ್ಮಜ್ಞಾನವಾದ ಮೇಲೂ ದೇಹ ಇರಬಹುದು)

**366**

**ಅವಿದ್ಯಾದೋಷವತ ಏವ ಕರ್ಮಾಣಿ ವಿಧೀಯಂತೇ, ನಾದ್ವೈತ ಜ್ಞಾನವತಃ |**
**-ಛಾಂ. ಉಪೋದ್ಘಾತ**

ಅವಿದ್ಯಾದೋಷವುಳ್ಳವನಿಗೆ ಮಾತ್ರ ಕರ್ಮಗಳು ವಿಹಿತವಾಗಿವೆ. ಅದ್ವೈತ ಬ್ರಹ್ಮಜ್ಞಾನವಾದವನಿಗಲ್ಲ.

**367**

**ಯದಿ ಅನಾತ್ಮಜ್ಞಸ್ತ್ವಂ ತದಾ ಆತ್ಮಶುದ್ಧ್ಯರ್ಥಂ ತತ್ತ್ವವಿತ್ ಚೇತ್ ಲೋಕಸಂಗ್ರಹಾರ್ಥಮ್ |** **-ಗೀತಾ. 4-15**

ನೀನು ಆತ್ಮಜ್ಞಾನಿಯಲ್ಲವಾದರೆ ಚಿತ್ತಶುದ್ಧ್ಯರ್ಥವಾಗಿ ಕರ್ಮವನ್ನು ಮಾಡು. ತತ್ತ್ವಜ್ಞಾನಿಯಾದರೆ ಲೋಕಸಂಗ್ರಹಾರ್ಥವಾಗಿ ಮಾಡು.

ಪರಮೇಶ್ವರನೇ ಮಾಡಿಸುತ್ತಾನೆ-ಎಂಬ ಭಾವನೆಯಿಂದ ಕರ್ಮಯೋಗಿಗಳು ಕರ್ತವ್ಯವನ್ನು ಮಾಡಲೇಬೇಕು. ಜ್ಞಾನಿಗಳಾದರೋ ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡಿದರೂ ಮಾಡಬಹುದು. ಅಥವಾ ಬಿಡಬಹುದು.



# ೧೫ ವರ್ಣಾಶ್ರಮಧರ್ಮ

ಶ್ರೀ ಶಂಕರಭಗವತ್ಪಾದರ ಕಾಲದಲ್ಲಿ ವರ್ಣಾಶ್ರಮ ವ್ಯವಸ್ಥೆಯು ಭರತಖಂಡದಲ್ಲಿ ಭದ್ರವಾಗಿ ನೆಲೆಸಿತ್ತು. ವೈದಿಕಧರ್ಮನಿಷ್ಠರಾದ ಆಚಾರ್ಯರು ವೇದಧರ್ಮದ ಪೋಷಕರಾಗಿ ತಮ್ಮ ಗ್ರಂಥಗಳನ್ನು ರಚಿಸಿರುವುದು ಸಹಜವೇ ಆಗಿದೆ. ಸಾವಿರಾರು ವರ್ಷಗಳಿಂದ ಈ ವ್ಯವಸ್ಥೆಯು ಪ್ರಜೆಗಳಿಗೆ ಸಂಮತವಾಗಿತ್ತು. ಸಮಾಜವು ಇದನ್ನು ಒಪ್ಪಿಕೊಂಡು ಅಂಗೀಕರಿಸಿತ್ತು. ರಾಜರು ಈ ವ್ಯವಸ್ಥೆಯನ್ನು ಪೋಷಿಸಿಕೊಂಡು ಬಂದಿದ್ದರು-ಎಂಬುದರಲ್ಲಿ ಸಂದೇಹವೇನೂ ಇರುವುದಿಲ್ಲ. ಈ ಧರ್ಮವನ್ನು ಪಾಲಿಸದವನು ನಾಸ್ತಿಕ-ಅಸಾಧುಮನುಷ್ಯನೆಂದೂ ಲೋಕನಿಂದೆಗೆ ಪಾತ್ರನಾಗುತ್ತಿದ್ದನು. ಬ್ರಹ್ಮಕ್ಷತ್ರ ಧರ್ಮಗಳನ್ನು ಸರಿಯಾಗಿ ಪಾಲಿಸಿಕೊಂಡರೆ ಅವು ಜಗತ್ತನ್ನೇ ಪರಿಪಾಲಿಸಬಲ್ಲವು-ಎಂದು ಆಚಾರ್ಯರು ಧೀರವಾಣಿಯಿಂದ ನುಡಿದಿದ್ದಾರೆ. ಜ್ಞಾನಬಲ, ಬಾಹುಬಲಗಳೆರಡು ರಾಜ್ಯರಕ್ಷಣೆಗೆ ಅತ್ಯಾವಶ್ಯಕಗಳೆಂದು ಅಭಿಪ್ರಾಯ. ವಾಣಿಜ್ಯ, ಕೃಷಿ, ಕಾರ್ಮಿಕವೃತ್ತಿ, ದುಡಿತ-ಇವುಗಳಿಂದಲೇ ಲೋಕವ್ಯವಹಾರವು ನಡೆಯತಕ್ಕದ್ದು. ವ್ಯವಸ್ಥಿತವಾಗಿ ಇವನ್ನು ನಡೆಸಿಕೊಂಡು ಹೋಗಲು ಬುದ್ಧಿಶಕ್ತಿ, ಅಧಿಕಾರಶಕ್ತಿಗಳು ಬೇಕೆಂಬುದು ತ್ರೈಕಾಲಿಕ ಸತ್ಯವಾಗಿದೆ.

'ತ್ರೈಗುಣ್ಯ ವಿಷಯಾ ವೇದಾಃ' ಎಂಬಂತೆ ವೇದದ ಕರ್ಮಕಾಂಡಗಳೂ, ಧರ್ಮಶಾಸ್ತ್ರಾದಿಗಳೂ ಪ್ರವೃತ್ತಿ ಮಾರ್ಗವನ್ನು ಪೋಷಿಸಿಕೊಂಡು ಬರುತ್ತವೆ. ವ್ಯಾವಹಾರಿಕ ಸತ್ಯವನ್ನು ಎಲ್ಲರೂ ಕಾಣುತ್ತಲೇ ಇದ್ದಾರೆ. ಭೋಗಾಭಿಲಾಷೆಯು ಮನುಷ್ಯರಿಗೆ ಸ್ವಾಭಾವಿಕವಾಗಿ ಬಂದಿದೆ. ರಾಗದ್ವೇಷಾದಿಗಳನ್ನು ಕಳಚಿಹಾಕುವುದೇನೂ ಸುಲಭವಲ್ಲ. ಪ್ರಜೆಗಳಲ್ಲಿ ಕೋಟಿ ಕೋಟಿ ಜನರಿಗೆ ಪ್ರವೃತ್ತಿ ಮಾರ್ಗವೇ ಹಿಡಿಸುತ್ತದೆ. ಅಂಥವರಿಗಾಗಿ ವರ್ಣಾಶ್ರಮಗಳ ವ್ಯವಸ್ಥೆ. ಧರ್ಮದಿಂದ ಅರ್ಥಕಾಮಗಳನ್ನು ಸಂಪಾದಿಸಿ ಭೋಗಿಸಿರಿ ಎಂಬುದು ಪ್ರವೃತ್ತಿ ಧರ್ಮದ ಸತ್ಯಬೋಧೆಯಾಗಿದೆ. ಆಚಾರ್ಯರು ಅದನ್ನೇ ಅಲ್ಲಲ್ಲಿ ಒತ್ತಿ ಹೇಳಿದ್ದಾರೆ. ಅವರ ಮುಖ್ಯ ದೃಷ್ಟಿ ವೇದಾಂತದ ಪರಮ ತತ್ತ್ವವನ್ನು ಬೋಧಿಸುವುದರ ಕಡೆಗೇ. ಆದ್ದರಿಂದ, ನಿವೃತ್ತಿ ಧರ್ಮವನ್ನು ವಿಶೇಷವಾಗಿ ಪ್ರತಿಪಾದಿಸಬೇಕಾದದ್ದು ಅವರ ಕರ್ತವ್ಯವಾಯಿತು. 'ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ' ಎಂದು ಭಗವದ್ಗೀತೆಯಲ್ಲಿ ಹೇಳಿದಂತೆ, ಲಕ್ಷಾಂತರ ಜನರಲ್ಲಿ ಯಾರೋ ಒಬ್ಬರಿಗೆ ತತ್ತ್ವಜ್ಞಾನದ ಕಡೆಗೆ ಮನಸ್ಸು ತಿರುಗಬಹುದು. ಅಂಥವರಿಗೆ ಪರಮಾರ್ಥವನ್ನು ತಿಳಿಸಿಕೊಡುವುದಕ್ಕಾಗಿ ಆಚಾರ್ಯರು ಕೃಪೆಯಿಂದ ತಮ್ಮ ಗ್ರಂಥಗಳನ್ನು ರಚಿಸಿದರು. "ಶಂಕರಾಚಾರ್ಯರು ಬರಿಯ ವೈರಾಗ್ಯವನ್ನು ಬೋಧಿಸಿದರು. ಅದರಿಂದ

ಭಾರತೀಯರು ನಿರ್ವೀರ್ಯರಾದರು" ಎಂದು ಹೇಳುವುದು ಮಿಥ್ಯಾಪಾದನೆ. ಅಪ್ರಬುದ್ಧರಾದ ಬಾಲಿಶರು ಆಡುವ ಅರ್ಥಶೂನ್ಯವಾದ ಮೂರ್ಖಪ್ರಲಾಪ. ನಮ್ಮ ಸಮಸ್ತ ದಾರ್ಶನಿಕರು ಬೋಧಿಸಿರುವುದು ವೈರಾಗ್ಯವನ್ನೇ, ಅದು ತತ್ತ್ವಜಿಜ್ಞಾಸುವಿಗಾಗಿ, ಸರ್ವರಿಗಾಗಿ ಅಲ್ಲ. ಸಮಸ್ತರೂ ವೈದ್ಯರಾಗಬೇಕೆಂದು ವೈದ್ಯಶಾಸ್ತ್ರವನ್ನು ಬರೆಯುವುದಿಲ್ಲ. ನಾಟ್ಯಶಾಸ್ತ್ರವನ್ನೂ , ಸಂಗೀತ ಶಾಸ್ತ್ರವನ್ನೂ ಬೋಧಿಸತಕ್ಕವರಿಗೆ ಸಮಸ್ತ ಪ್ರಜೆಗಳೂ ನಾಟ್ಯವನ್ನಾಡುತ್ತ ಸಂಗೀತ ಹೇಳುತ್ತ ಇರಲೆಂಬ ಉದ್ದೇಶವಿರುತ್ತದೆಯೇನು?

ಪ್ರಾಸಂಗಿಕವಾಗಿ ಬಂದ ಆಚಾರ್ಯರ ಕೆಲವು ಸೂಕ್ತಿಗಳನ್ನು ಗಮನಿಸಿದರೆ ಅವರಿಗೆ ಧರ್ಮದ ವಿಷಯದಲ್ಲಿ ಎಷ್ಟು ಕಳಕಳಿ ಇತ್ತೆಂದೂ ವೈದಿಕ ಧರ್ಮದಲ್ಲಿ ಎಷ್ಟು ಗೌರವಬುದ್ಧಿ ಇತ್ತೆಂದೂ ಮನವರಿಕೆಯಾಗುತ್ತದೆ.

**368**

**ಬ್ರಹ್ಮಕ್ಷತ್ರೇ ಪರಿಪಾಲಿತೇ ಜಗತ್ ಪರಿಪಾಲಯಿತುಮ್ ಅಲಮ್ |**

**-ಗೀತಾ 4-1**

ಬ್ರಾಹ್ಮಣ್ಯ ಮತ್ತು ಕ್ಷತ್ರಿಯ ಧರ್ಮಗಳನ್ನು ಪರಿಪಾಲಿಸಿರೆ ಅವು ಜಗತ್ತನ್ನೇ ಪಾಲಿಸುವುದಕ್ಕೆ ಸಮರ್ಥವಾಗುತ್ತವೆ.

**369**

**ಮನುಷ್ಯಲೋಕೇ ಹಿ ಶಾಸ್ತ್ರಾಧಿಕಾರಃ |** **-ಗೀತಾ . 4-12**

ಮನುಷ್ಯ ಲೋಕದಲ್ಲಿ ಮಾತ್ರ ಶಾಸ್ತ್ರೋಕ್ತ ವರ್ಣಾಶ್ರಮಧರ್ಮದ ಅಧಿಕಾರವಿದೆ.

ವರ್ಣಾಶ್ರಮಧರ್ಮಗಳು ಆಚರಣೆ ಮನುಷ್ಯ ಲೋಕದಲ್ಲಿ ಮಾತ್ರ. ವರ್ಣಾಶ್ರಮಧರ್ಮಗಳು ದೇವತೆಗಳಿಗಿಲ್ಲ.

**370**

**ಸರ್ವಪ್ರಾಣಿನಾಂ ಶೋಕಮೋಹಾದಿದೋಷಾವಿಷ್ಟಚೇತಸಾಂ ಸ್ವಭಾವತ ಏವ ಸ್ವಧರ್ಮಪರಿತ್ಯಾಗಃ ಪ್ರತಿಷಿದ್ಧಸೇವಾ ಚ ಸ್ಯಾತ್ |** **-ಗೀತಾ -ಪೀಠಿಕೆ**

ಶೋಕಮೋಹಾದಿದೋಷಗಳಿಂದ ಯಾರ ಮನಸ್ಸು ಆವಿಷ್ಟವಾಗಿರುತ್ತದೆಯೋ

ಅಂತಹ ಸಕಲ ಪ್ರಾಣಿಗಳಿಗೂ ಸ್ವಧರ್ಮವನ್ನು ಬಿಡುವುದು ಮತ್ತು ನಿಷಿದ್ಧವಾದ ಆಚರಣೆಯಲ್ಲಿ ತೊಡಗುವುದು ಸಹಜವಾಗಿರುತ್ತದೆ.

**371**

**ಯಃ ನಾಸ್ತಿ ಬ್ರಹ್ಮ ಇತಿ ಮನ್ಯತೇ ಸಃ ಸರ್ವಸ್ಯೈವ ಸನ್ಮಾರ್ಗಸ್ಯ ವರ್ಣಾಶ್ರಮಾದಿವ್ಯವಸ್ಥಾಲಕ್ಷಣಸ್ಯ ಅಶ್ರದ್ದಧಾನತಯಾ ನಾಸ್ತಿತ್ವಂ ಪ್ರತಿಪದ್ಯತೇ ಬ್ರಹ್ಮಪ್ರತಿಪತ್ತ್ಯರ್ಥತ್ವಾತ್ ತಸ್ಯ | ಅತಃ ನಾಸ್ತಿಕಂ ಸಃ ಅಸನ್ ಅಸಾಧುರುಚ್ಯತೇ ಲೋಕೇ |**

**-ತೈತ್ತಿ. ಆನಂದ-6**

ಯಾವಾತನು ಬ್ರಹ್ಮವು ಇಲ್ಲವೆಂದು ತಿಳಿಯುತ್ತಾನೋ ಅವನು ವರ್ಣಾಶ್ರಮಾದಿವ್ಯವಸ್ಥಾರೂಪವಾದ ಸಕಲಸನ್ಮಾರ್ಗದಲ್ಲಿಯೂ ಶ್ರದ್ಧೆಯಿಲ್ಲದವನಾಗುತ್ತಾನೆ. ಆ ಸನ್ಮಾರ್ಗವು ('ನಾಸ್ತಿ') ಇಲ್ಲವೆಂದು ಭಾವಿಸುತ್ತಾನೆ. ಆ ಸನ್ಮಾರ್ಗವು ಬ್ರಹ್ಮಜ್ಞಾನಕ್ಕಾಗಿಯೇ ಇರುತ್ತದೆ. ಆದ್ದರಿಂದ ನಾಸ್ತಿಕನಾದ ಅವನು ಅಸಾಧು ಎಂದು ಲೋಕದಲ್ಲಿ ಹೇಳಿಸಿಕೊಳ್ಳುತ್ತಾನೆ.

**372**

**ತಾರ್ಕಿಕೈಸ್ತು ಪರಿತ್ಯಕ್ತಾಗಮಬಲೈಃ ಅಸ್ತಿ, ನಾಸ್ತಿ, ಕರ್ತಾ, ಅಕರ್ತಾ ಇತ್ಯಾದಿ ವಿರುದ್ಧಂ ಬಹುತರ್ಕಯದ್ಭಿಃ ಆಕುಲೀಕೃತಃ ಶಾಸ್ತ್ರಾರ್ಥ |**

**-ಬೃಹ. 1-4-6**

ಶಾಸ್ತ್ರಬಲವಿಲ್ಲದ ತಾರ್ಕಿಕರಾದರೋ ಆತ್ಮನು ಇದ್ದಾನೆ, ಇಲ್ಲ, ಅವನು ಕರ್ತಾ, ಕರ್ತನಲ್ಲ-ಇತ್ಯಾದಿ ರೂಪವಾಗಿ ಬಹಳ ತರ್ಕಗಳನ್ನೆಬ್ಬಿಸಿ ಶಾಸ್ತ್ರಾರ್ಥವನ್ನು ಕದಡಿಬಿಟ್ಟಿದ್ದಾರೆ.

**373**

**ಬ್ರಾಹ್ಮಣತ್ವಸ್ಯ ಹಿ ರಕ್ಷಣೇನ ರಕ್ಷಿತಃ ಸ್ಯಾತ್ ವೈದಿಕೋ ಧರ್ಮಃ | ತದಧೀನತ್ವಾತ್ ವರ್ಣಾಶ್ರಮಭೇದಾನಾಮ್ |** **-ಗೀತಾ -ಪೀಠಿಕೆ**

ಬ್ರಾಹ್ಮಣತ್ವವನ್ನು ಕಾಪಾಡಿಕೊಂಡರೆ ವೈದಿಕಧರ್ಮದ ರಕ್ಷಣೆಯಾಗುತ್ತದೆ. ಏಕೆಂದರೆ ವರ್ಣಾಶ್ರಮಭೇದಗಳು ಬ್ರಾಹ್ಮಣತ್ವಕ್ಕೆ ಅಧೀನವಾಗಿವೆ.

**374**

**ಅಯಂ ತು ಏವಂಭೂತಃ ಏತಸ್ಯಾಮವಸ್ಥಾಯಾಂ ಮುಖ್ಯೋ ಬ್ರಾಹ್ಮಣಃ | ಪ್ರಾಗೇತಸ್ಮಾತ್ ಬ್ರಹ್ಮರೂಪಾವಸ್ಥಾನಾತ್ ಗೌಣಮಸ್ಯ ಬ್ರಾಹ್ಮಣ್ಯಮ್**
**-ಬೃಹ. 4-4-23**

ಬ್ರಹ್ಮಜ್ಞಾನವನ್ನು ಪಡೆದು ಸ್ಥಿತಪ್ರಜ್ಞಾವಸ್ಥೆಯಲ್ಲಿರತಕ್ಕವನು ಮುಖ್ಯವಾದ ಬ್ರಾಹ್ಮಣನೆನಿಸುತ್ತಾನೆ. ಬ್ರಹ್ಮಸ್ವರೂಪಾವಸ್ಥೆಯನ್ನು ಪಡೆಯಲು ಅನುಕೂಲವಾದ ಬ್ರಾಹ್ಮಣಜನ್ಮ ಗೌಣವಾದ ಬ್ರಾಹ್ಮಣ್ಯ.

**375**

**ಯಸ್ಮಾತ್ ಬ್ರಹ್ಮಣಾ ಅತಿಶಯೇನ ಸೃಷ್ಟಂ ಕ್ಷತ್ರಂ ತಸ್ಮಾತ್ ಕ್ಷತ್ರಾತ್ ಪರಂ ನಾಸ್ತಿ ಬ್ರಾಹ್ಮಣಜಾತೇರಪಿ ನಿಯಂತೃ |** **-ಬೃಹ. 1-4-11**

ಬ್ರಹ್ಮವು ಪ್ರಯತ್ನಾತಿಶಯದಿಂದ ಕ್ಷತ್ರಿಯ ಜಾತಿಯನ್ನು ಸೃಷ್ಟಿಸಿತು. ಆದ್ದರಿಂದ ಬ್ರಾಹ್ಮಣಜಾತಿಯನ್ನು ನಿಯಮಿಸತಕ್ಕದ್ದು ಕ್ಷತ್ರಿಯ ಜಾತಿಗಿಂತ ಇನ್ನೊಂದಿಲ್ಲ.

ಕ್ಷತ್ರಿಯನು ತನ್ನ ಅಧಿಕಾರಶಕ್ತಿಯಿಂದ ಬ್ರಾಹ್ಮಣನನ್ನು ಧರ್ಮದ ಗೆರೆಯೊಳಗಿರುವಂತೆ ನಿಯಮಿಸಬಲ್ಲನು. ಧರ್ಮವನ್ನು ಮೀರಿದ ಬ್ರಾಹ್ಮಣನನ್ನು ದಂಡಿಸಲು ರಾಜನಿಗೆ ಅಧಿಕಾರ ಉಂಟು.

**376**

**ಪ್ರಾಣಿನಾಂ ಸುಖಪ್ರಾಪ್ತಯೇ ಧರ್ಮೋ ವಿಧೀಯತೇ | ದುಃಖ ಪರಿಹಾರಾಯ ಚಾಧರ್ಮಃ ಪ್ರತಿಷಿದ್ಧ್ಯತೇ |** **-ಬ್ರ.ಸೂ.ಭಾ. 1-3-30**

ಪ್ರಾಣಿಗಳಿಗೆ ಸುಖವು ದೊರಕಲೆಂದು ಧರ್ಮವನ್ನು ವಿಧಿಸಲಾಗಿದೆ. ದುಃಖವು ಬರದಿರಲೆಂದು ಅಧರ್ಮವನ್ನು ನಿಷೇಧಿಸಲಾಗಿದೆ.

**377**

**ದ್ವಿವಿಧೋ ಹಿ ವೇದೋಕ್ತೋ ಧರ್ಮಃ, ಪ್ರವೃತ್ತಿ ಲಕ್ಷಣೋ ನಿವೃತ್ತಿ ಲಕ್ಷಣಶ್ಚ, ಜಗತಃ ಸ್ಥಿತಿಕಾರಣಮ್ | ಪ್ರಾಣಿನಾಂ ಸಾಕ್ಷಾದಭ್ಯುದಯ ನಿಃಶ್ರೇಯಸಹೇತುರ್ಯಃ**

**ಸ ಧರ್ಮೋ ಬ್ರಾಹ್ಮಣಾದ್ಯೈರ್ವರ್ಣೈಭಿಃ ಆಶ್ರಮಿಭಿಶ್ಚ ಶ್ರೇಯೋऽರ್ಥಿಭಿರನುಷ್ಠೀಯಮಾನಃ |**
**-ಗೀತಾ-ಪೀಠಿಕೆ**

ವೇದೋಕ್ತವಾದ ಧರ್ಮವು ಎರಡು ವಿಧ. ಒಂದು ಪ್ರವೃತ್ತಿರೂಪವಾದದ್ದು. ಇನ್ನೊಂದು ನಿವೃತ್ತಿರೂಪವಾದದ್ದು. ಈ ಧರ್ಮವು ಜಗತ್ತಿನ ಸ್ಥಿತಿಗೆ ಕಾರಣವಾಗಿದೆ.

ಪ್ರಾಣಿಗಳಿಗೆ ಸಾಕ್ಷಾತ್ತಾಗಿ ಅಭ್ಯುದಯ ನಿಃಶ್ರೇಯಸವನ್ನು ಉಂಟುಮಾಡತಕ್ಕದ್ದು ಧರ್ಮ. ಇದನ್ನು ಬ್ರಾಹ್ಮಣನೇ ಮೊದಲಾದ ವರ್ಣಗಳೂ ಬ್ರಹ್ಮಚಾರೀ ಮೊದಲಾದ ಆಶ್ರಮಿಗಳೂ ಆಚರಿಸುತ್ತಿದ್ದಾರೆ.

ಅಭ್ಯುದಯ = ಈ ಲೋಕದಲ್ಲಿ ಧನ ಗೃಹಾದಿ ಪ್ರಾಪ್ತಿ. ನಿಃಶ್ರೇಯಸ = ಮೋಕ್ಷ. ಪ್ರವೃತ್ತಿರೂಪವಾದ ಧರ್ಮವು ಸಾಕ್ಷಾತ್ತಾಗಿ ಅಭ್ಯುದಯಕ್ಕೂ, ನಿವೃತ್ತಿರೂಪ ಧರ್ಮವು ಮೋಕ್ಷಕ್ಕೂ ಕಾರಣವೆಂದು ತಿಳಿಯಬೇಕು.

**378**

**ಯಥಾ ವೃಕ್ಷಸ್ಯ ಪರಿರಕ್ಷಣಾರ್ಥಾನಿ ಪರ್ಣಾನಿ ತಥಾ ವೇದಾಃ ಸಂಸಾರ ವೃಕ್ಷಪರಿರಕ್ಷಣಾರ್ಥಾಃ | ಧರ್ಮಾಧರ್ಮತದ್ಧೇತುಫಲಪ್ರಕಾಶನಾರ್ಥತ್ವಾತ್ |**
**-ಗೀತಾ 15-1**

ಮರದ ರಕ್ಷಣೆಗಾಗಿ ಎಲೆಗಳು ಹೇಗಿರುತ್ತವೆಯೋ ಹಾಗೆ ಸಂಸಾರವೃಕ್ಷದ ರಕ್ಷಣೆಗಾಗಿ ವೇದಗಳು. ಏಕೆಂದರೆ ಧರ್ಮ ಯಾವುದು, ಅಧರ್ಮ ಯಾವುದು, ಅವುಗಳಿಂದ ಆಗುವ ಫಲಗಳು ಯಾವುವು-ಎಂಬುದನ್ನು ವೇದಗಳು ತಿಳಿಸಿಕೊಡುತ್ತವೆ.

"ಊರ್ಧ್ವಮೂಲಮಧಃಶಾಖಂ" ಎಂಬ ಶ್ಲೋಕದಲ್ಲಿ ಸಂಸಾರವೆಂಬ ಅಶ್ವತ್ಥವೃಕ್ಷಕ್ಕೆ ವೇದಗಳು ಎಲೆಗಳು ಎಂದು ಹೇಳಿದ್ದಾರೆ. ಅದರ ಉಪಪಾದನೆ ಇದು. ಸಂಸಾರವು ವ್ಯವಸ್ಥಿತವಾಗಿ ನಡೆಯಲು ವಿಧಿನಿಷೇಧಾತ್ಮಕವಾದ ವೇದವು ಕಾರಣವೆಂದು ಅಭಿಪ್ರಾಯ.

**379**

**ಗುಣಾಧಿಕೈರ್ಹಿ ಗೃಹೀತೋऽನುಷ್ಠೀಯಮಾನಶ್ಚ ಧರ್ಮಃ ಪ್ರಚಯಂ ಗಮಿಷ್ಯತಿ |**
**-ಗೀತಾ-ಪೀಠಿಕೆ**

ಅಧಿಕಗುಣಶಾಲಿಗಳು ಧರ್ಮವನ್ನು ತಿಳಿದುಕೊಂಡು ಆಚರಿಸಿದರೆ ಆ ಧರ್ಮವು ವರ್ಧಿಸುತ್ತದೆ.

**380**

**ಅಭ್ಯುದಯಫೋऽಪಿ ಯಃ ಪ್ರವೃತ್ತಿ ಲಕ್ಷಣೋ ಧರ್ಮೋ ವರ್ಣಾನ್ ಆಶ್ರಮಾಂಶ್ಚ ಉದ್ದಿಶ್ಯ ವಿಹಿತಃ, ಸ ದೇವಾದಿಸ್ಥಾನ ಪ್ರಾಪ್ತಿ ಹೇತುರಪಿ ಸನ್, ಈಶ್ವರಾರ್ಪಣಬುದ್ಧ್ಯಾ ಅನುಷ್ಠೀಯಮಾನಃ ಸತ್ತ್ವಶುದ್ಧಯೇ ಭವತಿ ಫಲಾಭಿಸಂಧಿವರ್ಜಿತಃ |**

**-ಗೀತಾ ಅವತರಣಿಕೆ**

ಪ್ರವೃತ್ತಿರೂಪವಾದ ಧರ್ಮವು ವರ್ಣಾಶ್ರಮಗಳಿಗೆ ಅರ್ಥಕಾಮಗಳಿಗಾಗಿ ಶಾಸ್ತ್ರ ವಿಹಿತವಾಗಿ ಇರುವುದೇನೋ ಸರಿ. ಈ ಧರ್ಮವು ದೇವಾದಿ ಸ್ಥಾನವನ್ನು ಗಳಿಸಿಕೊಡತಕ್ಕದ್ದೂ ಹೌದು. ವಿಹಿತವಾದ ಈ ಕರ್ಮವನ್ನೇ ಪರಮೇಶ್ವರಾರ್ಪಣ ಬುದ್ಧಿಯಿಂದ ಯಾವ ಫಲವನ್ನೂ ಅಪೇಕ್ಷಿಸದೆ ಮಾಡುತ್ತಿದ್ದರೆ ಚಿತ್ತಶುದ್ಧಿಯನ್ನುಂಟು ಮಾಡುತ್ತದೆ.

**381**

**ವಿಧಿ ಪ್ರತಿಷೇಧ ಶಾಸ್ತ್ರಮವಿದ್ವದ್ವಿಷಯ ಇತಿ ಸಿದ್ಧಮ್ |**

**-ಗೀತಾ 3 (ಉಪೋದ್ಘಾತ)**

ವಿಧಿ ಶಾಸ್ತ್ರ ಮತ್ತು ಪ್ರತಿಷೇಧ ಶಾಸ್ತ್ರವು ಅವಿದ್ಯಾವಂತರಿಗೆ ಸಂಬಂಧಿಸಿದ್ದೆಂದು ಸಿದ್ಧವಾಗುತ್ತದೆ.

**382**

**ಅವಿದ್ಯಾಕಾಮಬೀಜಂ ಹಿ ಸರ್ವಮೇವ ಕರ್ಮ |** **-ಗೀ.ಭಾ. 8-66**

ಸಮಸ್ತ ಕರ್ಮಕ್ಕೂ ಅವಿದ್ಯೆ ಮತ್ತು ಕಾಮಗಳೇ ಬೀಜವಾಗಿರುತ್ತವೆ.



# ೧೬ ಅಂತಃಕರಣ -ಮನಸ್ಸು

ಅಂತಃಕರಣವೆಂದರೆ ಅಂತರಿಂದ್ರಿಯವೆಂದರ್ಥ. ನೇತ್ರ, ಶ್ರೋತ್ರಾದಿಗಳು ಬಹಿರಿಂದ್ರಿಯಗಳು. ಅಂತಃಕರಣವನ್ನು ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಎಂದು ನಾಲ್ಕು ವಿಧವಾಗಿ ವಿಂಗಡಿಸುವುದುಂಟು. ಅಂತಃಕರಣದಲ್ಲಾಗುವ ವೃತ್ತಿಭೇದಗಳಿಂದ ಈ ವಿಭಾಗವೇ ಹೊರತು ಇವು ನಾಲ್ಕು ಬೇರೆ ವಸ್ತುಗಳಲ್ಲ. ವೃತ್ತಿಯೆಂದರೆ ಕ್ರಿಯಾರೂಪವಾದ ಪರಿಣಾಮ. ಮನಸ್ಸು ಸಂಕಲ್ಪ-ವಿಕಲ್ಪಗಳನ್ನು ಮಾಡುತ್ತದೆ. ಬುದ್ಧಿಯು ಪ್ರಕಾಶರೂಪವಾಗಿದ್ದು ಬುದ್ಧಿಯು ಪ್ರಕಾಶರೂಪವಾಗಿದ್ದು ನಿಶ್ಚಯವನ್ನುಂಟುಮಾಡುತ್ತದೆ. ಚಿತ್ತವು ತಾನು ಅನುಭವಿಸಿದ್ದನ್ನು ಧಾರಣಮಾಡುತ್ತದೆ-ನೆನಪಿಟ್ಟುಕೊಳ್ಳುತ್ತದೆ. ಅಹಂಕಾರವು ದೇಹೇಂದ್ರಿಯ ಮಸ್ಸುಗಳಲ್ಲಿ 'ನಾನು ನಾನು' ಎಂಬ ಅಭಿಮಾನವನ್ನುಂಟು ಮಾಡುತ್ತದೆ. ಹೀಗೆ ಸೂಕ್ಷ್ಮ ವಿಭಾಗವಿದ್ದರೂ ಅಹಂಕಾರ ಒಂದನ್ನು ಬಿಟ್ಟು ಮನಸ್ಸು, ಬುದ್ಧಿ, ಚಿತ್ತ, ಅಂತಃಕರಣ -ಎಂಬ ಶಬ್ದಗಳನ್ನು ಒಂದೇ ಅರ್ಥದಲ್ಲಿ ಪರ್ಯಾಯ ಪದಗಳನ್ನಾಗಿ ಬಳಸುವುದು ರೂಢಿಯಲ್ಲಿದೆ.

ನಮಗಾಗುವ ಸಮಸ್ತಜ್ಞಾನಗಳಿಗೂ ಮನಸ್ಸೇ ಆಧಾರವಾಗಿದೆ. ಅದರ ನೆರವಿಲ್ಲದೆ ಬಹಿರಿಂದ್ರಿಯಗಳು ಯಾವ ಜ್ಞಾನವನ್ನೂ ಹುಟ್ಟಿಸವು. ಮನಸ್ಸು ಬಹಿರಿಂದ್ರಿಯಗಳಿಂದ ಪಡೆಯುವ ಜ್ಞಾನವನ್ನು ಪ್ರತ್ಯಕ್ಷವೆನ್ನುತ್ತಾರೆ. ಅನುಮಿತಿ ಮೊದಲಾದ ಸಮಸ್ತಜ್ಞಾನಗಳೂ ಮಾನಸವಾದವು. ಇಂದ್ರಿಯಗಳ ನೆರವು ಇಲ್ಲದಿದ್ದರೂ ಮನಸ್ಸಿನಲ್ಲಿ ಜ್ಞಾನ ಹುಟ್ಟುತ್ತದೆ. ಏಕೆಂದರೆ ಜ್ಞಾನವೆಂಬುದು ಮನಸ್ಸಿನ ಒಂದು ವೃತ್ತಿಯೇ ಆಗಿದೆ. ರಾಗ, ದ್ವೇಷ, ಲಜ್ಜೆ, ಅಸೂಯೆ, ಕ್ರೋಧ-ಮೊದಲಾದವೆಲ್ಲ ವೃತ್ತಿ ಭೇದವನ್ನು ಹೊಂದುವ ಮನಸ್ಸೇ ಹೊರತು, ತಾರ್ಕಿಕರು ಹೇಳುವಂತೆ ಪ್ರತ್ಯೇಕ ಗುಣಗಳಲ್ಲ. ಆತ್ಮನಿಗೂ ಇವುಗಳಿಗೂ ಯಾವ ಸಂಬಂಧವೂ ಇಲ್ಲ. ಇವೆಲ್ಲ ಧೀವೃತ್ತಿಗಳು. ಘಟಜ್ಞಾನ, ಪಟಜ್ಞಾನ-ಮೊದಲಾದವು ವೃತ್ತಿಜ್ಞಾನಗಳು. ವಾಸ್ತವದಲ್ಲಿ ಆತ್ಮನೇ ಜ್ಞಾನಸ್ವರೂಪನು. ಸ್ವಯಂಜ್ಯೋತಿಯಾದ ಆತನ ಪ್ರಕಾಶದಿಂದಾಗುವ ಚಿತ್ತವೃತ್ತಿಯನ್ನು ಜ್ಞಾನವೆನ್ನುವುದು ಔಪಚಾರಿಕ. ಅಂತಃಕರಣವೆಂಬ ಉಪಾಧಿಯಿಂದ ಆತ್ಮನು ಜೀವನೆನಿಸಿಕೊಳ್ಳುತ್ತಾನೆ. ಅಂತಃಕರಣಾವಚ್ಛಿನ್ನಚೈತನ್ಯವೇ ಜೀವವೆಂದು ವೇದಾಂತಿಗಳ ವ್ಯವಹಾರ.

'ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ' ಎಂಬ ನುಡಿಯಂತೆ ಮನಸ್ಸು ಸಂಸಾರಬಂಧನಕ್ಕೂ ಕಾರಣ. ಮೋಕ್ಷಕ್ಕೂ ಕಾರಣ. ತಪ್ಪು ತಿಳಿವಳಿಕೆಯಿಂದ

ದೇಹಾದಿಗಳಲ್ಲಿ ಆತ್ಮನೆಂಬ ಅಭಿಮಾನವನ್ನು ತಂದಿಟ್ಟು, ರಾಗ ದ್ವೇಷಾದಿಗಳಿಂದ ಕಲುಷಿತವಾಗಿ ಬಂಧಕ್ಕೆ ಕಾರಣವಾಗಿದೆ. ಅದೇ ಮನಸ್ಸು ಶಾಸ್ತ್ರಾಚಾರ್ಯೋಪದೇಶಗಳಿಂದ ಸಂಸ್ಕಾರವನ್ನು ಹೊಂದಿ ಪರಿಶುದ್ಧವಾಗಿ ಶಮದಮಾದಿಸಾಧನಗಳನ್ನು ಅಳವಡಿಸಿಕೊಂಡು, ಶುದ್ಧಾತ್ಮನನ್ನು ಸಾಕ್ಷಾತ್ಕಾರ ಮಾಡಿಸಿ ಮೋಕ್ಷವನ್ನು ತಂದು ಕೊಡುತ್ತದೆ. ಅತಿಚಂಚಲವೂ ನಿಗ್ರಹಿಸಲು ಕಠಿಣವೂ ಆಗಿದೆ. ಅದು ಹರಿತವಾದ ಕತ್ತಿ ಇದ್ದಂತೆ. ವಿವೇಕದಿಂದ ಚಲಿಸಿದರೆ ಶತ್ರುಘಾತಿಯಾಗುತ್ತದೆ. ಅವಿವೇಕದಿಂದ ಉಪಯೋಗಿಸಿದರೆ ಆತ್ಮಘಾತಿಯಾಗುತ್ತದೆ.

ದರ್ಶನಶಾಸ್ತ್ರಗಳಲ್ಲಿ ಬಹುದೊಡ್ಡ ಪಾತ್ರವನ್ನು ವಹಿಸಿರುವ ಈ ಮನಸ್ಸಿನ ಸ್ವರೂಪವೇನೆಂಬುದರಲ್ಲಿ ಭಿನ್ನಾಭಿಪ್ರಾಯಗಳಿವೆ. ಇದು ಅಣುವೆಂದೂ, ನಿರವಯವವಾದ ಅತಿರಿಕ್ತ ದ್ರವ್ಯವೆಂದೂ, ಅಹಂಕಾರವು ಅದರಿಂದ ಜನಿಸಿದೆಯೆಂದೂ ಸಾಂಖ್ಯರ ಮತ. ಗುಣತ್ರಯದಿಂದ ಕೂಡಿದ ಭೌತಿಕವಸ್ತುವೆಂದೂ ಸಾವಯವವೆಂದೂ ವೇದಾಂತಿಗಳ ಸಿದ್ಧಾಂತ. ಮನಸ್ಸು ಅವಯವ ಸಹಿತವಾದ್ದರಿಂದಲೇ ವೃತ್ತಿಯೆಂಬ ಪರಿಣಾಮ ಹುಟ್ಟುವುದೆಂದೂ ಅವಯುವರಹಿತವಾದರೆ ಪರಿಣಾಮ ಸಿದ್ಧಿಸುವುದಿಲ್ಲವೆಂದೂ ವೇದಾಂತಿಗಳ ಅಭಿಪ್ರಾಯವಿದೆ. ಅಂತಃಕರಣವು ತೈಜಸವೆಂದೂ ಪಂಚಭೂತಗಳ ಸಾತ್ತ್ವಿಕಾಂಶಗಳಿಂದ ನಿರ್ಮಿತವಾಗಿದೆಯೆಂದೂ ಸಹ ಹೇಳುತ್ತಾರೆ. ಜಾಗ್ರತ್ ಸ್ವಪ್ನಸುಷುಪ್ತಿಗಳು ಮನಸ್ಸನ್ನು ಅವಲಂಬಿಸಿಯೇ ನಡೆಯುತ್ತದೆ. ಸಮಸ್ತ ಮಾನವರ ಅನುಭವಕ್ಕೆ ಗೋಚರವಾದ ಮನಸ್ಸನ್ನು ಇಲ್ಲವೆನ್ನಲು ಸಾಧ್ಯವಿಲ್ಲ. ಆಧುನಿಕಜ್ಞಾನಿಗಳು ಅದರ ವಿಷಯವಾಗಿ ಯಾವ ನಿರ್ಣಯಕ್ಕೂ ಬಂದಂತೆ ಕಾಣುವುದಿಲ್ಲ. ಆತ್ಮಸ್ವರೂಪದಂತೆ ಪ್ರಯೋಗಶಾಲೆಗೆ ಅದು ಅಗೋಚರ.

## 383

**ತಸ್ಮಾತ್ ಯಸ್ಯ ಅವಧಾನಾನವಧಾನಾಭ್ಯಾಮುಪಲಬ್ಧ್ಯನುಪಲಬ್ಧೀ ಭವತಸ್ತನ್ಮನಃ |**
**-ಸೂ.ಭಾ. 2-3-32**

ಯಾವುದರ ಅವಧಾನ, ಅನವಧಾನಗಳಿಂದ ಕ್ರಮವಾಗಿ ಅರಿವೂ, ಅರಿವಾಗದಿರುವುದೂ ಸಂಭವಿಸುತ್ತವೆಯೋ ಅದು ಮನಸ್ಸು.

ಮನಸ್ಸಿದೆ ಎಂಬುದಕ್ಕೆ ಮೇಲೆ ಹೇಳಿದ್ದು ಯುಕ್ತಿ. "ಮನಸಾ ಹ್ಯೇವ ಪಶ್ಯತಿ", "ಮನಸಾ ಶೃಣೋತಿ" (ಬೃಹ. 1-5-3) ಇತ್ಯಾದಿ ಶ್ರುತಿಗಳೂ ಇದಕ್ಕೆ ಪ್ರಮಾಣ. "ನನ್ನ ಮನಸ್ಸು ಏನನ್ನೋ ಚಿಂತಿಸುತ್ತಿತ್ತು" ಎನ್ನುವ ಅನುಭವವೂ ಇದಕ್ಕೆ ಆಧಾರ.

**384**

**ಇಂದ್ರಿಯೋಪಹೃತಾನಾಂ ವಿಷಯಾಣಾಂ ಭೋಕ್ತ್ರರ್ಥಾನಾಂ ಪ್ರತ್ಯಯ ರೂಪಾಣಾಂ ಮನ ಆಯತನಮ್ ಆಶ್ರಯಃ | -ಛಾಂ. 5-1-5**

ಇಂದ್ರಿಯಗಳು ಭೋಕ್ತೃವಿಗೆ ತಂದೊಪ್ಪಿಸುವ ವಿಷಯಾಕಾರದ ಜ್ಞಾನಗಳಿಗೆ ಮನಸ್ಸು ಆಶ್ರಯಸ್ಥಾನವಾಗಿದೆ.

**385**

**ಅನ್ನೋಪಚಿತತ್ವಾನ್ಮನಸೋ ಭೌತಿಕತ್ವಮೇವ| ನ ವೈಶೇಷಿಕ ತಂತ್ರೋಕ್ತಲಕ್ಷಣಂ ನಿತ್ಯಂ ನಿರವಯವಂ ಚೇತಿ ಗೃಹ್ಯತೇ | -ಛಾಂ. 6-5-1**

ಮನಸ್ಸು ಅನ್ನದಿಂದ ಬೆಳೆದಿರುವ ಪ್ರಯುಕ್ತ ಅದು ಭೌತಿಕವೇ ಸರಿ. ವೈಶೇಷಿಕ ಶಾಸ್ತ್ರದಲ್ಲಿ ಹೇಳಿದಂತೆ ಅದು ನಿತ್ಯ-ನಿರವಯವ ಎಂದು ಇಲ್ಲಿ ಗಣಿಸಲಾಗುವುದಿಲ್ಲ.

**386**

**ಬಲಮಿತಿ ಅನ್ನೋಪಯೋಗಜನಿತಂ ಮನಸೋ ವಿಜ್ಞೇಯಪ್ರತಿಭಾನ ಸಾಮರ್ಥ್ಯಮ್ | -ಛಾಂ. 7-8-1**

ಆಹಾರದ ಉಪಯೋಗದಿಂದ ಹುಟ್ಟಿದ ಮತ್ತು ಜ್ಞೇಯವಿಷಯವನ್ನು ಥಟ್ಟನೆ ಗ್ರಹಿಸಬಲ್ಲ ಮನಸ್ಸಿನ ಸಾಮರ್ಥ್ಯವು ಬಲವೆನಿಸುತ್ತದೆ.

'ಬಲವು ವಿಜ್ಞಾನಕ್ಕಿಂತ ಹೆಚ್ಚಿನದು' ಎನ್ನುತ್ತದೆ ಶ್ರುತಿ (ಬಲಂ ವಾವ ವಿಜ್ಞಾನಾತ್ ಭೂಯಃ). ಇಲ್ಲಿ 'ಬಲ'ವೆಂದರೆ ಮೇಲೆ ಹೇಳಿದ ಮನಸ್ಸಿನ ಸಾಮರ್ಥ್ಯ.

**387**

**ಮನ ಏವ ಕೇವಲಂ ರೂಪಜ್ಞಾನನಿಮಿತ್ತಂ ಯೋಗಿನಾಮ್ |**

**-ಗೀತಾ 1-24**

ಯೋಗಿಗಳಿಗೆ ರೂಪಜ್ಞಾನವನ್ನುಂಟು ಮಾಡುವುದಕ್ಕೆ ಮನಸ್ಸೊಂದೇ ಕಾರಣವಾಗಬಲ್ಲದು.

ಯೋಗಿಪ್ರತ್ಯಕ್ಷವು ಬಾಹ್ಯೇಂದ್ರಿಯಗಳನ್ನು ಆಶ್ರಯಿಸುವುದಿಲ್ಲ. ಯೋಗಿಗಳು ಮನಸ್ಸಿನಿಂದಲೇ ದೂರದಲ್ಲಿರುವುದನ್ನು ಕಾಣಬಲ್ಲರು. ನಮ್ಮಂತೆ ಅವರು ಕಣ್ಣಿನಿಂದ ನೋಡಬೇಕಾಗಿಲ್ಲ.

**388**

**ವಿಷಯೇಭ್ಯಃ ಪ್ರತಿಸಂಹೃತ್ಯ ಚೇತಸ ಆತ್ಮನಿ ಸಮಾಧಾನಮಧ್ಯಾತ್ಮ ಯೋಗಃ |**
**-ಕಠ 1-2-12**

ಮನಸ್ಸನ್ನು ವಿಷಯಗಳಿಂದ ವಿಮುಖಗೊಳಿಸಿ ಆತ್ಮನಲ್ಲಿ ನೆಲೆಗೊಳಿಸುವುದು ಆಧ್ಯಾತ್ಮಯೋಗವೆನಿಸುತ್ತದೆ.

**389**

**ಬುದ್ಧಿಂ ಹ್ಯಾರುಹ್ಯ ಭೋಗ್ಯಜಾತಂ ಭೋಕ್ತಾರಮುಪಸರ್ಪತಿ |**
**-ಸೂ.ಭಾ. 1-4-1**

ಭೋಗ್ಯವಸ್ತುವು ಬುದ್ಧಿಯನ್ನು ಹತ್ತಿಕೊಂಡೇ ಭೋಕ್ತೃವಿನ ಬಳಿಗೆ ಬಂದು ಸೇರುತ್ತದೆ.

ಆತ್ಮನು ಬುದ್ಧಿಯ ಮೂಲಕ ಭೋಗವನ್ನು ಅನುಭವಿಸುತ್ತಾನೆ. ತಾನೇ ನೇರವಾಗಿ ಅನುಭವಿಸುವುದಿಲ್ಲ.

**390**

**ಬುದ್ಧಿಃ ಅಂತಃಕರಣಸ್ಯ ಸೂಕ್ಷ್ಮಾದ್ಯರ್ಥಾವಬೋಧನ ಸಾಮರ್ಥ್ಯಮ್ | ತದ್ವಂತಂ ಬುದ್ಧಿಮಾನ್ ಇತಿ ಹಿ ವದಂತಿ |** **-ಗೀತಾ 10-4**

ಸೂಕ್ಷ್ಮವಾದ ವಿಷಯವನ್ನು ಗ್ರಹಿಸಬಲ್ಲ ಅಂತಃಕರಣದ ಸಾಮರ್ಥ್ಯವೇ ಬುದ್ಧಿ. ಅಂತಹ ಸಾಮರ್ಥ್ಯವಿರುವವನು ಬುದ್ಧಿವಂತನೆಂದು ಹೇಳುತ್ತಾರಲ್ಲವೆ?

**391**

**ಪ್ರತ್ಯಕ್ಷಾ ಚ ವಿದ್ವತ್ಸಂಯೋಗೇ ಪ್ರಜ್ಞಾವೃದ್ಧಿಃ |** **-ಬೃಹ. 4-1-1**

ವಿದ್ವಾಂಸರ ಸಹವಾಸದಲ್ಲಿ ಬುದ್ಧಿಶಕ್ತಿಯು ವರ್ಧಿಸುತ್ತದೆ ಎಂಬುದು ಪ್ರತ್ಯಕ್ಷವಾಗಿದೆ.

**392**

**ಅಮೇಧಸೋ ಹಿ ಶ್ರೀಃ ಅನರ್ಥಾಯೈವ | -ತೈತ್ತಿ. ಶೀಕ್ಷಾ 4-3**

ಬುದ್ಧಿ ಇಲ್ಲದವನಿಗೆ ಐಶ್ವರ್ಯವು ಅನರ್ಥವನ್ನೇ ಉಂಟುಮಾಡುತ್ತದೆ.

**393**

**ತಾವದೇವ ಹಿ ಪುರುಷಃ ಯಾವತ್ ಅಂತಃಕರಣಂ ತದೀಯಂ ಕಾರ್ಯಾಕಾರ್ಯ ವಿವೇಕಯೋಗ್ಯಮ್ | ತದಯೋಗ್ಯತ್ವೇ ನಷ್ಟ ಏವ ಪುರುಷೋ ಭವತಿ |**

**-ಗೀತಾ 2-63**

ಎಲ್ಲಿಯವರೆಗೆ ಮನುಷ್ಯನ ಬುದ್ಧಿಯು ಕಾರ್ಯಾಕಾರ್ಯಗಳನ್ನು ವಿಂಗಡಿಸಿಕೊಳ್ಳುವುದಕ್ಕೆ ಸಮರ್ಥವಾಗಿರುವುದೋ ಅಲ್ಲಿಯವರೆಗೇ ಅಲ್ಲವೆ ಅವನು ಮನುಷ್ಯನೆನಿಸಿಕೊಳ್ಳುವುದು. ಆ ಬುದ್ಧಿ ನಷ್ಟವಾಗಿ ಬಿಟ್ಟರೆ ಮನುಷ್ಯನೂ ನಾಶವಾದಂತೆಯೇ.

'ಬುದ್ಧಿನಾಶಾತ್ ಪ್ರಣಶ್ಯತಿ' ಎಂಬುದಕ್ಕೆ ಇದು ವಿವರಣೆ.

**394**

**ನ ಹಿ ಕಾಮಾ ಹಿತಃ ಕಸ್ಯಚಿತ್ | -ಗೀತಾ 7-22**

ಕಾಮನೆಗಳು ಯಾರಿಗೂ ಹಿತಕಾರಿಗಳಲ್ಲ.

**395**

**ಇಷ್ಟವಿಷಯಪ್ರಾರ್ಥನಾ ಹಿ ತದ್ವಿಷಯಾಯೋಗೇ ಶೋಕತ್ವಮಾಪದ್ಯತೇ |**

**- ಬೃಹ. 4-3-22**

ಇಷ್ಟವಾದ ವಸ್ತುವಿನ ಬಯಕೆಯೇ ಆ ವಸ್ತು ಕೈ ತಪ್ಪಿದಾಗ ಶೋಕವಾಗಿ ಪರಿಣಮಿಸುತ್ತದೆ.

**396**

**ಸ ಏಷ ಕಾಮಃ ಪ್ರತಿಹತಃ ಕೇನಚಿತ್ ಕ್ರೋಧತ್ವೇನ ಪರಿಣಮತೇ |**

**-ಗೀತಾ 3-37**

ಕಾಮವು ಏನಾದರೊಂದು ನಿಮಿತ್ತದಿಂದ ಪ್ರತಿಹತವಾದರೆ ಕ್ರೋಧವಾಗಿ ಮಾರ್ಪಡುತ್ತದೆ.

**397**

**ಕ್ರುದ್ಧೋ ಹಿ ಸಂಮೂಢಃ ಸನ್ ಗುರುಮಪಿ ಆಕ್ರೋಶತಿ |**

**-ಗೀತಾ 2-63**

ಸಿಟ್ಟುಬಂದವನು ಸಂಮೋಹಗೊಂಡು ಗುರುವನ್ನು ಕೂಡ ಬಯ್ಯುತ್ತಾನೆ.

ಕ್ರೋಧದಿಂದ ಕಾರ್ಯಾಕಾರ್ಯಜ್ಞಾನವು ಹೋಗಿಬಿಡುತ್ತದೆ.

**398**

**ವಿಷಯಗ್ರಹಣಕಾರ್ಯಾನುಮೇಯಂ ಕರಣಸಾಮರ್ಥ್ಯಮಿಂದ್ರಿಯಮ್ |**

**ಛಾಂ : 3-6-1**

ಇಂದ್ರಿಯವೆಂದರೆ ವಿಷಯಜ್ಞಾನವೆಂಬ ಕಾರ್ಯದಿಂದ ಊಹಿಸಬೇಕಾದ ಕರಣದ ಸಾಮರ್ಥ್ಯ.

ಕಣ್ಣು, ಕಿವಿ ಮೊದಲಾದವು ಇಂದ್ರಿಯಗಳಿರುವ ಗೋಳಕಗಳು, ಅವುಗಳಲ್ಲಿರುವ ದೃಷ್ಟಿ ಸಾಮರ್ಥ್ಯ, ಶ್ರವಣ ಸಾಮರ್ಥ್ಯ ಮೊದಲಾದವು ಜ್ಞಾನೇಂದ್ರಿಯಗಳು. ಈ ಸಾಮರ್ಥ್ಯವಿರುವ ಒಂದು ಸೂಕ್ಷ್ಮವಾದ ಪದಾರ್ಥವೇ ಇಂದ್ರಿಯವೆಂದು ಕೆಲವರ ಅಭಿಪ್ರಾಯ.



# ೧೭ ಸುಷುಪ್ತಿ

ನಮಗೆ ಎಚ್ಚರ, ಕನಸು, ತನಿನಿದ್ರೆ-ಎಂಬ ಮೂರು ಸ್ಥಿತಿಗಳು ಅನುಭವದಲ್ಲಿವೆ. ಎಚ್ಚರವನ್ನು ಜಾಗ್ರದವಸ್ಥೆ, ಜಾಗರಾವಸ್ಥೆ, ಜಾಗರಿತಾವಸ್ಥೆ ಎಂದು ಕರೆಯುತ್ತಾರೆ. ಕನಸಿನ ಸ್ಥಿತಿ ಸ್ವಪ್ನಾವಸ್ಥೆ, ತನಿನಿದ್ರೆಯ ಸ್ಥಿತಿ ಸುಷುಪ್ತ್ಯವಸ್ಥೆ. ಇವುಗಳಲ್ಲಿ ಎಚ್ಚರವು ನಮ್ಮ ಸಹಜಸ್ಥಿತಿಯೆಂದು ಭಾವಿಸುತ್ತೇವೆ. ಇನ್ನು ಸ್ವಪ್ನ ಸುಷುಪ್ತಿಗಳ ಆವಶ್ಯಕತೆ ಏನು ಎಂಬುದು ವಿಚಾರಾರ್ಹ. ದೇಹ, ಮನಸ್ಸುಗಳ ಸಂಪೂರ್ಣ ವಿಶ್ರಾಂತಿಗಾಗಿ ಸುಷುಪ್ತಿ ಬೇಕೆಂದು ನಮಗೆ ಕಂಡುಬಂದಿದೆ. ಆದರೆ ಹೃದಯ, ಶ್ವಾಸಕೋಶಗಳಿಗೆ ಆಗ ವಿಶ್ರಾಂತಿಯುಂಟೇನು? ಅವುಗಳ ವಿಶ್ರಾಂತಿಯೆಂದರೆ ಮರಣವೇ! ಹುಟ್ಟಿನಿಂದ ಸಾವಿನವರೆಗೂ ಅವು ಕೆಲಸವನ್ನು ಮಾಡುತ್ತಲೇ ಇರುತ್ತವೆ. ಅಂತೆಯೇ ಉಳಿದ ಇಂದ್ರಿಯಗಳು ಕೆಲಸ ಮಾಡುತ್ತಲೇ ಇರಬಾರದೇಕೆ? ಸುಷುಪ್ತಿಯನ್ನು ಕಲ್ಪಿಸಿರುವುದರಲ್ಲಿ ಭಗವಂತನ ಸಂಕಲ್ಪವೇನಿರಬಹುದು?- ಎಂಬುದೊಂದು ಪ್ರಶ್ನೆ. ಹಾಗೆಯೇ ಕನಸಿನ ವಿಷಯ. ಅದರಲ್ಲಿ ಇಂದ್ರಿಯಗಳಿಗೆ ವಿಶ್ರಾಂತಿ ಇದ್ದರೂ ಮನಸ್ಸಿಗೆ ವಿಶ್ರಾಂತಿ ಇಲ್ಲ. ನಾನಾ ಕಲ್ಪನೆಗಳನ್ನು ತನ್ನ ಪಾಡಿಗೆ ಮಾಡಿಕೊಂಡು ಸುಖದುಃಖಗಳನ್ನು ಅನುಭವಿಸುತ್ತ, ಜಾಗ್ರದವಸ್ಥೆಯಲ್ಲಿರುವಂತೆಯೇ ಮನಸ್ಸು ತೊಳಲಿ ಬಳಲುತ್ತಲೇ ಇರುವುದು. ಮನುಷ್ಯನಿಗೆ ಕನಸಿನ ಆವಶ್ಯಕತೆ ಏನಿದೆ? ಎಂಬುದು ಎರಡನೆಯ ಪ್ರಶ್ನೆ. ಆದ್ದರಿಂದ ಈ ಅವಸ್ಥಾತ್ರಯವನ್ನು ವೇದಾಂತವು ವಿಚಾರಕ್ಕೆ ಒಳಪಡಿಸಿರುತ್ತದೆ. ಸ್ವಪ್ನ ಪ್ರಪಂಚದಂತೆ ಜಾಗ್ರತ್ ಪ್ರಪಂಚವೂ ಮಿಥ್ಯೆಯೆಂದೂ ಆತ್ಮನು ಸುಷುಪ್ತಿಯಲ್ಲಿರುವಂತೆ ದೇಹೇಂದ್ರಿಯಮನಃಸಂಬಂಧವಿಲ್ಲದವನೂ ನಿಷ್ಪ್ರಪಂಚನೂ ನಿರ್ವಿಶೇಷನೂ ಶಾಂತನೂ ಸುಖಸ್ವರೂಪನೂ ಆಗಿದ್ದಾನೆಂದು ಮತ್ತೆ ಮತ್ತೆ ಬೋಧಿಸಿ ಅನುಭವಕ್ಕೆ ತಂದುಕೊಡುವುದೇ ಭಗವತ್‌ಸಂಕಲ್ಪವೆಂದು ತಿಳಿಯಬೇಕು.

ಜಾಗರಿತಾವಸ್ಥೆಯಲ್ಲಿ ಜೀವನಿಗೆ ವೈಶ್ವಾನರನೆಂದೂ, ಸ್ವಪ್ನಾವಸ್ಥೆಯಲ್ಲಿ ತೈಜಸನೆಂದೂ, ಸುಷುಪ್ತ್ಯವಸ್ಥೆಯಲ್ಲಿ ಪ್ರಾಜ್ಞನೆಂದೂ ಹೆಸರು. ಜೀವಾವಸ್ಥೆಗೆ ಸಂಬಂಧಿಸಿದ ದೇಹ, ಇಂದ್ರಿಯ, ಮನಸ್ಸುಗಳೆಂಬ ಉಪಾಧಿಗಳಿಂದ ವಿರತನಾಗಿ ಆತ್ಮನು ಸ್ವಸ್ವರೂಪದಲ್ಲಿರುವುದೇ ಸುಷುಪ್ತಿ, 'ಸ್ವಮಪೀತೋ ಭವತಿ' (ಛಾಂ. 6-8-1)ತನ್ನಲ್ಲಿ ತಾನು ಸೇರಿ ಹೋಗುತ್ತಾನೆ-ಎಂದು ಶ್ರುತಿಯಲ್ಲಿ ಹೇಳಿದೆ. ಪರಮಾರ್ಥ ದೃಷ್ಟಿಯಲ್ಲಿ ನೋಡಿದಾಗ ಜೀವನೇ ಬ್ರಹ್ಮವಾಗಿರುವುದರಿಂದ ಬ್ರಹ್ಮದಲ್ಲಿ ಸೇರಿಹೋಗುತ್ತಾನೆ ಎನ್ನುವುದೂ ಸಹ ಅಧ್ಯಾರೋಪದಿಂದಲೇ. ಅವಸ್ಥಾತ್ರಯವೂ ಉಪಾಧಿಕಲ್ಪಿತವೇ ಆದ

ಕಾರಣ ಆತ್ಮನನ್ನು ತುರೀಯನೆಂದು ಹೇಳುವುದುಂಟು.

ನಮಗೆ ಯಾವಾಗಲೂ ಬಾಹ್ಯದೃಷ್ಟಿಯೇ ಇರುತ್ತದೆ. ಪ್ರತ್ಯಗ್‌ದೃಷ್ಟಿ ಇರುವುದಿಲ್ಲ. ಈ ಬಾಹ್ಯದೃಷ್ಟಿಗೆ ಜಾಗ್ರದವಸ್ಥೆಯ ಅಭಿಮಾನವೇ ಕಾರಣ. ಎಚ್ಚರ, ಕನಸು, ತನಿನಿದ್ರೆ (ಸುಷುಪ್ತಿ) ಇವು ಮೂರನ್ನು ಕಾಣತಕ್ಕವನು ನಾನು ಎಂಬುದನ್ನು ಚೆನ್ನಾಗಿ ಮನಗಾಣಿಸಿಕೊಂಡರೆ ಪ್ರತ್ಯಗ್‌ದೃಷ್ಟಿಯು ಅಳವಡುವುದಕ್ಕೆ ಸಹಾಯವಾಗುತ್ತದೆ. ಎಚ್ಚರಕ್ಕೂ ಕನಸಿಗೂ ಯಾವ ಭೇದವೂ ಇಲ್ಲವೆಂಬುದು ವೇದಾಂತಿಗಳ ಸಿದ್ಧಾಂತವಾಗಿರುತ್ತದೆ. ಈ ಎರಡು ಅವಸ್ಥೆಗಳಲ್ಲಿಯೂ ಆತ್ಮಸ್ವರೂಪದ ಜ್ಞಾನವಿರುವುದಿಲ್ಲ. ಕನಸು ಎಚ್ಚರದಲ್ಲಿ ಬಾಧಿತವಾಗಿ ಮಿಥ್ಯೆ ಎನ್ನಿಸಿಕೊಳ್ಳುತ್ತದೆ. ಹಾಗೆಯೇ ಅದ್ವೈತಾತ್ಮನ ಸ್ವರೂಪವು ತಿಳಿದಾಗ ಎಚ್ಚರದ ಪ್ರಪಂಚವೂ ಬಾಧಿತವಾಗಿಬಿಡುತ್ತದೆ. ಹೀಗೆ ಇವೆರಡೂ ಬಾಧಿತವಾಗುವುದರಿಂದ ಜಾಗ್ರತ್ ಪ್ರಪಂಚವೂ ಮಿಥ್ಯೆಯೆಂದು ವೇದಾಂತಿಗಳ ನಿಲುವು. ಚಿತ್ತದ ಸಂಬಂಧದಿಂದಲೇ ಎಚ್ಚರ, ಕನಸುಗಳಿಗೆ ಅಸ್ತಿತ್ವವಿರುವಂತೆ ಕಾಣುತ್ತದೆ. ಸುಷುಪ್ತಿಯಲ್ಲಿ ಚಿತ್ತದ ಸಂಬಂಧವಿಲ್ಲದ್ದರಿಂದ ಅವೆರಡೂ ಇರುವುದಿಲ್ಲ.

**399**

**ನ ಹಿ ಸುಷುಪ್ತಸಮಾಹಿತಮುಕ್ತಾನಾಂ ಭ್ರಾಂತಿದರ್ಶನಾಭಾವೇ ಆತ್ಮವ್ಯತಿರಿಕ್ತೋ ಬಾಹ್ಯೋಽರ್ಥಃ ಉಪಲಭ್ಯತೇ | -ಮಾಂಡೂಕ್ಯ 4-25**

ಸುಷುಪ್ತಿಯಲ್ಲಿ, ಸಮಾಧಿಯಲ್ಲಿ ಮತ್ತು ಮುಕ್ತಿದಶೆಯಲ್ಲಿ ಇರತಕ್ಕವರಿಗೆ ಭ್ರಾಂತಿ ದರ್ಶನವಿರುವುದಿಲ್ಲ. ಆದ್ದರಿಂದ ಆಗ ಅವರಿಗೆ ಆತ್ಮವಲ್ಲದ ಯಾವ ಬಾಹ್ಯ ವಿಷಯವೂ ಗೋಚರಿಸುವುದಿಲ್ಲ.

**400**

**ದರ್ಶನ ಸ್ಮರಣೇ ಏವ ಹಿ ಮನಃಸ್ಪಂದಿತೇ | ತದಭಾವೇ ಹೃದ್ಯೇವ ಅವಿಶೇಷೇಣ ಪ್ರಾಣಾತ್ಮನಾ ಅವಸ್ಥಾನಮ್ | -ಮಾಂಡೂಕ್ಯ ಕಾರಿಕಾ 1-2**

ದರ್ಶನ, ಸ್ಮರಣ-ಇವೆರಡೇ ಮನಸ್ಸಿನ ವ್ಯಾಪಾರಗಳು. ಅವಿಲ್ಲದಾಗ ಹೃದಯದಲ್ಲಿ ಆತ್ಮನು ಪ್ರಾಜ್ಞನೆಂಬ ಕಾರಣಾತ್ಮನ ರೂಪದಿಂದ ಸುಷುಪ್ತಿಯಲ್ಲಿ ನೆಲೆಸುತ್ತಾನೆ.

ಮನಸ್ಸಿನಲ್ಲುಂಟಾಗತಕ್ಕದ್ದು ಜ್ಞಾನವು ಮಾತ್ರ. ಇದು ದರ್ಶನ, ಸ್ಮರಣ ಎಂದು ಎರಡೇ ವಿಧ. ದರ್ಶನವೆಂದರೆ ಅನುಭವ.

**401**

**ನ ಹಿ ಕ್ಷೇತ್ರಜ್ಞಃ ಪರಮಾರ್ಥತಃ ಸ್ವತಃ ಸ್ವಪಿತಿ ಜಾಗರ್ತಿ ವಾ | ಮನ ಉಪಾಧಿಕೃತಮೇವ ತಸ್ಯ ಜಾಗರಣಂ ಸ್ವಪ್ನಶ್ಚ | -ಪ್ರಶ್ನ 4-5**

ನಿಜವಾಗಿ ನೋಡಿದರೆ ಕ್ಷೇತ್ರಜ್ಞನು ಸ್ವತಃ ನಿದ್ರಿಸುವುದೂ ಇಲ್ಲ, ಎಚ್ಚರವಾಗುವುದೂ ಇಲ್ಲ. ಮನಸ್ಸೆಂಬ ಉಪಾಧಿಯಿಂದಲೇ ಅವನಿಗೆ ಎಚ್ಚರವೂ ಸ್ವಪ್ನವೂ ಆಗುತ್ತವೆ.

**ಇದಕ್ಕೆ ಪ್ರಮಾಣ 'ಸ ಹಿ ಸ್ವಪ್ನೋ ಭೂತ್ವೇಮಂ ಲೋಕಮತಿಕ್ರಾಮತಿ'. -ಬೃಹ. 4-3-7**

**402**

**ಯದಾ ಮನೋ ದಾರ್ವಗ್ನಿವತ್ ಅವಿಶೇಷ ವಿಜ್ಞಾನ ರೂಪೇಣ ಕೃತ್ಸ್ನಂ ಶರೀರಂ ವ್ಯಾಪ್ಯಾವತಿಷ್ಠತೇ ತದಾ ಸುಷುಪ್ತೋ ಭವತಿ | ಪ್ರಶ್ನ 4-6**

ಯಾವಾಗ ಮನಸ್ಸು ಕಟ್ಟಿಗೆಯಲ್ಲಿರುವ ಅಗ್ನಿಯಂತೆ ಸಾಮಾನ್ಯ ಚೈತನ್ಯ ರೂಪದಿಂದ ಎಲ್ಲ ಶರೀರವನ್ನೂ ವ್ಯಾಪಿಸಿಕೊಂಡಿರುತ್ತದೆಯೋ ಆಗ ಸುಷುಪ್ತನಾಗುತ್ತಾನೆ.

ಸುಷುಪ್ತಿ ಕಾಲದಲ್ಲಿ ಮನಸ್ಸು ಬ್ರಹ್ಮದಲ್ಲಿ ಸೇರಿಹೋಗುವುದು. (ಸೂ.ಭಾ. 2-3-2). ಪಿತ್ತವೆಂಬ ತೇಜಸ್ಸು ಆ ಸಮಯದಲ್ಲಿ ಎಲ್ಲೆಲ್ಲಿಯೂ ವ್ಯಾಪಿಸಿಕೊಳ್ಳುವುದರಿಂದ ಮನೋರಶ್ಮಿಗಳು ಇಂದ್ರಿಯಗಳೊಡನೆ ಹೃದಯದಲ್ಲಿ ಅಡಗಿರುತ್ತವೆ. ಕಟ್ಟಿಗೆಯಲ್ಲಿ ಬೆಂಕಿ ಸಾಮಾನ್ಯ ರೂಪದಿಂದ ಇರುತ್ತದೆ. ಎರಡು ಕಟ್ಟಿಗೆಗಳನ್ನು ಕಡೆದಾಗ ವಿಶೇಷ ರೂಪದಿಂದ ಕಾಣಿಸುತ್ತದೆ.

**403**

**ಏವಮ್ ಅವಿದ್ಯಾಪ್ರತ್ಯುಪಸ್ಥಾಪಿತದ್ವೈತಸಂಪೃಕ್ತಃ ಆತ್ಮಾಸ್ವಪ್ನಜಾಗರಿತಾವಸ್ಥಯೋಃ ಕರ್ತಾ ದುಃಖೀ ಭವತಿ | ಸ ತಚ್ಛ್ರಮಾಪನುತ್ತಯೇ ಸ್ವಮಾತ್ಮಾನಂ ಪರಂ ಬ್ರಹ್ಮ ಪ್ರವಿಶ್ಯ ವಿಮುಕ್ತ ಕಾರ್ಯಕರಣಸಂಘಾತೋಽಕರ್ತಾ ಸುಖೀ ಭವತಿ ಸಂಪ್ರಸಾದಾವಸ್ಥಾಯಾಮ್ | ತಥಾ ಮುಕ್ತ್ಯವಸ್ಥಾಯಾಮಪ್ಯವಿದ್ಯಾಧ್ವಾಂತಂ ವಿದ್ಯಾಪ್ರದೀಪೇನ ವಿಧೂಯಾತ್ಮೈವ ಕೇವಲೋ ನಿರ್ವೃತಃ ಸುಖೀ ಭವತಿ| ಸೂ.ಭಾ. 2-3-40**

ಸ್ವಪ್ನ ಮತ್ತು ಜಾಗ್ರದವಸ್ಥೆಯಲ್ಲಿ ಜೀವಾತ್ಮನು ಅವಿದ್ಯೆಯಿಂದ ತೋರಿಕೊಂಡ ದ್ವೈತದಿಂದ ವಿಶಿಷ್ಟನಾಗಿ ಕರ್ತನೂ ದುಃಖಿಯೂ ಆಗುತ್ತಾನೆ. ಅವನು ಆ ಶ್ರಮವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಸುಷುಪ್ತಿಯಲ್ಲಿ ತನ್ನ ಆತ್ಮನಾದ ಪರಬ್ರಹ್ಮವನ್ನು ಪ್ರವೇಶಿಸಿ ಇಂದ್ರಿಯ ಸಂಘಾತವನ್ನು ತ್ಯಜಿಸಿ, ಅಕರ್ತನೂ, ಸುಖಿಯೂ ಆಗುತ್ತಾನೆ. ಹಾಗೆ ಮುಕ್ತ್ಯವಸ್ಥೆಯಲ್ಲಿ ಅವಿದ್ಯೆಯೆಂಬ ಕತ್ತಲೆಯನ್ನು ವಿದ್ಯಾಪ್ರದೀಪದಿಂದ ನಿವಾರಿಸಿಕೊಂಡು ಕೇವಲ ಆತ್ಮನಾಗಿಯೇ ಉಳಿದು ಶಾಂತನಾಗಿ ಸುಖಿಯಾಗುತ್ತಾನೆ.

ದಾಸವಾಳ ಹೂವಿನ ಉಪಾಧಿಯಿಂದ ಸ್ಫಟಿಕವು ಕೆಂಪಾಗಿ ಕಾಣುವಂತೆ ಬುದ್ಧಿ ಮೊದಲಾದ್ದರಿಂದ ಆತ್ಮನಿಗೆ ಕರ್ತೃತ್ವವಿದೆಯೆಂದು ತೋರುತ್ತದೆ.

**404**

**ಮನಃ ಪ್ರಚಾರೋಪಾಧಿವಿಶೇಷ ಸಂಬಂಧಾತ್ ಇಂದ್ರಿಯಾರ್ಥಾನ್ ಗೃಹ್ಣನ್ ತದ್ವಿಶೇಷಾಪನ್ನೋ ಜೀವೋ ಜಾಗರ್ತಿ | ತದ್ವಾಸನಾವಿಶಿಷ್ಟಃ ಸ್ವಪ್ನಾನ್ ಪಶ್ಯನ್ ಮನಃಶಬ್ದವಾಚ್ಯೋ ಭವತಿ | ಸ ಉಪಾಧಿದ್ವಯೋಪರಮೇ ಸುಷುಪ್ತಾವಸ್ಥಾಯಾಮುಪಾಧಿಕೃತವಿಶೇಷಾಭಾವಾತ್ ಸ್ವಾತ್ಮನಿ ಪ್ರಲೀನ ಇವ ಇತಿ "ಸ್ವಂ ಹ್ಯಪೀತೋ ಭವತಿ" ಇತ್ಯುಚ್ಯತೇ |** **-ಸೂ.ಭಾ. 1-1-9**

(ಇಂದ್ರಿಯದ್ವಾರಾ) ಹರಿಯುವ ಮನೋವೃತ್ತಿಗಳೆಂಬ ಉಪಾಧಿಗಳಿಂದ ಶಬ್ದಾದ್ಯರ್ಥ. ವಿಶೇಷಗಳ ಸಂಬಂಧವಾಗುವ ಪ್ರಯುಕ್ತ ಇಂದ್ರಿಯಗೋಚರಗಳಾದ ವಿಷಯಗಳನ್ನು ಗ್ರಹಿಸುತ್ತ, ಅರ್ಥ ವಿಶೇಷವೇ ಆದ ಶರೀರದೊಡನೆ ಐಕ್ಯಭ್ರಾಂತಿಯನ್ನು ಹೊಂದಿದ ಜೀವನು ಜಾಗ್ರದವಸ್ಥೆಯಲ್ಲಿರುತ್ತಾನೆ. ಜಾಗ್ರದ್ವಾಸನೆಯುಳ್ಳ ಮನಸ್ಸಿನಿಂದ ಕೂಡಿ ಸ್ವಪ್ನಗಳನ್ನು ಕಾಣುತ್ತ ಮನಃಶಬ್ದವಾಚ್ಯನಾಗುತ್ತಾನೆ. (ಮನಸ್ಸು ಮಾತ್ರ ಜೀವನಿಗೆ ಉಪಾಧಿಯಾಗಿರುತ್ತದೆ.) ಅದೇ ಜೀವಾತ್ಮನು ಜಾಗ್ರತ್ ಸ್ವಪ್ನಗಳಿಗೆ ಸಂಬಂಧಿಸಿದ ಉಪಾಧಿಗಳು ವಿರತವಾದಾಗ ಉಪಾಧಿಕೃತ ವಿಶೇಷವಿಲ್ಲದ್ದರಿಂದ ತನ್ನಲ್ಲಿಯೇ ಅಡಗಿ ಹೋದಂತಾಗುತ್ತಾನೆ. ಆದ್ದರಿಂದ 'ಸ್ವಮಪೀತೋ ಭವತಿ' (ಛಾಂ. 6-8-1) ತನ್ನಲ್ಲಿ ಆತ್ಮನು ಲಯ ಹೊಂದುತ್ತಾನೆ-ಎಂದು ಶ್ರುತಿಯು ಹೇಳುತ್ತದೆ.

**405**

**ಸುಷುಪ್ತಿಕಾಲೇ ಚ ಪರೇಣ ಬ್ರಹ್ಮಣಾ ಜೀವ ಏಕತಾಂ ಗಚ್ಛತಿ | ಪರಸ್ಮಾಚ್ಚ ಬ್ರಹ್ಮಣಃ ಪ್ರಾಣಾದಿಕಂ ಜಗಜ್ಜಾಯತ ಇತಿ ವೇದಾಂತಮರ್ಯಾದಾ**

**-ಸೂ.ಭಾ. 1-4-18**

ಸುಷುಪ್ತಿ ಕಾಲದಲ್ಲಿ ಜೀವವು ಪರಬ್ರಹ್ಮದೊಡನೆ ಏಕವಾಗಿಬಿಡುತ್ತದೆ. ಆ ಪರಬ್ರಹ್ಮದಿಂದ ಪ್ರಾಣವೇ ಮೊದಲಾದ ಜಗತ್ತು ಹುಟ್ಟುತ್ತದೆ ಎನ್ನುವುದು ವೇದಾಂತ ಸಿದ್ಧಾಂತ.

"ಏತಸ್ಮಾದಾತ್ಮನಃ ಪ್ರಾಣಾಃ ಯಥಾಯತನಂ ವಿಪ್ರತಿಷ್ಠಂತೇ ಪ್ರಾಣೇಭ್ಯೋ ದೇವಾಃ ದೇವೇಭ್ಯೋ ಲೋಕಾಃ" (ಕಾ.ಬ್ರಾ. ಉಪ. 4-19) ಇತ್ಯಾದಿ ಶ್ರುತಿಗಳು ಇದಕ್ಕೆ ಪ್ರಮಾಣ. ಈ ಜೀವನಿಗೆ ಬ್ರಹ್ಮಜ್ಞಾನವಾಗಿರುವುದಿಲ್ಲವಾದ್ದರಿಂದ ಅವಿದ್ಯೆ ಉಳಿದುಕೊಂಡಿರುತ್ತದೆ. ಆದ್ದರಿಂದ ಮತ್ತೆ ಜಾಗರಣವಾಗಿ ಸಂಸಾರ ಪ್ರಾರಂಭವಾಗುತ್ತದೆ.

**406**

**ಅಂತರಾಲೇ ತ್ವವಿಜ್ಞಾನಂ ಮೂರ್ಛಿತದದೇವ | -ಛಾಂ. 5-10-6**

ದೇಹಾಂತರವನ್ನು ಪ್ರವೇಶಿಸುವುದಕ್ಕೂ ನಡುವೆ ಧಾನ್ಯ, ರೇತಸ್ಸು-ಮುಂತಾದ ರೂಪದಲ್ಲಿದ್ದಾಗ ಜೀವನಿಗೆ ಜ್ಞಾನವಿರುವುದಿಲ್ಲ. ಮೂರ್ಛೆ ಹೋದವನಂತೆ ಇರುತ್ತಾನೆ.

ಆ ಸಮಯದಲ್ಲಿ ಆತನ ಕರ್ಮವು ಯಾವ ಕ್ರಿಯೆಯನ್ನೂ ಆರಂಭಿಸಿರುವುದಿಲ್ಲವಾದ್ದರಿಂದ ಜ್ಞಾನಕ್ಕೆ ನಿಮಿತ್ತವಿರುವುದಿಲ್ಲ.

**407**

**ನ ಹ್ಯಾತ್ಮಸಂಬಂಧಿನಿ ಮನಸಿ ಪ್ರಚಲಿತೇ ದುಃಖಕ್ಷಯೋಽಸ್ತ್ಯ ವಿವೇಕೀನಾಮ್ |**
**-ಮಾಂಡೂಕ್ಯ 3-40**

ಆತ್ಮ ಸಂಬಂಧಿಯಾದ ಮನಸ್ಸು ಚಲಿಸಿದರೆ ಅಂತಹ ಅವಿವೇಕಿಗಳಿಗೆ ದುಃಖವು ನಾಶವಾಗಲೇ ಆರದು.

ಮನಸ್ಸಿನ ಚಲನೆಯೇ ದುಃಖಕ್ಕೆ ಕಾರಣ. ಸುಷುಪ್ತಿಯಲ್ಲಿ ಮನಸ್ಸಿನ ಅಲುಗಾಟವಿಲ್ಲವಾದ್ದರಿಂದ ದುಃಖದ ಸ್ಪರ್ಶವೂ ಇಲ್ಲವೆಂಬುದು ಅನುಭವಸಿದ್ಧವಾದದ್ದು.

**408**

**ನ ಚ ಸ್ವಪ್ನೋ ನಾಮ ಅಪೂರ್ವಂ ದರ್ಶನಮ್ | ಪೂರ್ವದೃಷ್ಟ ಸ್ಮೃತಿರ್ಹಿ ಸ್ವಪ್ನಃ ಪ್ರಾಯೇಣ | -ಬೃಹ. 4-3-9**

ಸ್ವಪ್ನವೇನೂ ಅಪೂರ್ವದರ್ಶನವಲ್ಲ. ಸಾಮಾನ್ಯವಾಗಿ ಹಿಂದೆ ಅನುಭವಿಸಿದ್ದರ ಸ್ಮರಣೆಯೇ ಸ್ವಪ್ನವೆನಿಸುತ್ತದೆ.

ಜಾಗ್ರತ್ತಿನಲ್ಲಿ ಅನುಭವಿಸಿದ ವಸ್ತುವಿಗೆ ಅಥವಾ ಕ್ರಿಯೆಗೆ ಸದೃಶ್ಯವಾದದ್ದು, ಆಲೋಚಿಸಿದ್ದು-ಸಹ ಸ್ವಪ್ನದಲ್ಲಿ ಕಾಣಬಹುದಾದ್ದರಿಂದ 'ಸಾಮಾನ್ಯವಾಗಿ' ಎಂದು ಹೇಳಿದ.

**409**

**ತಸ್ಮಾದರ್ಧಸಂಪತ್ತಿಂ ಬ್ರಹ್ಮವಿದಃ ಇಚ್ಛಂತಿ | ಯತ್ತೂಕ್ತಂ ನ ಪಂಚಮೀ ಕಾಚಿದವಸ್ಥಾ ಪ್ರಸಿದ್ಧಾಸ್ತೀತಿ | ನೈಷ ದೋಷಃ | ಕಾದಾಚಿತ್ಕೀಯಮವಸ್ಥೇತಿ ನ ಪ್ರಸಿದ್ಧಾ ಸ್ಯಾತ್ |** **-ಸೂ.ಭಾ. 3-2-10**

ಮೂರ್ಛೆಯನ್ನು ಅರ್ಧಸಂಪತ್ತಿಯೆಂಬ ಅವಸ್ಥೆಯೆಂದು ಬ್ರಹ್ಮವಿದರು ಒಪ್ಪುತ್ತಾರೆ. ಐದನೆಯ ಅವಸ್ಥೆ ಇಲ್ಲವೆಂದು ಹಿಂದೆ ಹೇಳಿದೆಯಲ್ಲ ಎಂದರೆ ಅದೇನೂ ದೋಷವಲ್ಲ. ಅರ್ಧಸಂಪತ್ತಿಯೆಂಬ ಅವಸ್ಥೆ ಯಾವಾಗಲೋ ಒಮ್ಮೆ ಬರತಕ್ಕದ್ದೆಂದು ಪ್ರಸಿದ್ಧವಾಗಿಲ್ಲ.

ಜಾಗ್ರತ್ ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳು, ಮರಣವೆಂಬ ಅವಸ್ಥೆಯೂ ಪ್ರಸಿದ್ಧವಾದವು. ಮೂರ್ಛಾವಸ್ಥೆಯೆಂಬ ಐದನೆಯದೂ ಇದೆ. ಅದು ಪ್ರಸಿದ್ಧವಲ್ಲವೆಂಬುದಷ್ಟೇ ಭೇದ. ಅದು ಯಾವಾಗಲೂ, ಎಲ್ಲರಿಗೂ ನಿಯಮೇನ ಇರುವ ಅವಸ್ಥೆಯಲ್ಲ.



# ೧೮ ನಿವೃತ್ತಿ - ಸಂನ್ಯಾಸ

ವೈದಿಕ ಧರ್ಮವು ಪ್ರವೃತ್ತಿಲಕ್ಷಣ, ನಿವೃತ್ತಿಲಕ್ಷಣ- ಎಂದು ಎರಡು ವಿಧವಾಗಿದೆ. ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥಾಶ್ರಮಗಳಲ್ಲಿ ಪ್ರವೃತ್ತಿಧರ್ಮವೂ ಸಂನ್ಯಾಸದಲ್ಲಿ ನಿವೃತ್ತಿಧರ್ಮವೂ ಕಂಡುಬರುತ್ತವೆ. ಬ್ರಹ್ಮಚರ್ಯವು ಗೃಹಸ್ಥಾಶ್ರಮದ ನಿರ್ವಹಣೆಗೆ ಬೇಕಾದ ಸಿದ್ಧತೆಯನ್ನೊದಗಿಸುತ್ತದೆ. ಗೃಹಸ್ಥಾಶ್ರಮದಲ್ಲಿ ಪ್ರವೃತ್ತಿ ಮಾರ್ಗವು ಪೂರ್ಣರೂಪದಲ್ಲಿ ಗೋಚರಿಸುತ್ತದೆ. ವಾನಪ್ರಸ್ಥಾಶ್ರಮದಲ್ಲಿ ನಿವೃತ್ತಿಗೆ ಬೇಕಾದ ಸಿದ್ಧತೆಯುಂಟಾಗಿ ಸಂನ್ಯಾಸದಲ್ಲಿ ನಿವೃತ್ತಿಮಾರ್ಗವೇ ಶ್ರೇಯಸ್ಕಾಮಿಯಾದವನಿಗೆ ಪರಮಲಕ್ಷ್ಯವೆಂಬುದು ಸ್ಪಷ್ಟವಾಗುತ್ತದೆ. ಸಂನ್ಯಾಸವೆಂದರೆ ಸಂಪೂರ್ಣವಾಗಿ ತ್ಯಜಿಸುವುದು ಎಂದು ಶಬ್ದಾರ್ಥ. ಭೋಗಲಾಲಸೆಯನ್ನೂ ಪ್ರವೃತ್ತಿಧರ್ಮವನ್ನೂ ಸಂಪೂರ್ಣವಾಗಿ ತ್ಯಜಿಸುವುದೇ ಅದು.

ಮುಮುಕ್ಷುವಾದವನು ಸಂನ್ಯಾಸವನ್ನು ಸ್ವೀಕರಿಸಬೇಕೆಂದೂ ಜ್ಞಾನಿಯು ಸ್ವತಃ ಸಂನ್ಯಾಸಿಯೇ ಆಗಿಬಿಡುವನೆಂದೂ ಆಚಾರ್ಯರು ಬಹಳ ಕಡೆಗಳಲ್ಲಿ ಹೇಳಿದ್ದಾರೆ. ಪರಮಹಂಸ ಪರಿವ್ರಾಜಕನಿಗೇ ಮೋಕ್ಷವೆಂಬ ಮಾತೂ ಕಂಡು ಬರುತ್ತದೆ. ಮುಮುಕ್ಷುವಾದವನು ಸ್ವೀಕರಿಸುವುದು ವಿವಿದಿಷಾಸಂನ್ಯಾಸ. ಜ್ಞಾನಿಗೆ ಸ್ವತಃ ಪ್ರಾಪ್ತವಾಗುವುದು ವಿದ್ವತ್‌ಸನ್ಯಾಸ. ಗೃಹಸ್ಥನಿಗೂ ಸಮ್ಯಗ್‌ಜ್ಞಾನವು ಬರುತ್ತದೆಯೆಂದೂ ಅನಂತರ ಕರ್ಮದಲ್ಲಿ ಫಲವೇನೂ ಇಲ್ಲದ್ದರಿಂದ ಪಾರಿವ್ರಾಜ್ಯವು ಅರ್ಥಾತ್ ಸಿದ್ಧವಾಗುತ್ತದೆಯೆಂದು ಆಚಾರ್ಯರು ಅಲ್ಲಲ್ಲಿ ಬರೆದಿದ್ದಾರೆ. **“ಯಸ್ತು ಪ್ರಾರಬ್ಧಕರ್ಮಾ ಸನ್ ಉತ್ತರಕಾಲಮುತ್ಪನ್ನಾತ್ಮಸಮ್ಯಗ್ ದರ್ಶನಃ ಸ್ಯಾತ್, ಸಃ ಸರ್ವಕರ್ಮಾಣಿ ಪ್ರಯೋಜನಮಪಶ್ಯನ್ ಸಸಾಧನಂ ಕರ್ಮ ಪರಿತ್ಯಜತ್ಯೇವ”** (ಗೀ.ಭಾ. 4-19) **‘ಏತೇನ ಗೃಹಸ್ಥಸ್ಯ ಏಕತ್ವವಿಜ್ಞಾನೇ ಸತಿ ಪಾರಿವ್ರಾಜ್ಯಸಮರ್ಥಸಿದ್ಧಮ್”** (ಛಾಂ. ಭಾ. 2-23-1) ಇತ್ಯಾದಿ ವಾಕ್ಯಗಳು ಆಚಾರ್ಯರ ಭಾಷ್ಯಗಳಲ್ಲುಂಟು. ಸಮ್ಯಗ್ ದರ್ಶನವಾದ ಮೇಲೆ ಅವನು ಮುಕ್ತನೇ ಸರಿ. **“ಸಃ ಕುತಶ್ಚಿನ್ನಿಮಿತ್ತಾತ್ ಕರ್ಮಪರಿತ್ಯಾಗಾಸಂಭವೇ ಸತಿ ಕರ್ಮಣಿ ಫಲೇ ಚ ಸಂಗರಹಿತತಯಾ ಸ್ವಪ್ರಯೋಜನಾಭಾವಾತ್ ಲೋಕಸಂಗ್ರಹಾರ್ಥಂ ಪೂರ್ವವತ್ ಕರ್ಮಣಿ ಪ್ರವೃತ್ತೋಽಪಿ ನೈವ ಕಿಂಚಿತ್ ಕರೋತಿ ಜ್ಞಾನಾಗ್ನಿದಗ್ಧಕರ್ಮತ್ವಾತ್| ತದೀಯಂ ಕರ್ಮ ಅಕರ್ಮೈವ ಸಂಪದ್ಯತೇ”** (ಗೀ. ಭಾ. 4-19) ಇತ್ಯಾದಿ ಪಂಕ್ತಿಗಳೂ ಭಾಷ್ಯದಲ್ಲಿವೆ. ಆದ್ದರಿಂದ “ಸಂನ್ಯಾಸಿಗೇ ಬ್ರಹ್ಮಜ್ಞಾನವಾಗುತ್ತದೆ. ಸಂನ್ಯಾಸಿಗೇ ಮೋಕ್ಷವಾಗುತ್ತದೆ” ಎಂದು ಶ್ರೀಶಂಕರರ ಬೋಧೆಯೆಂಬುದು ಅಪಪ್ರಚಾರವೇ ಸರಿ.

ಮುಮುಕ್ಷುವು ಸಂನ್ಯಾಸವನ್ನು ಸ್ವೀಕರಿಸುವುದು ಉತ್ತಮ. ಆಗ ಕರ್ಮ ನಿಮಿತ್ತವಾಗಿ ಮಾನಸವಿಕ್ಷೇಪವಿಲ್ಲದ್ದರಿಂದ ಶಮದಮಾದಿ ಜ್ಞಾನಸಾಧನಗಳನ್ನು ಅಭ್ಯಾಸ ಮಾಡುವುದು ಸುಲಭವಾಗುತ್ತದೆ. ಜನ್ಮಾಂತರದ ಪುಣ್ಯದಿಂದಲೂ ಅತ್ಯಂತ ಪರಿಶ್ರಮದಿಂದಲೂ ಗೃಹಸ್ಥನಿಗೆ ಆತ್ಮೈಕತಾಜ್ಞಾನವು ಪ್ರಾಪ್ತವಾಗಬಹುದು. ಅವನಿಗೆ ಲೋಕ ಸಂಗ್ರಹಾದಿ ವಿವಕ್ಷೆಯಿಲ್ಲದಿದ್ದರೆ, ಕರ್ಮದಿಂದ ತನಗೆ ಆಗಬೇಕಾದ್ದೇನೂ ಇಲ್ಲವೆಂದು ಸ್ವತಃ ಸಂನ್ಯಾಸಿಯಾಗಿಯೇ ಬಿಡುತ್ತಾನೆ-ಎಂಬುದು ಆಚಾರ್ಯರ ಸಿದ್ಧಾಂತವಾಗಿದೆ. ಜನಕರಾಜ, ನಚಿಕೇತ, ಧರ್ಮವ್ಯಾಧ, ವಿದುರ-ಮೊದಲಾದವರು ಜ್ಞಾನಿಗಳು, ಅವರೇನೂ ಸಂನ್ಯಾಸಿಗಳಲ್ಲ. ಆಧಿಕಾರಿಪುರುಷರಾದ ಯಮಧರ್ಮ, ವಸಿಷ್ಠಾದಿ ಜ್ಞಾನಿಗಳೂ ಶ್ರೀಕೃಷ್ಣನೇ ಮೊದಲಾದ ಅವತಾರಿಗಳೂ ಸಂನ್ಯಾಸಿಗಳಾಗಿರಲಿಲ್ಲ. ಅವರು ಗೃಹಸ್ಥರಾಗಿಯೇ ಇದ್ದು ಮಾರ್ಗದರ್ಶನ ಮಾಡಿದ್ದಾರೆಂಬುದನ್ನು ಮನಗಾಣಬೇಕು.

**410**

**ಅಸ್ಯ ಗೀತಾಶಾಸ್ತ್ರಸ್ಯ ಸಂಕ್ಷೇಪತಃ ಪ್ರಯೋಜನಂ ಪರಂ ನಿಃಶ್ರೇಯಸಂ ಸಹೇತುಕಸ್ಯ ಸಂಸಾರಸ್ಯ ಅತ್ಯಂತೋಪರಮಲಕ್ಷಣಮ್ | ತಚ್ಚ ಸರ್ವಕರ್ಮ ಸಂನ್ಯಾಸ ಪೂರ್ವಕಾತ್ ಆತ್ಮಜ್ಞಾನ ನಿಷ್ಠಾರೂಪಾತ್ ಧರ್ಮಾತ್ ಭವತಿ |**

**-ಗೀತಾ, ಉಪೋದ್ಘಾತ**

ಸಂಕ್ಷೇಪವಾಗಿ ಹೇಳುವುದಾದರೆ, ಈ ಗೀತಾ ಶಾಸ್ತ್ರಕ್ಕೆ ಶ್ರೇಷ್ಠವಾದ ನಿಃಶ್ರೇಯಸವೇ ಪ್ರಯೋಜನ. ನಿಃಶ್ರೇಯಸವೆಂದರೆ ಕಾರಣಸಹಿತವಾಗಿ ಸಂಸಾರವು ಮತ್ತೆ ಬರದಂತೆ ಇಲ್ಲವಾಗುವುದು. (ಸಂಸಾರಕಾರಣ ಅವಿದ್ಯೆ). ಅಂತಹ ಮೋಕ್ಷವು ಸರ್ವಕರ್ಮಗಳನ್ನು ಸಂನ್ಯಾಸಮಾಡಿ ಆತ್ಮಜ್ಞಾನದಲ್ಲಿಯೇ ನಿಂತುಬಿಡುವುದೆಂಬ ಧರ್ಮದಿಂದ ಆಗುತ್ತದೆ.

**411**

**ನ ಹಿ ಬ್ರಹ್ಮಾತ್ಮೈಕತ್ವದರ್ಶನೇನ ಸಹ ಕರ್ಮ ಸ್ವಪ್ನೇಽಪಿ ಸಂಪಾದಯಿತುಂ ಶಕ್ಯಮ್**

**-ಮುಂಡಕ 1-1**

ಬ್ರಹ್ಮರೂಪನಾದ ಆತ್ಮನು ಒಬ್ಬನೇ ಎಂಬ ಜ್ಞಾನದ ಜೊತೆಗೆ ಕರ್ಮದ ಅನುಷ್ಠಾನವು ಸ್ವಪ್ನದಲ್ಲಿಯೂ ಆಗಲು ಶಕ್ಯವಿಲ್ಲ.

ಎಚ್ಚರವಲ್ಲಾಗದ ಕಾರ್ಯವು ಕನಸಿನಲ್ಲಿ ಆಗುತ್ತದೆ. ಅಕರ್ತೃವಾದ ಬ್ರಹ್ಮ ನಾನು ಎಂದುಕೊಂಡಿರುವಾಗ ಕನಸಿನಲ್ಲಿಯೂ ಕರ್ತೃತ್ವ ಬುದ್ಧಿಯು ಬರಲಾರದು.

**412**

**ಅತ ಉತ್ಪನ್ನವಿದ್ಯಸ್ಯ ಕರ್ಮಾರಂಭೋಽನುಪಪನ್ನಃ |**

**-ಕೇನ ವಾಕ್ಯಭಾಷ್ಯ (ಪೀಠಿಕೆ)**

ಯಾರಿಗೆ ವಿದ್ಯೆ ಉತ್ಪನ್ನವಾಗಿದೆಯೋ ಅವನು ಕರ್ಮದಲ್ಲಿ ತೊಡಗುತ್ತಾನೆಂಬುದು ಹೊಂದುವುದಿಲ್ಲ.

**413**

**ನ ಹಿ ಕರ್ಮಿಣೋ ಬ್ರಹ್ಮನಿಷ್ಠತಾ ಸಂಭವತಿ, ಕರ್ಮಾತ್ಮ ಜ್ಞಾನಯೋಃ ವಿರೋಧಾತ್ |** **-ಮುಂ. ಖಂ. 2. ಮಂತ್ರ 12**

ಕರ್ಮಿಯು ಬ್ರಹ್ಮನಿಷ್ಠನಾಗಲು ಶಕ್ಯವಿಲ್ಲ. ಏಕೆಂದರೆ, ಕರ್ಮಕ್ಕೂ ಆತ್ಮಜ್ಞಾನಕ್ಕೂ ಪರಸ್ಪರ ವಿರೋಧ ಉಂಟು.

**414**

**ವಿರೋಧಾದೇವ ಚ ವಿದ್ಯಾ ಮೋಕ್ಷಂ ಪ್ರತಿ ನ ಕರ್ಮಾಣ್ಯಪೇಕ್ಷತೇ |**

**-ತೈತ್ತಿರೀಯ ಶೀಕ್ಷಾ. 11-4**

ವಿರೋಧವಿರುವುದರಿಂದಲೇ ವಿದ್ಯೆಯು ಮೋಕ್ಷಕ್ಕಾಗಿ ಕರ್ಮಗಳನ್ನಪೇಕ್ಷಿಸುವುದಿಲ್ಲ.

ವಿದ್ಯೆಯಿದ್ದಲ್ಲಿ ಕರ್ಮವಿರುವುದಿಲ್ಲ. ಅದು ಜೊತೆಗಿರುತ್ತದೆಯೆಂಬುದು ವಿರುದ್ಧ, ಜ್ಞಾನಿಗೆ ಕರ್ತೃತ್ವಬುದ್ಧಿ ಇಲ್ಲ. ಕರ್ತೃತ್ವಬುದ್ಧಿಯಿಲ್ಲದಾಗ ಕರ್ಮವನ್ನು ಮಾಡುತ್ತಾನೆಂದು ವಿರುದ್ಧ. ವಿದ್ಯೆ = ಆತ್ಮಜ್ಞಾನ.

**415**

**ತಸ್ಮಾತ್ ಬ್ರಹ್ಮವಿದೋ ನಾಸ್ತಿ ಕರ್ಮ, ಸಾಧನಂ ವಾ |**

**-ಬೃಹ. 3-5-1**

ಬ್ರಹ್ಮಜ್ಞಾನಿಗೆ ಕರ್ಮವಾಗಲಿ ಕರ್ಮಸಾಧನವಾದ ಯಜ್ಞೋಪವೀತ ಮೊದಲಾದ್ದಾಗಲಿ ಇಲ್ಲ.

**ಅಕಾಮಸ್ಯ ಹಿ ಕ್ರಿಯಾನುಪಪತ್ತೇಃ | ಅಕಾಮಯಮಾನೋ ಮುಚ್ಯತ ಏವ |**
**-ಬೃಹ. 4-4-6**

ಕಾಮನೆಯಿಲ್ಲದವನಿಗೆ ಕ್ರಿಯೆ ಸಂಭವಿಸುವುದಿಲ್ಲವಷ್ಟೆ. ಕಾಮನಾರಹಿತನು ಮುಕ್ತನಾಗಿಯೇ ಆಗುವನು.

ಜ್ಞಾನಿಯು ನಿಷ್ಕಾಮನಾದ್ದರಿಂದ ನೈಷ್ಕರ್ಮ್ಯವು ಸ್ವತಃ ಸಿದ್ಧ.

**417**

**ಸ್ವಾತ್ಮನಿ ಚ ಕಾಮಾನುಪಪತ್ತಿಃ ನಿತ್ಯಪ್ರಾಪ್ತತ್ವಾತ್ | -ತೈತ್ತಿರೀಯ ಶೀಕ್ಷಾ**

ತಾನೇ ಆದ ಆತ್ಮನ ವಿಷಯದಲ್ಲಿ ಕಾಮನೆ ಹೊಂದುವುದಿಲ್ಲ. ಏಕೆಂದರೆ, ಅಂತಹ ಆತನು ನಿತ್ಯವಾಗಿ ದೊರಕಿಯೇ ಇದ್ದಾನೆ.

**418**

**ಬ್ರಹ್ಮವಿದಶ್ಚ ಆಪ್ತಕಾಮತ್ವಾತ್ ಆಪ್ತಕಾಮಸ್ಯ ಕಾಮಾನುಪತ್ತೇಃ |**
**-ಬೃಹ. 2-4-1**

ಬ್ರಹ್ಮಜ್ಞಾನಿಯು ಆಪ್ತಕಾಮನಾಗಿರುವುದರಿಂದ ಆಪ್ತಕಾಮನಿಗೆ ಮತ್ತೆ ಕಾಮವು ಇರಲು ಶಕ್ಯವಿಲ್ಲ.

ಕಾಮನೆಯಿಲ್ಲದ ಮೇಲೆ ಅವನು ಕರ್ಮದಲ್ಲಿ ತೊಡಗುವುದಿಲ್ಲವೆಂದು ಅಭಿಪ್ರಾಯ.

**419**

**ನ ಹ್ಯಾತ್ಮಾನಮವಾಪ್ತಾರ್ಥಂ ಬ್ರಹ್ಮ ಮನ್ಯಮಾನಃ ಪ್ರವೃತ್ತಿಂ ಪ್ರಯೋಜನವತೀಂ ಪಶ್ಯತಿ | -ಕೇನ ವಾಕ್ಯಭಾಷ್ಯ-ಉಪೋದ್ಘಾತ**

ತಾನು ಆಪ್ತಕಾಮನಾದ ಬ್ರಹ್ಮವೆಂದು ತಿಳಿದವನಿಗೆ ಪ್ರವೃತ್ತಿಯಲ್ಲಿ ಯಾವ ಪ್ರಯೋಜನವೂ ಕಾಣುವುದಿಲ್ಲ.

ಆದ್ದರಿಂದ ಅವನು ಸಂನ್ಯಾಸಿಯಾಗಿಬಿಡುತ್ತಾನೆಂದು ಭಾವ, ಪ್ರಾರಬ್ಧವಶದಿಂದ

ಅಥವಾ ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡಲೂಬಹುದು. ಪರಮಾರ್ಥದಲ್ಲಿ ಅದು ಕರ್ಮವಲ್ಲ.

**420**

**ಅಲಂಕಾರೋ ಹ್ಯಯಮಸ್ಮಾಕಂ ಯದ್ ಬ್ರಹ್ಮಾತ್ಮಾವಗತೌ ಸತ್ಯಾಂ ಸರ್ವಕರ್ತವ್ಯತಾಹಾನಿಃ ಕೃತಕೃತ್ಯನಾ ಚೇತಿ | -ಸೂ.ಭಾ. 1-1-4**

ಬ್ರಹ್ಮವನ್ನು ಅರಿತುಕೊಂಡಾಗ ಕರ್ತವ್ಯವಾವುದೂ, ಉಳಿಯುವುದಿಲ್ಲ. ಕೃತಕೃತ್ಯತೆಯೂ ಉಂಟಾಗುತ್ತದೆಯೆಂಬುದು ನಮ್ಮ ಸಿದ್ಧಾಂತಕ್ಕೆ ಭೂಷಣವೇ ಸರಿ.

**421**

**ತಸ್ಮಾತ್ 'ಬ್ರಹ್ಮೈವೇದಂ ಸರ್ವಂ' ಇತ್ಯಭಿಜಾನತೋ ವಿದುಷಃ ಕರ್ಮಾಭಾವಃ | ಕಾರಕಬುದ್ಧ್ಯಭಾವಾಚ್ಚ | ನ ಹಿ ಕಾರಕಬುದ್ಧಿರಹಿತಂ ಯಜ್ಞಾಖ್ಯಂ ಕರ್ಮ ದೃಷ್ಟಮ್ | -ಗೀತಾ 4-24**

ಆದ್ದರಿಂದ 'ಬ್ರಹ್ಮೈವೇದಂ ಸರ್ವಂ' ಎಂದು ಚೆನ್ನಾಗಿ ತಿಳಿದಿರುವ ಜ್ಞಾನಿಗೆ ಸರ್ವಕರ್ಮಗಳೂ ಇಲ್ಲ. ಕಾರಕವು ಸತ್ಯವೆಂಬ ಬುದ್ಧಿಯಿಲ್ಲದಿರುವುದರಿಂದಲೂ ಅವನಿಗೆ ಕರ್ಮವಿಲ್ಲ. ಏಕೆಂದರೆ, ಕಾರಕಬುದ್ಧಿಯಿಲ್ಲದೆ ಯಜ್ಞವೆಂಬ ಕರ್ಮವಿರುವುದನ್ನು ನಾವು ಎಲ್ಲಿಯೂ ಕಂಡಿಲ್ಲ.

**422**

**ಆತ್ಮತತ್ತ್ವವಿದಃ ಸಮ್ಯಗ್ದರ್ಶನವಿರುದ್ಧೋ ಮಿಥ್ಯಾಜ್ಞಾನಹೇತುಕಃ ಕರ್ಮಯೋಗಃ ಸ್ವಪ್ನೇಽಪಿ ನ ಸಂಭಾವಯಿತುಂ ಶಕ್ಯತೇ | -ಗೀತಾ 5-1**

ಆತ್ಮತತ್ತ್ವವನ್ನು ತಿಳಿದವನಿಗೆ ಸಮ್ಯಗ್ದರ್ಶನಕ್ಕೆ ವಿರುದ್ಧವಾದ ಮತ್ತು ಮಿಥ್ಯಾಜ್ಞಾನ ಜನ್ಮವಾದ ಕರ್ಮ ಸಂಬಂಧವು ಇರಬಹುದೆಂದು ಕನಸಿನಲ್ಲಿಯೂ ಕಲ್ಪಿಸುವುದಕ್ಕಾಗದು.

ಸಂನ್ಯಾಸ, ಕರ್ಮಯೋಗಗಳೆರಡೂ ನಿಃಶ್ರೇಯಸಕರವೆಂದು (ಗೀತೆ 1-2) ಹೇಳಿರುವುದು ಅನಾತ್ಮವಿದನಿಗೆ. ಆತ್ಮವಿದನಿಗೆ ಸಂನ್ಯಾಸವು ಸ್ವತಃಸಿದ್ಧ. ಜ್ಞಾನಪ್ರಾಪ್ತಿಯಾದ ಮೇಲೆ ಕರ್ತೃತ್ವಬುದ್ಧಿಯಿಲ್ಲದಿರುವುದರಿಂದ ಅವನು ಮಾಡುವ ಕರ್ಮವೂ ಕರ್ಮವೆನಿಸುವುದಿಲ್ಲ.

**423**

**ಜ್ಞಾನಾಗ್ನಿದಗ್ಧಕರ್ಮತ್ವಾತ್ ತದೀಯಂ ಕರ್ಮ ಅಕರ್ಮೈವ ಸಂಪದ್ಯತೇ |**

**-ಗೀತಾ 4-19**

ಜ್ಞಾನವೆಂಬ ಬೆಂಕಿಯಿಂದ ಜ್ಞಾನಿಯ ಕರ್ಮವು ಸುಟ್ಟುಹೋಗಿರುವುದರಿಂದ ಅವನ ಕರ್ಮವು ಅಕರ್ಮವೇ ಆಗಿರುತ್ತದೆ.

ಜ್ಞಾನಿಯು ಲೋಕಸಂಗ್ರಹಕ್ಕಾಗಿ ಮೊದಲಿನಂತೆ ಕರ್ಮದಲ್ಲಿ ತೊಡಗಿದ್ದರೂ ಅವನು ಏನನ್ನೂ ಮಾಡುತ್ತಿಲ್ಲವೆಂದೇ ತಿಳಿಯಬೇಕು. ಕರ್ಮಯೋಗವನ್ನಾಚರಿಸುವ ಗೃಹಸ್ಥನಿಗೂ ಕ್ರಮೇಣ ಜ್ಞಾನಪ್ರಾಪ್ತಿಯಾಗುತ್ತದೆಯೆಂದು ಇಲ್ಲಿ ಸೂಚಿತವಾಗಿದೆ.

**424**

**ಅವಿದುಷಾಪಿ ಮುಮುಕ್ಷುಣಾ ಪಾರಿವ್ರಜ್ಯಂ ಕರ್ತವ್ಯಮೇವ | ತಥಾಚ 'ಶಾಂತೋ ದಾಂತಃ' ಇತ್ಯಾದಿ ಶ್ರುತಿವಚನಂ ಪ್ರಮಾಣಮ್ |**

**-ಐತರೇಯ (ಉಪೋದ್ಘಾತ)**

ಜ್ಞಾನೋತ್ಪತ್ತಿಯಾಗದವನು ಮುಮುಕ್ಷುವಾಗಿದ್ದರೆ, ಅವನೂ ಸಂನ್ಯಾಸವನ್ನು ತೆಗೆದುಕೊಳ್ಳಲೇಬೇಕು. 'ಶಾಂತೋ ದಾಂತಃ .........' ಇತ್ಯಾದಿ ಶ್ರುತಿಯು ಅದಕ್ಕೆ ಪ್ರಮಾಣ.

ಇದು ವಿವಿದಿಷಾ ಸಂನ್ಯಾಸ. ಶಮದಮಾದಿಗಳ ಸಾಧನೆಗೆ ಸಂನ್ಯಾಸವು ತುಂಬ ಉಪಯುಕ್ತವಾಗುತ್ತದೆ. ಗೃಹಸ್ಥನಿಗೆ ರಾಗದ್ವೇಷಾದಿಗಳುಂಟಾಗುವ ಪ್ರಸಂಗಗಳೇ ಅಧಿಕವಾದ್ದರಿಂದ ಶಮದಿಮಾದಿಗಳನ್ನು ಪಾಲಿಸುತ್ತ ವೈರಾಗ್ಯವನ್ನು ತಳೆದಿರುವುದು ಅತಿಕಷ್ಟಕರ. ಆದ್ದರಿಂದ ಸಂನ್ಯಾಸದ ಸ್ತುತಿ ಇದೆಂದು ತಿಳಿಯಬೇಕು.

**425**

**ಜ್ಞಾನಾಭ್ಯಾಸಶ್ಚ ಪ್ರಧಾನಿಮಿಹ ಯತೀನಾಮನುಷ್ಠೇಯಮ್ |**

**-ಸೂ.ಭಾಷ್ಯ 3-4-50**

ಜ್ಞಾನಾಭ್ಯಾಸವೇ ಯತಿಗಳಿಗೆ ಪ್ರಧಾನವಾಗಿ ಅನುಷ್ಠೇಯವಾದದ್ದು.

ಜ್ಞಾನಾಭ್ಯಾಸ = ಜ್ಞಾನಸಾಧನಗಳ ಅಭ್ಯಾಸ.

**426**

**ತಸ್ಮಾದಾತ್ಮವಿದೋ ವ್ಯುತ್ಥಾನ ವ್ಯತಿರೇಕೇಣ ನ ಯಥಾಕಾಮಿತ್ವಂ ನ ಚಾನ್ಯತ್ ಕರ್ತವ್ಯಮಿತ್ಯೇತತ್ ಸಿದ್ಧಮ್ | -ಐತರೇಯ -ಉಪೋದ್ಘಾತ**

ಆದ್ದರಿಂದ ಆತ್ಮವಿದನಿಗೆ ವ್ಯುತ್ಥಾನದ ಹೊರತಾಗಿ ನಿಷಿದ್ಧಾಚರಣೆಯೂ ಇಲ್ಲ, ಏನನ್ನೂ ಮಾಡಬೇಕಾದ್ದೂ ಎಲ್ಲ ಎಂದು ಸಿದ್ಧವಾಯಿತು.

ಜ್ಞಾನಿಯು ಕರ್ಮಾದಿರಹಿತನಾದ್ದರಿಂದ ಶಾಸ್ತ್ರೀಯ ಕರ್ಮವನ್ನೇ ಮಾಡುವುದಿಲ್ಲ. ಇನ್ನು ಶಾಸ್ತ್ರನಿಷಿದ್ಧವಾದ್ದನ್ನು ಮಾಡುವುದಿಲ್ಲವೆಂಬುದು ಸ್ವತಃಸಿದ್ಧವಾಗುತ್ತದೆ.

**427**

**ತದ್ವ್ಯತಿರೇಕೇಣ ಚಾಸ್ತಿ ಆಶ್ರಮರೂಪಂ ಪಾರಿವ್ರಾಜ್ಯಂ ಬ್ರಹ್ಮಲೋಕಾದಿ ಫಲಪ್ರಾಪ್ತಿ ಸಾಧನಂ, ಯದ್ವಿಷಯಂ ಯಜ್ಞೋಪವೀತಾದಿ ಸಾಧನವಿಧಾನಂ ಲಿಂಗವಿಧಾನಂ ಚ | -ಬೃ. 3-5-1**

ಪರಮಹಂಸ ಪಾರಿವ್ರಾಜ್ಯಕ್ಕೆ ಬೇರೆಯಾದ ಮತ್ತು ಆಶ್ರಮರೂಪವಾಗಿ ಬ್ರಹ್ಮಲೋಕಾದಿ ಫಲವನ್ನು ಪಡೆಯಲು ಸಾಧನವಾದ ಸಂನ್ಯಾಸವೂ ಇದೆ. ಅದರ ವಿಷಯದಲ್ಲಿಯೇ ಸ್ಮೃತಿಗಳಲ್ಲಿ ಯಜ್ಞೋಪವೀತಾದಿ ಸಾಧನವನ್ನೂ ಲಿಂಗವನ್ನೂ ವಿಧಿಸಿದೆ.

ಸಂನ್ಯಾಸವು ಎರಡು ವಿಧ: ಆಶ್ರಮರೂಪಸಂನ್ಯಾಸ, ಪರಮಹಂಸ ಪಾರಿವ್ರಾಜ್ಯ ರೂಪ ಸಂನ್ಯಾಸ ಎಂದು. ಮೊದಲನೆಯದು ಧರ್ಮಶಾಸ್ತ್ರದಲ್ಲಿದೆ. ಇದಕ್ಕೆ ತ್ರಿದಂಡಿ ಸಂನ್ಯಾಸವೆನ್ನುತ್ತಾರೆ. ಈ ಸಂನ್ಯಾಸಿಗಳು ಕಮಂಡಲು, ದಂಡಗಳೆಂಬ ಲಿಂಗಗಳನ್ನು ಧರಿಸುತ್ತಾರೆ. ಎರಡನೆಯದು ಶ್ರುತ್ಯುಕ್ತವಾದ ಸಂನ್ಯಾಸ. ಇದು ಜ್ಞಾನಿಗೆ ಹೇಳಿಸಿದ್ದು. ಇದರಲ್ಲಿ ಲಿಂಗದ(ಚಿಹ್ನೆಯ) ಅವಶ್ಯಕತೆ ಇಲ್ಲ. ವಿವಿದಿಷಾಸಂನ್ಯಾಸದಲ್ಲಿಯೂ ಈ ಪ್ರಕಾರವು ಇದೆ.

**428**

**ತಸ್ಯೈವ ನಿತ್ಯಕರ್ಮಾನುಷ್ಠಾನೇನ ವಿಶುದ್ಧಾಂತಃಕರಣಸ್ಯ ಆತ್ಮಜ್ಞಾನಾಭಿಮುಖಸ್ಯ**

**ಕ್ರಮೇಣ ಜ್ಞಾನನಿಷ್ಠಾ|** **-ಗೀತಾ 18-10**

ನಿತ್ಯಕರ್ಮಾನುಷ್ಠಾನದಿಂದ ಅಂತಃಕರಣವು ಪರಿಶುದ್ಧವಾಗಿ ಯಾವಾತನು ಆತ್ಮಾಭಿಮುಖನಾಗಿರುತ್ತಾನೋ ಅವನಿಗೆ ಕ್ರಮವಾಗಿ ಜ್ಞಾನನಿಷ್ಠೆಯುಂಟಾಗುತ್ತದೆ.

**429**

**ಮೋಕ್ಷಸಾಧನ ಭೂತಾತ್ಮಜ್ಞಾನ ಪರಿಪಾಕಾರ್ಥತ್ವಾತ್ ಸಂನ್ಯಾಸಸ್ಯ |**
**-ಬೃ. 4-4-7**

ಮೋಕ್ಷಕ್ಕೆ ಕಾರಣವಾದದ್ದು ಆತ್ಮಜ್ಞಾನ. ಸಂನ್ಯಾಸವು ಆತ್ಮಜ್ಞಾನದ ಪರಿಪಾಕಕ್ಕಾಗಿ ಬೇಕಾಗುತ್ತದೆ.

**430**

**ಜ್ಞಾನಕರ್ಮನಿಷ್ಠಯೋಃ ಪರಸ್ಪರವಿರೋಧಾತ್ ಏಕಪುರುಷೇಣ ಯುಗಪದನುಷ್ಠಾನಮಶಕ್ಯಮ್ |** **-ಗೀತಾ 3-4 (ಅವತರಣಿಕೆ)**

ಜ್ಞಾನನಿಷ್ಠೆ-ಕರ್ಮನಿಷ್ಠೆಗಳು ಅನ್ಯೋನ್ಯ ವಿರುದ್ಧವಾಗಿರುವುದರಿಂದ ಅವೆರಡನ್ನೂ ಒಬ್ಬನೇ ಮನುಷ್ಯನು ಏಕಕಾಲದಲ್ಲಿ ಆಚರಿಸುವುದು ಶಕ್ಯವಾದ್ದಲ್ಲ.

**431**

**ಸಂಕಲ್ಪೈಃ ವರ್ಜಿತಾಃ ಮುಧೈವ ಚೇಷ್ಟಾಮಾತ್ರಾ ಅನುಷ್ಠೀಯಂತೇ | ಪ್ರವೃತ್ತೇನ ಚೇತ್ ಲೋಕಸಂಗ್ರಹಾರ್ಥಮ್ | ನಿವೃತ್ತೇನ ಚೇತ್ ಜೀವನ ಮಾತ್ರಾರ್ಥಮ್ |**
**-ಗೀತಾ 4.19**

ಕಾಮಸಂಕಲ್ಪಗಳಿಲ್ಲದೆ ಮಾಡುವ ಕ್ರಿಯೆಗಳು ಕೇವಲ ಶಾರೀರಕ ಚೇಷ್ಟೆಗಳು (ಕರ್ಮಗಳೆನಿಸುವುದಿಲ್ಲ). ಪ್ರವೃತ್ತಿಮಾರ್ಗದಲ್ಲಿರತಕ್ಕವನು ಲೋಕಸಂಗ್ರಹಕ್ಕಾಗಿ ಹಾಗೆ ಮಾಡುತ್ತಾನೆ. ನಿವೃತ್ತಿಮಾರ್ಗದವನು ಬರಿಯ ಪ್ರಾಣಧಾರಣೆಗಾಗಿ ಮಾಡುತ್ತಾನೆ.

ಪ್ರವೃತ್ತಿ ನಿವೃತ್ತಿ ಮಾರ್ಗಗಳಲ್ಲಿ ಕಂಡುಬರುವ ಈ ಕ್ರಿಯೆಗಳು ಜ್ಞಾನಿಗೆ ಸೋಂಕುವುದಿಲ್ಲ. ಅವುಗಳಿಂದಾಗುವ ಫಲದ ಸಂಬಂಧ ಅವನಿಗಿಲ್ಲ. ಪ್ರವೃತ್ತಿ

ಮಾರ್ಗದಲ್ಲಿರತಕ್ಕವನಿಗೂ ಆತ್ಮೈಕತ್ವಜ್ಞಾನವು ಹುಟ್ಟುತ್ತದೆಯೆಂಬುದು ಇಲ್ಲಿ ಸೂಚಿತವಾಗಿದೆ.

**432**

**ಅಯಂ ತು ಬ್ರಹ್ಮವಿದಾತ್ಮವಿದ್ಯಾಗ್ನಿನಾ ಸರ್ವಾಣಿ ಕರ್ಮಾಣಿ ಭಸ್ಮೀ ಕರೋತಿ| 'ಯಥೈಧಾಂಸಿ ಸಮಿದ್ಧೋಽಗ್ನಿಃ' ಇತ್ಯಾದಿ ಸ್ಮೃತೇಃ | ಶರೀರಾರಂಭಕ ಯೋಸ್ತು ಉಪಭೋಗೇನೈವ ಕ್ಷಯಃ | ಅತೋ ಬ್ರಹ್ಮವಿದಕರ್ಮಸಂಬಂಧೀ|**

**-ಬೃಹ. 4-4-22**

ಬ್ರಹ್ಮಜ್ಞಾನಿಯು ಆತ್ಮವಿದ್ಯೆಯೆಂಬ ಅಗ್ನಿಯಿಂದ ತನ್ನ ಸರ್ವಕರ್ಮಗಳನ್ನು ಭಸ್ಮ ಮಾಡಿಬಿಡುತ್ತಾನೆ. ಏಕೆಂದರೆ, 'ಉರಿಯುವ ಬೆಂಕಿಯು ಹೇಗೆ ಕಟ್ಟಿಗೆಯನ್ನು ಬೂದಿಗೈಯುತ್ತದೆಯೋ ಹಾಗೆ ಜ್ಞಾನಾಗ್ನಿಯು ಕರ್ಮಗಳನ್ನೆಲ್ಲ ಬೂದಿಗೈಯುತ್ತದೆ.' (ಗೀತೆ 4-33) ಎಂದು ಮುಂತಾದ ಸ್ಮೃತಿಯಿದೆ. ಆದರೆ ಶರೀರವನ್ನುಂಟು ಮಾಡಿರುವ ಪುಣ್ಯಪಾಪಗಳಾದರೋ ಉಪಭೋಗದಿಂದಲೇ ಕ್ಷಯವಾಗುತ್ತವೆ. ಆದ್ದರಿಂದ ಜ್ಞಾನಿಯುಕರ್ಮಸಂಬಂಧವುಳ್ಳವನಲ್ಲ.

**433**

**ಕಾಮಾನಶಮನಾಶಕಂ, ನ ತು ಭೋಜನನಿವೃತ್ತಿಃ | ಭೋಜನ ನಿವೃತ್ತೌ ಮ್ರಿಯತ ಏವ, ನಾತ್ಮವೇದನಮ್ |** **-ಬೃಹ. 4-4-22**

ಯಜ್ಞೇನ, ದಾನೇನ, ತಪಸಾನಾಶಕೇನ (ಬೃಹ. 4-4-22) ಆತ್ಮವನ್ನರಿಯುತ್ತಾನೆ ಎಂದಿದೆಯಷ್ಟೆ. ಇಲ್ಲಿ ಅನಾಶಕವಾದ ತಪಸ್ಸು ಎಂದು ಅನ್ವಯ. ಅನಾಶಕವೆಂದರೆ ರಾಗಪೂರ್ವಕವಾದ ಭೋಗದ ತ್ಯಾಗ. ಊಟವನ್ನೇ ಬಿಡುವುದು ಎಂದರ್ಥವಲ್ಲ. ಊಟವನ್ನು ಬಿಟ್ಟರೆ ಸತ್ತುಹೋಗುತ್ತಾನಲ್ಲದೆ ಆತ್ಮಜ್ಞಾನವಾಗುವುದಿಲ್ಲ.

ನ+ಆಶಕಂ = ಅನಾಶಕಂ. ಆಶಕಂ ಎಂದರೆ ತಿನ್ನುವುದು. ಅನಾಶಕಂ=ತಿನ್ನದೆ ಇರುವುದು, ಭೋಜನ ನಿವೃತ್ತಿ ಎಂದು ಕೆಲವರು ಅರ್ಥ ಹೇಳುತ್ತಾರೆ. ಅದು ಸರಿಯಲ್ಲ. ಕಾಮಗಳ ಅನಾಶಕವೇ ಇಲ್ಲಿ ವಿವಕ್ಷಿತ. ಅನ್ನದ ಅನಾಶಕವಲ್ಲ ಎಂದು ಅಭಿಪ್ರಾಯ.



# ೧೯ ಮೋಕ್ಷ

ಮೋಕ್ಷದ ವಿಷಯವಾಗಿ ಜನರಲ್ಲಿ ನಾನಾ ಕಲ್ಪನೆಗಳಿವೆ. ಬ್ರಹ್ಮಲೋಕದಲ್ಲೋ ವಿಷ್ಣುಲೋಕದಲ್ಲೋ ಶಿವಲೋಕದಲ್ಲೋ ಆನಂದದಿಂದ ವಿಹರಿಸುವುದೇ ಮೋಕ್ಷವೆಂದು ತಿಳಿದುಕೊಂಡಿದ್ದಾರೆ. ಮರಣವಾದ ಮೇಲೆ ಪುಣ್ಯವಶದಿಂದ ಒಂದು ದಿವ್ಯದೇಹವು ಬರುತ್ತದೆಯೆಂದೂ ಭಾವಿಸಿದ್ದಾರೆ. ಅದೆಲ್ಲವೂ ಕರ್ಮ, ಭಕ್ತಿ, ಉಪಾಸನೆಗಳಿಂದ ಲಭಿಸತಕ್ಕ ವಿಶಿಷ್ಟಫಲಗಳು. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯಗಳೆಂಬ ಗೌಣಮುಕ್ತಿಯಲ್ಲಿ ಸೇರತಕ್ಕವು. ಆತ್ಮಜ್ಞಾನದಿಂದ ಪ್ರಾಪ್ತವಾದ ಪರಮಾರ್ಥ ಮೋಕ್ಷವಲ್ಲ. ಗೌಣಮುಕ್ತಿಯನ್ನು ಪಡೆದವರಿಗೆ ಪುನರ್ಜನ್ಮವೂ ಬರಬಹುದು. ಅಥವಾ ಈಶ್ವರಾನುಗ್ರಹದಿಂದ ಬ್ರಹ್ಮಜ್ಞಾನವುಂಟಾಗಿ ಪರಮಾರ್ಥ ಮೋಕ್ಷವೂ ದೊರೆಯಬಹುದು.

ಮೋಕ್ಷವೆಂದರೇನು? ಬಿಡುಗಡೆ. ಯಾವುದರಿಂದ ಬಿಡುಗಡೆ? ಸಂಸಾರಬಂಧನದಿಂದ. ಸಂಸಾರ ಬಂಧನಕ್ಕೆ ಕಾರಣವೇನು? ಅಜ್ಞಾನವೇ ಕಾರಣ. ಅಜ್ಞಾನವನ್ನು ತೊಲಗಿಸತಕ್ಕದ್ದು ಯಾವುದು? ಜ್ಞಾನವೇ ಅಜ್ಞಾನವನ್ನು ತೊಲಗಿಸಬಲ್ಲದ್ದು. ಇನ್ನು ಯಾವುದೂ ಅಜ್ಞಾನವನ್ನು ನಾಶಪಡಿಸಲಾರದು. ಈ ಸಾಮಾನ್ಯ ತರ್ಕದಿಂದಲೇ ಜ್ಞಾನವೊಂದೇ ಮೋಕ್ಷವನ್ನುಂಟುಮಾಡತಕ್ಕದ್ದೆಂದು ನಿರ್ಣಯಿಸಬಹುದಾಗಿದೆ. "ತಮೇವಂ ವಿದ್ವಾನಮೃತ ಇಹ ಭವತಿ" ನಾನ್ಯಃಪಂಥಾ ಅಯನಾಯ ವಿದ್ಯತೇ" ಇತ್ಯಾದಿ ಶ್ರುತಿ ವಾಕ್ಯಗಳಿಂದಲೂ, 'ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್' ಎಂಬ ಭಗವದ್ಗೀತಾ ವಚನಗಳಿಂದಲೂ ಜ್ಞಾನದಿಂದಲೇ ಮೋಕ್ಷವೆಂದು ನಿರ್ಣೀತವಾಗಿರುತ್ತದೆ. ಆತ್ಮಜ್ಞಾನವೆಂದರೆ ಜೀವ-ಬ್ರಹ್ಮ ಇವು ಬೇರೆಬೇರೆಯಲ್ಲ, ಇವೆರಡೂ ಏಕವೇ ಎಂಬ ಐಕ್ಯಜ್ಞಾನ, ಸರ್ವಂ ಖಲ್ವಿದಂ ಬ್ರಹ್ಮ-ಕಾಣಿಸುವ ಸಕಲ ಪ್ರಪಂಚವೂ ಬ್ರಹ್ಮವೇ ಎಂಬ ಜ್ಞಾನ, 'ಅಹಂ ಬ್ರಹ್ಮಾಸ್ಮಿ' ಎಂಬ ಮಹಾವಾಕ್ಯದಿಂದಾಗುವ ಅಪರೋಕ್ಷಾನುಭವ.

'ಬ್ರಹ್ಮವಿದ್ ಬ್ರಹ್ಮೈವ ಭವತಿ, ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' ಇತ್ಯಾದಿ ಶ್ರುತಿಪ್ರಮಾಣಗಳಿಂದ ಜೀವನು ವಸ್ತುತಃ ಬ್ರಹ್ಮವೇ ಆಗಿರುವುದರಿಂದ, ಬಂಧಕವಾದ ಅವಿದ್ಯೆಯಿಂದ ಕಳಚಿಕೊಳ್ಳುವುದೇ ಮೋಕ್ಷ. ಸ್ವಸ್ವರೂಪವಾದ ನಿರಂಜನವೂ ನಿತ್ಯಶುದ್ಧಮುಕ್ತವೂ ಆದ ಸ್ವರೂಪದಲ್ಲಿ ಸೇರಿಹೋಗುವುದೇ ಅದು. ಗಡಿಗೆಯನ್ನು ಒಡೆದಾಗ ಘಟಾಕಾಶವು ಮಹಾಕಾಶದಲ್ಲಿ ಹೇಗೆ ಕೂಡಿ ಹೋಗುವುದೋ, ಶುದ್ಧವಾದ ಜಲವು ಶುದ್ಧವಾದ ಜಲದಲ್ಲಿ ಹೇಗೆ ಬೆರೆತು ಹೋಗುವುದೋ ಹಾಗೆಯೇ ಮೋಕ್ಷವನ್ನು ಪಡೆಯುವುದು ಎಂಬುದರ ಅರ್ಥ. ಮೋಕ್ಷದಲ್ಲಿ ಜೀವವು ಎಲ್ಲಿಂದ ಎಲ್ಲಿಗೆ

ಹೋಗುವುದೂ ಇಲ್ಲ. ಘಟಾಕಾಶವು ಮಹಾಕಾಶದಲ್ಲಿ ಬೆರೆಯುವುದಕ್ಕೆ ಎಲ್ಲಿಗೆ ಹೋಗುತ್ತದೆ?

'ಅತ್ರ ಬ್ರಹ್ಮ ಸಮಶ್ನುತೇ, ಅಮೃತ ಇಹ ಭವತಿ' ಇತ್ಯಾದಿ ಪ್ರಮಾಣಗಳಿಂದ ಶರೀರವಿದ್ದಾಗಲೇ ಒಬ್ಬನು ಜೀವನ್ಮುಕ್ತನಾಗಬಹುದು. ಪರಬ್ರಹ್ಮವು ಹೊಸದಾಗಿ ಹುಟ್ಟತಕ್ಕದ್ದಲ್ಲ. 'ವಿಮುಕ್ತಶ್ಚವಿಮುಚ್ಯತೇ' ಎಂದು ಹೇಳಿರುವುದು ಇದಕ್ಕಾಗಿ. ಸ್ವತಃ ಸದಾ ಮುಕ್ತನೇ ಆಗಿರುವ ತಾನು ಅಜ್ಞಾನದಿಂದ ದೇಹಾದಿಗಳಲ್ಲಿ ಆತ್ಮಾಭಿಮಾನವನ್ನಿಟ್ಟುಕೊಂಡಿರುವವರೆಗೆ, ಅವಿದ್ಯಾವಸ್ಥೆಯಲ್ಲಿ ಬದ್ಧನೆನಿಸಿ ಸಂಸಾರಿಯೆಂದು ತಿಳಿದಿರುತ್ತಾನೆ. ಮೂಲವಾದ ಈ ಅವಿದ್ಯೆ ಹೋದೊಡನೆ ಮುಕ್ತನೆನಿಸುತ್ತಾನೆ. ದೇಹವು ಪ್ರಾರಬ್ಧಕರ್ಮ ವಶದಿಂದ ಇನ್ನೂ ಉಳಿದಾಗ ಜೀವನ್ಮುಕ್ತನೆಂದು ವ್ಯವಹಾರ. ದೇಹಪಾತವಾದ ಮೇಲೆ ವಿದೇಹಮುಕ್ತನೆಂದು ವ್ಯವಹಾರ. ಇದು ವ್ಯವಹಾರ ಮಾತ್ರ. ಮೋಕ್ಷದಲ್ಲಿ ಭೇದವೇನೂ ಇಲ್ಲ. ಈ ಪರಮುಕ್ತಿಯನ್ನು ಪಡೆದವರಿಗೆ ಪುನರ್ಜನ್ಮವಿಲ್ಲ.

**434**

**ಬ್ರಹ್ಮಭಾವಶ್ಚ ಮೋಕ್ಷಃ।** **ಸೂ.ಭಾ. 1-1-4**

ಬ್ರಹ್ಮಸ್ವರೂಪವಾಗಿ ಉಳಿಯುವುದೇ ಮೋಕ್ಷ.

**435**

**ತಸ್ಮಾತ್ ಅಪಕೃಷ್ಯಮಾಣಾಯಾಮವಿದ್ಯಾಯಾಂ ವಿದ್ಯಾಯಾಂ ಚ ಕಾಷ್ಠಾಂ ಗತಾಯಾಂ ಸರ್ವಾತ್ಮಭಾವೋ ಮೋಕ್ಷಃ।** **-ಬೃಹ. 4-3-20**

ಆದ್ದರಿಂದ ಅವಿದ್ಯೆಯು ನಷ್ಟವಾಗಲಾಗಿ, ವಿದ್ಯೆಯು ಆಧಿಕ್ಯವನ್ನು ಪಡೆಯಲಾಗಿ ಯಾವ ಸರ್ವಾತ್ಮಭಾವ ಉಂಟೋ ಅದೇ ಮೋಕ್ಷ.

**436**

**ಆತ್ಮಲೋಕಪ್ರಾಪ್ತಿರ್ಹಿ ಅವಿದ್ಯಾನಿವೃತ್ತೌ ಸ್ವಾತ್ಮನಿ ಅವಸ್ಥಾನಮೇವ । ಸರ್ವಕ್ರಿಯೋಪರಮ ಏವ ಆತ್ಮ ಲೋಕಸಾಧನಂ ಮುಖ್ಯಮಂತರಂಗಮ್**
**- ಬೃಹ. 4-4-22**

ಅವಿದ್ಯೆಯು ನಿವೃತ್ತವಾದ ಮೇಲೆ ತನ್ನ ಆತ್ಮಸ್ವರೂಪದಲ್ಲಿ ನೆಲೆಸುವುದೇ ಆತ್ಮಲೋಕಪ್ರಾಪ್ತಿ. ಸರ್ವಕರ್ಮಪರಿತ್ಯಾಗವೇ ಆತ್ಮಲೋಕಕ್ಕೆ ಶಾಸ್ತ್ರೀಯವೂ ನೇರವೂ ಆದ ಸಾಧನ.

**437**

**ಮುಕ್ತ್ಯವಸ್ಥಾ ಹಿ ಸರ್ವವೇದಾಂತೇಷ್ವೇಕರೂಪೈವಾವಧಾರ್ಯತೇ | ಬ್ರಹ್ಮೈವ ಹಿ ಮುಕ್ತ್ಯವಸ್ಥಾ | ನ ಚ ಬ್ರಹ್ಮಣೋಽನೇಕಾಕಾರ ಯೋಗೋಽಸ್ತಿ ||**

**-ಸೂ.ಭಾ. 3-4-52**

ಮುಕ್ತ್ಯವಸ್ಥೆಯು ಒಂದೇ ರೂಪವಾಗಿದೆಯೆಂದು ಎಲ್ಲ ಉಪನಿಷತ್ತುಗಳಲ್ಲಿಯೂ ನಿರ್ಣೀತವಾಗಿ ತಿಳಿದುಬರುತ್ತದೆ. ಮುಕ್ತ್ಯವಸ್ಥೆಯೆಂದರೆ ಬ್ರಹ್ಮವೇ. ಬ್ರಹ್ಮದಲ್ಲಿ ಅನೇಕ ರೂಪಗಳ ಸಂಬಂಧವಿರುವುದಿಲ್ಲ.

**438**

**ತಸ್ಮಾತ್ ಅವಿದ್ಯಾದಿಕರ್ಮೋಪಾದಾನಹೇತುನಿವೃತ್ತೌ ಸ್ವಾತ್ಮನ್ಯವಸ್ಥಾನಂ ಮೋಕ್ಷಃ | -ತೈತ್ತಿ. ಶೀಕ್ಷಾ (ಪೀಠಿಕೆ)**

ಆದ್ದರಿಂದ (ಮೋಕ್ಷವು ಕ್ರಿಯಾಜನ್ಯವಲ್ಲವಾದ್ದರಿಂದ) ಕರ್ಮಕ್ಕೆ ಮೂಲ ಕಾರಣಗಳಾದ ಅವಿದ್ಯಾಕಾಮಗಳು ತೊಲಗಲಾಗಿ ಸ್ವರೂಪದಲ್ಲಿ ನೆಲೆನಿಲ್ಲುವುದು ಮೋಕ್ಷವೆನಿಸುತ್ತದೆ.

**ಹೋಲಿಸಿ :- ಪುರುಷಾರ್ಥಶೂನ್ಯಾನಾಂ ಗುಣಾನಾಂ ಪ್ರತಿಪ್ರಸವಃ ಕೈವಲ್ಯಂ ಸ್ವರೂಪ ಪ್ರತಿಷ್ಠಾ ವಾ ಚಿತಿಶಕ್ತಿರಿತಿ | -ಯೋಗಸೂತ್ರ 4-34**

"ಪುರುಷನಿಗೆ ಮಾಡುವ ಪ್ರಯೋಜನವು ಶೂನ್ಯವಾದಾಗ ಗುಣಗಳು ತಮ್ಮ ಕಾರಣವಾದ ಪ್ರಕೃತಿಯಲ್ಲಿ ಲಯವಾಗುತ್ತವೆ. ಇದೇ ಕೈವಲ್ಯ. ಚಿತಿಶಕ್ತಿಯು (ಆತ್ಮವು) ತನ್ನ ಸ್ವರೂಪದಲ್ಲಿಯೇ ಪ್ರತಿಷ್ಠಿತವಾಗುವುದು ಕೈವಲ್ಯ".

ಪ್ರತಿಪ್ರಸವ = ಲಯ; ಕೈವಲ್ಯ = ಮೋಕ್ಷ.

**439**

**ನ ಚ ಅದ್ವೈತಾತ್ಮವಿಜ್ಞಾನಾದನ್ಯತ್ರ ಆತ್ಯಂತಿಕೀ ನಿಃಶ್ರೇಯಸಪ್ರಾಪ್ತಿಃ |**

**-ಛಾಂ. ಉಪೋದ್ಘಾತ.**

ಅದ್ವಯನಾದ ಆತ್ಮನ ಜ್ಞಾನವಾಗದೇ ಇನ್ನೆಲ್ಲಿಯೂ ಆತ್ಯಂತಿಕವಾದ ನಿಃಶ್ರೇಯಸ (ಮೋಕ್ಷ) ಪ್ರಾಪ್ತವಾಗುವುದಿಲ್ಲ.

**440**

**ಕೇವಲಾದೇವ ಜ್ಞಾನಾತ್ ಮೋಕ್ಷಃ ಇತ್ಯೇಷೋऽರ್ಥೋ ನಿಶ್ಚಿತೋ ಗೀತಾಸು ಸರ್ವೋಪನಿಷತ್ಸು ಚ |** **-ಗೀತಾ 3ನೇ ಅಧ್ಯಾಯ ಪೀಠಿಕೆ**

ಬರಿಯ ಜ್ಞಾನವೊಂದರಿಂದಲೇ ಮೋಕ್ಷವಾಗುವುದೆಂಬುದು ಗೀತೆಯಲ್ಲಿಯೂ ಸರ್ವೋಪನಿಷತ್ತುಗಳಲ್ಲಿಯೂ ನಿಶ್ಚಿತವಾದ ಸಿದ್ಧಾಂತವಾಗಿದೆ.

**441**

**ತಸ್ಮಾತ್ ಗೀತಾಸು ಕೇವಲಾದೇವ ತತ್ತ್ವಜ್ಞಾನಾತ್ ಮೋಕ್ಷ ಪ್ರಾಪ್ತಿಃ ನ ಕರ್ಮಸಮುಚ್ಚಿತಾತ್ ಇತಿ ನಿಶ್ಚಿತೋऽರ್ಥ |** **-ಗೀತಾ 2-10**

ಕೇವಲ ತತ್ತ್ವಜ್ಞಾನದಿಂದಲೇ ಮೋಕ್ಷದ ಪ್ರಾಪ್ತಿಯಾಗುತ್ತದೆ. ಕರ್ಮ ಸಮುಚ್ಚಿತವಾದ ಜ್ಞಾನದಿಂದಲ್ಲ ಎಂಬುದು ಗೀತಾಶಾಸ್ತ್ರದಲ್ಲಿ ನಿಶ್ಚಿತವಾದ ಸಿದ್ಧಾಂತ.

**442**

**ತಸ್ಮಾತ್ ಜ್ಞಾನಮೇಕಂ ಮುಕ್ತ್ವಾ ಕ್ರಿಯಾಯಾಃ ಗಂಧಮಾತ್ರಸ್ಯಾಪಿ ಅನುಪ್ರವೇಶ ಇಹ ನೋಪಪದ್ಯತೇ |** **-ಸೂ.ಭಾ. 1-1-4**

ಆದ್ದರಿಂದ ಜ್ಞಾನವೊಂದನ್ನು ಬಿಟ್ಟರೆ ಯಾವ ಕ್ರಿಯೆಯ ಗಂಧವೂ ಮೋಕ್ಷ ವಿಷಯದಲ್ಲಿ ಒಳಹೋಗಲು ಶಕ್ಯವಿಲ್ಲ.

ಕ್ರಿಯಾಜನ್ಯವಾದದ್ದು ಉತ್ಪಾದ್ಯ, ವಿಕಾರ್ಯ, ಸಂಸ್ಕಾರ್ಯ, ಪ್ರಾಪ್ಯ-ಎಂದು ನಾಲ್ಕೇ ವಿಧ. ಮೋಕ್ಷವು ಇವುಗಳಲ್ಲಿ ಯಾವುದೂ ಅಲ್ಲ. ಆದ್ದರಿಂದ ಮೋಕ್ಷವು ಎಂದಿಗೂ ಕ್ರಿಯಾಜನ್ಯವಲ್ಲ.

**443**

**ನ ಹಿ ವೇದಾಂತೇಷು ಬ್ರಹ್ಮಾತ್ಮವಿಜ್ಞಾನಾತ್ ಅನ್ಯತ್ ಪರಮ ಪುರುಷಾರ್ಥ**

**ಸಾಧನತ್ವೇನ ಅವಗಮ್ಯತೇ|** **-ಬೃಹ. 1-4-7**

ಪರಮ ಪುರುಷಾರ್ಥವಾದ ಮೋಕ್ಷಕ್ಕೆ ಸಾಧನವಾದದ್ದು ಬ್ರಹ್ಮವೇ ನಾನೆಂಬ ವಿಜ್ಞಾನ. ಇದಲ್ಲದೆ ಮೋಕ್ಷಕ್ಕೆ ಬೇರೆ ಸಾಧನವಿದೆಯೆಂಬುದು ಉಪನಿಷತ್ತುಗಳಲ್ಲೆಲ್ಲಿಯೂ ತಿಳಿದು ಬರುವುದಿಲ್ಲ.

**444**

**ನಿರಾಕೃತ ಸರ್ವ-ನಾಮ-ರೂಪ-ಕರ್ಮ-ಪರಮಾರ್ಥಾತ್ಮವಸ್ತು-ವಿಷಯಂ ಆತ್ಮಜ್ಞಾನಮಮೃತತ್ವಸಾಧನಮ್|** **-ಐತರೇಯ (ಪೀಠಿಕೆ)**

ಸಮಸ್ತ ನಾಮರೂಪ ಕರ್ಮಗಳೂ ನಿರಾಕೃತವಾಗಿರುವ ಯಾವ ಪರಮಾರ್ಥವಾದ ಆತ್ಮವಸ್ತು ಉಂಟೋ ತದ್ವಿಷಯಕವಾದ ಆತ್ಮಜ್ಞಾನವು ಮೋಕ್ಷಕ್ಕೆ ಸಾಧನ.

**445**

**ಸಮ್ಯಗ್ದರ್ಶನಾತ್ ಕ್ಷಿಪ್ರಮೇವ ಮೋಕ್ಷೋ ಭವತಿ-ಇತಿ ಸರ್ವಶಾಸ್ತ್ರ ನ್ಯಾಯಪ್ರಸಿದ್ಧಃ ಸುನಿಶ್ಚಿತೋಽರ್ಥಃ|** **-ಗೀತಾ 4-39**

ಸಮ್ಯಗ್ದರ್ಶನದಿಂದ ಶೀಘ್ರವಾಗಿಯೇ ಮೋಕ್ಷವಾಗುತ್ತದೆಯೆಂಬುದು ಸರ್ವ ಶಾಸ್ತ್ರಗಳಿಂದಲೂ ನ್ಯಾಯದಿಂದಲೂ ನಿಶ್ಚಿತವಾದ ಸಿದ್ಧಾಂತವಾಗಿರುತ್ತದೆ.

ತಮೇವ ವಿದಿತ್ವಾ ಅತಿಮೃತ್ಯುಮೇತಿ, ಜ್ಞಾನಾದೇವ ತು ಕೈವಲ್ಯಂ ಮೊದಲಾದವು ಶಾಸ್ತ್ರಗಳು. ಜ್ಞಾನದಿಂದ ಅದಕ್ಕೆ ವಿರುದ್ಧವಾದ ಅಜ್ಞಾನವು ಹೋಗಿ ಬಿಡುತ್ತದೆಯೆಂಬ ಯುಕ್ತಿಯೇ ನ್ಯಾಯ.

**446**

**ನ ಚ ಪರಪ್ರಾಪ್ತೇರವಗಮಾರ್ಥಸ್ಯ ಚ | ಭೇದೋಽಸ್ತಿ | ಅವಿದ್ಯಾಯಾ ಅಪಾಯ ಏವ ಹಿ ಪರಪ್ರಾಪ್ತಿರ್ನಾರ್ಥಾಂತರಮ್|** **-ಮುಂಡಕ 1-5**

ಪರವಸ್ತುವಿನ ಪ್ರಾಪ್ತಿಯೆಂಬುದಕ್ಕೂ ಪರವಸ್ತುವಿನ ಜ್ಞಾನ ಎಂಬುದಕ್ಕೂ ಭೇದವಿಲ್ಲ. ಅವಿದ್ಯೆಯ ತೊಲಗುವಿಕೆಯೇ ಪರಪ್ರಾಪ್ತಿಯಲ್ಲದೆ ಬೇರೆಯಲ್ಲ.

**447**

**ನಿತ್ಯಶ್ಚ ಮೋಕ್ಷಃ ಸರ್ವೈರ್ಮೋಕ್ಷವಾದಿಭಿರಭ್ಯುಪಗಮ್ಯತೇ, ಅತೋ ನ ಕರ್ತವ್ಯಶೇಷತ್ವೇನ ಬ್ರಹ್ಮೋಪದೇಶೋ ಯುಕ್ತಃ |**

**- ಸೂ.ಭಾ. 1-1-4**

ಮೋಕ್ಷವು ನಿತ್ಯವಾದದ್ದೆಂದು ಸಮಸ್ತ ಮೋಕ್ಷವಾದಿಗಳೂ ಒಪ್ಪಿದ್ದಾರೆ. ಕರ್ತವ್ಯ ನಿಯೋಗವು ಇಲ್ಲವಾದ್ದರಿಂದ ಕರ್ತವ್ಯಶೇಷವಾಗಿ ಬ್ರಹ್ಮೋಪದೇಶ ಮಾಡಿದ್ದಾರೆಂಬುದು ಸರಿಯಲ್ಲ.

ಕರ್ತವ್ಯ ಕರ್ಮದಿಂದ ಸಾಧ್ಯವಾದದ್ದು ನಿತ್ಯವಲ್ಲ. ಮೋಕ್ಷವು ನಿತ್ಯಸಿದ್ಧವಾದದ್ದು, ಸಾಧ್ಯವಲ್ಲ, ಆದ್ದರಿಂದ ಬ್ರಹ್ಮದ ವಿಷಯವಾಗಿ ಏನನ್ನೋಮಾಡಬೇಕೆಂದು ಬ್ರಹ್ಮೋಪದೇಶವನ್ನು ಶ್ರುತಿಯು ಹೇಳಿಲ್ಲ.

**448**

**ತಸ್ಯ ಏವಂ ಅಕಾಮಯಮಾನಸ್ಯ ಕರ್ಮಾಭಾವೇ ಗಮನಕಾರಣಾಭಾವಾತ್ ಪ್ರಾಣಾ ವಾಗಾದಯಃ ನೋತ್ಕ್ರಾಮಂತಿ, ನೋರ್ಧ್ವಂ ಕ್ರಾಮಂತಿ ದೇಹಾತ್ |**

**-ಬೃಹ. 4-4-6**

ಕಾಮನಾರಹಿತನಾದ ಜ್ಞಾನಿಗಾದರೋ ಯಾವ ಕರ್ಮಸಂಬಂಧವೂ ಇಲ್ಲದ್ದರಿಂದ ಗಮನ ಕಾರಣವೇ ಇಲ್ಲ. ಆತನ ವಾಗಾದಿ ಪ್ರಾಣಗಳು ಎಲ್ಲಿಗೂ ಹೋಗುವುದಿಲ್ಲ.

ಮುಕ್ತನಿಗೆ ಜನ್ಮಾಂತರವಿಲ್ಲ. ಆತನ ದೇಹೇಂದ್ರಿಯಗಳು ಪಂಚಭೂತಗಳಲ್ಲಿ ಅಡಗಿಹೋಗುತ್ತವೆ.

**449**

**ನ ಹಿ ಸದ್ಯೋಮುಕ್ತಿಭಾಜಾಂ ಸಮ್ಯಗ್ದರ್ಶನಿಷ್ಠಾನಾಂ ಗತಿರಾಗತಿರ್ವಾ ಕ್ವಚಿದಸ್ತಿ | 'ನ ತಸ್ಯ ಪ್ರಾಣಾ ಉತ್ಕ್ರಾಮಂತಿ' ಇತಿ ಶ್ರುತೇಃ |** **-ಗೀತಾ 8-24**

ಸದ್ಯೋಮುಕ್ತಿಯನ್ನು ಪಡೆದ ಸಮ್ಯಗ್ದರ್ಶನ ನಿಷ್ಠರಿಗೆ ಗಮನವಾಗಲಿ ಆಗಮನವಾಗಲಿ ಎಲ್ಲಿಯೂ ಇಲ್ಲ. 'ನ ತಸ್ಯ ಪ್ರಾಣಾ ಉತ್ಕ್ರಾಮಂತಿ'-ಆತನ ಪ್ರಾಣಗಳು ದೇಹವನ್ನು ಬಿಟ್ಟು ಮೇಲಕ್ಕೆ ಹೊರಡುವುದಿಲ್ಲ (ಬೃಹ. 4-4-6) ಎಂಬ ಶ್ರುತಿ ಇದಕ್ಕೆ ಪ್ರಮಾಣ.

ಮುಕ್ತಿಯಲ್ಲಿ ಸದ್ಯೋಮುಕ್ತಿ, ಕ್ರಮಮುಕ್ತಿ ಎಂದು ಎರಡು ವಿಧ ಉಂಟು. ಸದ್ಯೋಮುಕ್ತಿಯೇ ಮುಖ್ಯವಾದ ಮುಕ್ತಿ. ಜೀವನ್ಮುಕ್ತಿ ಎಂದರೂ ಇದೇ. ಬ್ರಹ್ಮಲೋಕಾದಿ ಪ್ರಾಪ್ತಿಯಾದ ಮೇಲೆ ಕಾಲಾಂತರದಲ್ಲಿ ಆಗುವ ಮುಕ್ತಿ ಕ್ರಮಮುಕ್ತಿ ಎನಿಸುತ್ತದೆ. ಕ್ರಮಮುಕ್ತಿಯು ಕರ್ಮಿಗಳಿಗೆ ಒದಗುತ್ತದೆ. ಕಡೆಯಲ್ಲಾದರೂ ಬ್ರಹ್ಮಜ್ಞಾನವಾಗಲೇಬೇಕು.

**450**

**ವಿದ್ವಾನ್ ಸ ಇಹೈವ ಬ್ರಹ್ಮ ಯದ್ಯಪಿ ದೇಹವಾನಿವ ಲಕ್ಷ್ಯತೇ ಸ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ | -ಬೃಹ. 4-4-6**

ಜ್ಞಾನಿಯಾದವನು ದೇಹವಂತನಾಗಿ ಕಾಣಿಸುತ್ತಿದ್ದರೂ ಇಲ್ಲಿಯೇ ಬ್ರಹ್ಮವಾಗಿರುತ್ತಾನೆ. ಅವನು ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿ ಸೇರಿಹೋಗುವನು.

'ನ ತಸ್ಯ ಪ್ರಾಣಾ ಉತ್ಕ್ರಾಮಂತಿ | ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' (ಬೃಹ. IV-4-6) 'ಅಥ ಮರ್ತ್ಯೋऽಮೃತೋ ಭವತಿ | ಅತ್ರಬ್ರಹ್ಮ ಸಮಶ್ನುತೇ' (ಬೃಹ. IV-4-7) ಅತ್ರ = ಇಲ್ಲಿಯೇ, ಈ ದೇಹದಲ್ಲಿಯೇ, ಇವೇ ಮೊದಲಾದ ವಚನಗಳು ಜೀವನ್ಮುಕ್ತಿಗೆ ಪ್ರಮಾಣ.

**451**

**ಅಭಾವಃ ಶರೀರೇಂದ್ರಿಯಾಣಾಂ ಮೋಕ್ಷೇ | -ಸೂ.ಭಾ. 4-4-10**

ಮೋಕ್ಷ ಕಾಲದಲ್ಲಿ ಶರೀರೇಂದ್ರಿಯಗಳು ಇರುವುದಿಲ್ಲ.

**452**

**ಮುಕ್ತಾತ್ಮನಾಂ ಸಂಸಾರಸಂಸಾರಿತ್ವವ್ಯವಹಾರಾಭಾವಃ ಸರ್ವೈರೇವ ಆತ್ಮವಾದಿಭಿಃ ಇಷ್ಯತೇ | -ಗೀತಾ 13-2**

ಮುಕ್ತಾತ್ಮರಿಗೆ ಸಂಸಾರ, ಸಂಸಾರಿತ್ವ ಎಂಬ ವ್ಯವಹಾರವು ಇಲ್ಲವೆಂದು ಎಲ್ಲ ಆತ್ಮವಾದಿಗಳೂ ಒಪ್ಪಿದ್ದಾರೆ.

ಆತ್ಮನಿದ್ದಾನೆಂದು ಒಪ್ಪುವ ಸಾಂಖ್ಯ, ಜೈನಾದಿಗಳೂ ಸಹ ಮೋಕ್ಷವನ್ನು ಒಪ್ಪುತ್ತಾರೆ. ಮೋಕ್ಷವಾದಾಗ ಆತ್ಮನಿಗೆ ಸಂಸಾರವಿಲ್ಲವೆಂದೂ ಒಪ್ಪಿದ್ದಾರೆ.

**453**

**ದುಃಖಸ್ಯಾಪಿ ಆತ್ಮತ್ವೋಪಗಮಾತ್ ಅವಿರೋಧಃ | ಆತ್ಮನಿ ಅವಿದ್ಯಾ ಕಲ್ಪನಾನಿಮಿತ್ತಾನಿ ದುಃಖಾನಿ ರಜ್ಜ್ವಾಮಿವ ಸರ್ಪಾದಿಕಲ್ಪನಾ ನಿಮಿತ್ತಾನಿ ||**

**-ಛಾಂ. 8-12-1**

ಮುಕ್ತನು ಸರ್ವಾತ್ಮನಾದರೆ ಅವನಿಗೆ ದುಃಖ ಸಂಬಂಧವಾಗುತ್ತದೆಯೆಂಬ ವಿರೋಧವಿಲ್ಲ. ಏಕೆಂದರೆ ದುಃಖವೂ ನಿಜವಾಗಿ ಆತ್ಮವೇ ಎಂದು ಒಪ್ಪಿಕೊಂಡಿದ್ದಾಗಿದೆ. ಆತ್ಮನಲ್ಲಿ ದುಃಖಗಳು ಅವಿದ್ಯಾಕಲ್ಪನೆಯಿಂದ ಬಂದವು. ಹಗ್ಗದಲ್ಲಿ ಹಾವು ಮೊದಲಾದವು ಹೇಗೆ ಕಲ್ಪನೆಯಿಂದ ಬಂದಿವೆಯೋ ಹಾಗೆ.

ಘಟಾದಿಗಳು ಹೇಗೆ ಬ್ರಹ್ಮದಲ್ಲಿ ಕಲ್ಪಿತವೋ ನಿಜವಾಗಿ ಅವು ಬ್ರಹ್ಮಸ್ವರೂಪಗಳೋ ಹಾಗೆ ದುಃಖವೂ ಕೂಡ ಬ್ರಹ್ಮಸ್ವರೂಪವೇ. ಮುಕ್ತನಿಗೆ ದುಃಖ ಮಾತ್ರ ಆಗುವುದಿಲ್ಲ. ಏಕೆಂದರೆ ದುಃಖವು ಅವಿದ್ಯಾಕಲ್ಪಿತ, ತನಗಿಲ್ಲ ಎಂದು ತಿಳಿದಿರುತ್ತಾನೆ.

**454**

**ಕಾರ್ಯಬ್ರಹ್ಮಲೋಕಪ್ರಲಯಪ್ರತ್ಯುಪಸ್ಥಾನೇ ಸತಿ ತತ್ರೈವೋತ್ಪನ್ನ ಸಮ್ಯಗ್ದರ್ಶನಾಃ ಸಂತಸ್ತದಧ್ಯಕ್ಷೇಣ ಹಿರಣ್ಯಗರ್ಭೇಣ ಸಹಾತಃಪರಂ ಪರಿಶುದ್ಧಂ ವಿಷ್ಣೋಃ ಪರಮಂ ಪ್ರತಿಪದ್ಯಂತ ಇತಿ | -ಸೂ.ಭಾ. 4-3-10**

ಕಾರ್ಯ ಬ್ರಹ್ಮಲೋಕಕ್ಕೆ ಪ್ರಳಯವು ಒದಗಿದಾಗ ಅಲ್ಲಿದ್ದವರಿಗೆ ಸಮ್ಯಗ್ದರ್ಶನ ಉಂಟಾಗಿ ಆ ಲೋಕದ ಅಧ್ಯಕ್ಷನಾದ ಹಿರಣ್ಯಗರ್ಭನೊಡನೆ ಅದಕ್ಕಿಂತ ಪರಿಶುದ್ಧವಾದ ವಿಷ್ಣುವಿನ ಪರಮಪದವನ್ನು ಸೇರುತ್ತಾರೆ.

ಅರ್ಚಿರಾದಿ ಮಾರ್ಗದಿಂದ ಪುಣ್ಯಾತ್ಮರ ಕಾರ್ಯವಾದ ಅಪರಬ್ರಹ್ಮನ ಲೋಕವನ್ನು ಪಡೆಯುತ್ತಾರೆ. ಅಲ್ಲಿ ಜ್ಞಾನ ಹುಟ್ಟಿದರೆ ಮುಕ್ತರಾಗುತ್ತಾರೆ. ಇಲ್ಲದಿದ್ದರೆ ಹಿಂದಕ್ಕೆ ಬರುತ್ತಾರೆ.

**455**

**ನ ಚ ಅಜ್ಞಾನವ್ಯತಿರೇಕೇಣ ಮೋಕ್ಷಸ್ಯ ವ್ಯವಧಾನಾಂತರಂ ಕಲ್ಪಯಿತುಂ ಶಕ್ಯಮ್ |**

**-ಬೃಹ. 3-3-1**

ಅಜ್ಞಾನವೊಂದನ್ನು ಬಿಟ್ಟು ಮೋಕ್ಷಕ್ಕೆ ಇನ್ನೊಂದು ವ್ಯವಧಾನವನ್ನು ಕಲ್ಪಿಸುವುದಕ್ಕಾಗುವುದಿಲ್ಲ.

**456**

**ಸಾಂಖ್ಯಾ ವೈಶೇಷಿಕಾಶ್ಚ ಮೋಕ್ಷವಾದಿನೋ ನಾಸ್ತಿ ಮೋಕ್ಷೇ ಸುಖಂ ಸಂವೇದ್ಯಮ್ ಇತ್ಯೇವಂ ವಿಪ್ರತಿಪನ್ನಾಃ |** **-ಬೃಹ. 3-9-29**

ಮೋಕ್ಷವಾದಿಗಳಾದ ಸಾಂಖ್ಯರೂ, ವೈಶೇಷಿಕರೂ ಮೋಕ್ಷಾವಸ್ಥೆಯಲ್ಲಿ ಸುಖವು ಗೊತ್ತಾಗುವುದಿಲ್ಲ ಎಂದು ವಿಪ್ರತಿಪತ್ತಿಯನ್ನು ಹೊಂದಿದ್ದಾರೆ.

ಆತ್ಮನಿಗೆ ಮನಸ್ಸಿನ ಸಂಬಂಧವಾದಾಗ ಸುಖದ ಅರಿವು ಆಗಲು ಸಾಧ್ಯವೆಂದು ಅವರ ಮತವಿದೆ. ಮೋಕ್ಷಾವಸ್ಥೆಯಲ್ಲಿ ಮನಸ್ಸಿನ ಸಂಬಂಧವು ಆತ್ಮನಿಗೆ ಇರುವುದಿಲ್ಲವಾದ್ದರಿಂದ ಸುಖಜ್ಞಾನವೋ ಆಗುವುದಿಲ್ಲವೆಂದು ಅವರ ಅಭಿಪ್ರಾಯ.

**457**

**ಕರ್ಮಕಾರ್ಯಸ್ಯ ಚ ಅನಿತ್ಯತ್ವಂ ಪ್ರಸಿದ್ಧಂ ಲೋಕೇ | ಕರ್ಮಭ್ಯಶ್ಚೇತ್ ಶ್ರೇಯಃ ಅನಿತ್ಯಂ ಸ್ಯಾತ್ | ತಚ್ಚ ಅನಿಷ್ಟಮ್ |**

**-ತೈತ್ತಿ-ಶೀಕ್ಷಾ-ಉಪಸಂಹಾರ**

ಕರ್ಮದಿಂದ ಜನ್ಯವಾದದ್ದು ಅನಿತ್ಯವೆಂದು ಲೋಕದಲ್ಲಿ ಪ್ರಸಿದ್ಧವಾಗಿದೆ. ಕರ್ಮಗಳಿಂದ ಮೋಕ್ಷವಾಗುವುದಾದರೆ ಅದು ಅನಿತ್ಯವಾಗಬೇಕಾಗುತ್ತದೆ. ಹಾಗೆ ಅನಿತ್ಯವೆನ್ನುವುದು ಸಂಮತವಲ್ಲ.

'ನಾಸ್ತ್ಯಕೃತಃ ಕೃತೇನ' ಮುಂ. 1-2-12

**458**

**ನ ಹಿ ಕ್ರಿಯಾನಿರ್ವೃತ್ತೋಽರ್ಥಃ ನಿತ್ಯೋ ದೃಷ್ಟಃ |**

**-ಬೃಹ. 4-4-6**

ಕ್ರಿಯಾಜನ್ಯವಾದ ವಸ್ತು ನಿತ್ಯವಾಗಿರುವುದು ಕಂಡು ಬರುವುದಿಲ್ಲ.

**459**

**ಫಲತ್ವಪ್ರಸಿದ್ಧಿರಪಿ ಮೋಕ್ಷಸ್ಯ ಬಂಧನಿವೃತ್ತಿಮಾತ್ರಾಪೇಕ್ಷಾ ನಾಪೂರ್ವಜನನಾಪೇಕ್ಷಾ|**

**-ಸೂ.ಭಾ, 4-4-2**

ಮೋಕ್ಷವು ಫಲವೆನ್ನುವುದು ಸಹ ಬಂಧನಿವೃತ್ತಿಯನ್ನಿಟ್ಟುಕೊಂಡು ಹೇಳಿದ ಮಾತು, ಹೊಸದಾಗಿ ಮೋಕ್ಷವು ಪ್ರಾಪ್ತವಾಯಿತೆಂಬ ಅರ್ಥದಲ್ಲಲ್ಲ.

ಜ್ಞಾನದ ಫಲವು ಮೋಕ್ಷ ಎಂದು ಪ್ರಸಿದ್ಧಿಯುಂಟು. ಈ ಮೋಕ್ಷವು ಹೊಸದಾಗಿ ಹುಟ್ಟಿದ ಫಲವೆಂದು ತಿಳಿಯಬಾರದು. ಮೋಕ್ಷವೆಂದರೆ ಅವಿದ್ಯೆಯಿಂದಾದ ಬಂಧನದ ನಿವೃತ್ತಿ. ಈ ಬಂಧನವೂ ಪರಮಾರ್ಥದಲ್ಲಿಲ್ಲ. ಅಜ್ಞಾನದಿಂದ ಕಲ್ಪಿಸಿಕೊಂಡದ್ದು ಇದು.



## ೨೦ ಸಂಕೀರ್ಣ

ಶ್ರೀಭಗವತ್ಪಾದರು ನಾನಾಶಾಸ್ತ್ರಗಳಲ್ಲಿಯೂ ಲೋಕವ್ಯವಹಾರಗಳಲ್ಲಿಯೂ ಅಪಾರವಾದ ಪಾಂಡಿತ್ಯ ಉಳ್ಳವರು. ಭಾಷ್ಯಗಳಲ್ಲಿ ಪ್ರಾಸಂಗಿಕವಾಗಿ ಅವರು ಉದಾಹರಿಸಿದ ಕೆಲವು ವಾಕ್ಯಗಳು ಸೂಕ್ತಿಮುಕ್ತಾಫಲಗಳಾಗಿವೆ. ಈ ಸಂಕೀರ್ಣದಲ್ಲಿ ಅಂತಹ ಕೆಲವು ಸೂಕ್ತಿಗಳನ್ನು ಮಾತ್ರ ಸಂಗ್ರಹಿಸಲಾಗಿದೆ. ಹೀಗೆಯೇ ಸಂಗ್ರಹಿಸಿ ಕಂಠಪಾಠಮಾಡಬಹುದಾದ ವಚನಗಳು ವಿಪುಲವಾಗಿವೆ. ಈ ಸಂಗ್ರಹವು ವಿವಿಧ ವಿಷಯಗಳನ್ನೊಳಗೊಂಡಿರುವುದರಿಂದ ಸಂಕ್ಷಿಪ್ತವಾದ ಒಂದು ಅವತರಣಿಕೆಯನ್ನು ಬರೆಯುವುದು ಅಶಕ್ಯವೇ ಸರಿ.

ಇನ್ನೊಬ್ಬರಿಗೆ ಕಷ್ಟವನ್ನು ಕೊಡದೆ ಯಾವನೂ ಸುಖವನ್ನನುಭವಿಸಲಾರ. ನಾವು ಒಂದು ತುತ್ತು ಅನ್ನವನ್ನು ತಿನ್ನುವಾಗಲೂ ಅದಕ್ಕಾಗಿ ಇನ್ನೊಬ್ಬರು ಎಷ್ಟು ದುಡಿದಿದ್ದಾರೆ-ಎಂಬುದನ್ನು ನೆನಪಿಗೆ ತಂದುಕೊಳ್ಳಬೇಕು. 'ನಾನುಪಹತ್ಯ ಭೂತಾನಿ ಭೋಗಃ ಸಂಭವತಿ' ಎಂಬುದರ ಅನುರಣನ ಇದು. ಮನುಷ್ಯನು ಪ್ರತಿಯೊಂದು ಪ್ರಾಣಿಗೂ ಸಹ ಕೃತಜ್ಞನಾಗಿರಬೇಕು. 'ವಾಗ್ಭೂಷಣಂಭೂಷಣಂ' ಮನುಷ್ಯನಿಗೆ ಗೌರವ ಬರತಕ್ಕದ್ದು ಅವನ ಮಾತಿನಿಂದ. ಮಾತಿನಿಂದ ಸ್ವರ್ಗವನ್ನಾದರೂ ಸೃಷ್ಟಿಸಬಹುದು, ನರಕವನ್ನಾದರೂ ಎದುರಿಗೆ ತರಬಹುದು. ವಿದ್ಯೆಯಿಂದಲೇ ಮಾನವನಿಗೆ ಶೋಭೆ. ನಮ್ಮ ಹಿರಿಯರ ಮಾರ್ಗವು ಅನುಕರಣೀಯವಾದರೂ ಅದರಲ್ಲಿದ್ದ ದೋಷವನ್ನು ನಾವು ಅನುಸರಿಸಬಾರದು. ಅವರು ವಿದ್ಯಾವಂತರಾಗಿರಲಿಲ್ಲವೆಂದು ಮುಂದಿನವರೂ ವಿದ್ಯಾವಿಹೀನರೇ ಆಗಿ ಉಳಿಯಬೇಕಾಗಿದ್ದಿಲ್ಲ. ವಿದ್ವಾಂಸನಂತೆ ವೇಷವನ್ನು ಧರಿಸಿದರೆ ವಿದ್ವಾಂಸನಾಗಿಬಿಡುವುದಿಲ್ಲ. ಉತ್ಸಾಹಹೀನರಾದ ಸೋಮಾರಿಗಳಿಗೆ ಎಂದಿಗೂ ಲಕ್ಷ್ಮಿ ಒಲಿಯುವುದಿಲ್ಲ. ಆದ್ದರಿಂದ ಪ್ರತಿಯೊಬ್ಬವ್ಯಕ್ತಿಯೂ ಉತ್ಸಾಹದಿಂದ ಮುಂದೆ ನುಗ್ಗಿ ಉದ್ಯಮಶೀಲನಾಗಬೇಕು. ಸತ್ಯಕ್ಕೆ ಜಯ ಉಂಟು. ಸುಳ್ಳಿಗೆ ಕಡೆಯಲ್ಲಾದರೂ ಸೋಲು ತಪ್ಪದ್ದಲ್ಲ. ಇವು ಸರ್ವರೂ ಗಮನಿಸಬೇಕಾದ ನೀತಿ ವಚನಗಳು.

ಸೂರ್ಯನಿಗೆ ಉದಯಾಸ್ತಮಯಗಳಿಲ್ಲವೆಂದು ಆಚಾರ್ಯರು ಸ್ಪಷ್ಟವಾಗಿ ತಿಳಿಸಿದ್ದಾರೆ. ರಾತ್ರಿಯಲ್ಲಿ ತಲೆದೋರುವ ಕತ್ತಲೆಯು ಭೂಮಿಯ ನೆರಳೆಂದು ಆಚಾರ್ಯರು ಹೇಳಿದ್ದಾರೆ. ಈ ವೈಜ್ಞಾನಿಕ ಸತ್ಯ ಅವರಿಗೆ ಗೊತ್ತಿತ್ತು. 'ಆಹಾರ ಶುದ್ಧೌ ಸತ್ತ್ವಶುದ್ಧಿಃ' ಎಂಬ ವಚನ ಉಂಟಷ್ಟೆ. ಇದಕ್ಕೆ ಮಡಿವಂತರು ಮಾಡಿಕೊಂಡಿರುವ ಅರ್ಥ ಎಲ್ಲರಿಗೂ ಗೊತ್ತಿದೆ. ಆದರೆ ಈ ಮಾತಿಗೆ ಆಚಾರ್ಯರು ಶುದ್ಧವಾದ ದಾರ್ಶನಿಕ ದೃಷ್ಟಿಯಿಂದ ಅರ್ಥ ಹೇಳಿದ್ದಾರೆ. 'ಆಹ್ರೀಯತೇ ಭೋಗಾರ್ಥಮಿತ್ಯಾಹಾರಃ' ಶಬ್ದ, ಸ್ಪರ್ಶಾದಿ ವಿಷಯ ವಿಜ್ಞಾನವೇ ಆಹಾರ. ಅದು ಶುದ್ಧವಾಗಿದ್ದರೆ ಮನಸ್ಸು ಶುದ್ಧವಾಗುತ್ತದೆ. ದೇವತೆಗಳೂ ರಾಕ್ಷಸರೂ

ಮನುಷ್ಯರಿಗಿಂತ ಬೇರೆ ಅಲ್ಲ. ಸತ್ಪುರುಷನೇ ದೇವತೆ, ದುಷ್ಟನೇ ರಾಕ್ಷಸ ಎಂದು ಕ್ರಾಂತಿಕಾರಿಯಾದ ಮಾತನ್ನಾಡಿದ್ದಾರೆ. ಪುಣ್ಯಪಾಪಗಳಿಗೆ ಫಲವನ್ನು ಕೊಡತಕ್ಕ ಒಬ್ಬ ಚೇತನ ವ್ಯಕ್ತಿ ಇರಲೇಬೇಕು. ಜಡವಾದ ಪ್ರಕೃತಿಯಾಗಲಿ, ಮೀಮಾಂಸಕರು ಕಲ್ಪಿಸಿಕೊಂಡಿರುವ ಜಡವಾದ ಅಪೂರ್ವವಾಗಲಿ ಫಲವನ್ನು ಎಂದಿಗೂ ಕೊಡಲಾರದು. ವಿವೇಚನಾಪೂರ್ಣವಾದ ಕ್ರಿಯೆ ಜಡದಿಂದ ಹುಟ್ಟುವುದಿಲ್ಲ. ಆದ್ದರಿಂದ ಸರ್ವಜ್ಞನಾದ ಈಶ್ವರನನ್ನು ಒಪ್ಪಲೇಬೇಕು. ಪರಮಭಕ್ತಿಯಿಂದ ಈಶ್ವರನನ್ನು ಆರಾಧಿಸಿದರೆ ಆತನ ಅನುಗ್ರಹ ಉಂಟಾಗಿ ಆತ್ಮಜ್ಞಾನವು ಲಭಿಸುತ್ತದೆ. ಈಶ್ವರಾನುಗ್ರಹವಿಲ್ಲದೆ ದ್ವೈತಬುದ್ಧಿಯು ಹೋಗುವುದಿಲ್ಲ. ಅದ್ವೈತಜ್ಞಾನವು ಲಭಿಸುವುದೂ ಇಲ್ಲ.

## 460

**ಪೂರಣೇನ ತ್ರಾಯತೇ ಸ ಪಿತರಂ ಯಸ್ಮಾತ್, ತಸ್ಮಾತ್ ಪುತ್ರೋ ನಾಮ | ಇದಂ ತತ್ ಪುತ್ರಸ್ಯ ಪುತ್ರತ್ವಂ ಯತ್ ಪಿತುಶ್ಛಿದ್ರಂ ಪೂರಯಿತ್ವಾ ತ್ರಾಯತೇ |**

**-ಬೃಹ. 1-5-17**

ಪೂರಣೇನ ತ್ರಾಯತೇ ಇತಿ = ಪುತ್ರಃ | ಪೂರಣದಿಂದ ತಂದೆಯನ್ನು ರಕ್ಷಿಸುತ್ತಾನಾದ್ದರಿಂದ ಪುತ್ರನೆಂದು ಹೆಸರು. ತಂದೆಯ ಲೋಪವನ್ನು ಪರಿಹರಿಸಿ ರಕ್ಷಿಸುವುದೇ ಪುತ್ರನಲ್ಲಿರುವ ಪುತ್ರತ್ವ.|

ತಂದೆಯು ಯಾವುದಾದರೊಂದು ಕರ್ತವ್ಯಲೋಪವನ್ನು ಮಾಡಿದ್ದಲ್ಲಿ ಅದು ಆತನ ಶ್ರೇಯಸ್ಸಿಗೆ ಪ್ರತಿಬಂಧಕವಾಗಿ ಉಳಿದುಕೊಂಡಿರುತ್ತದೆ. ಆ ಲೋಪವನ್ನು ಪೂರೈಸಿ-ಎಂದರೆ ಪರಿಹರಿಸಿ-ತಂದೆಯನ್ನು ರಕ್ಷಿಸತಕ್ಕವನ್ನು ಪುತ್ರ. ಉಪನಿಷತ್ತಿನಲ್ಲಿಯೇ ಹೇಳಿದ ವಿಷಯ ವಿವರಣೆ ಇದು.

## 461

**ತಸ್ಮಾತ್ ನ ಪರಮ್ ಅಪೀಡಯಿತ್ವಾ ಗ್ರಸಿತುಮಪಿ ಶಕ್ಯತೇ |**

**-ಬೃಹ. 1-5-2**

ಸರ್ವಸಾಧಾರಣವಾದ ಅನ್ನವನ್ನೂ ಇನ್ನೊಬ್ಬರನ್ನು ಪೀಡಿಸದೆ ತಿನ್ನಲು ಶಕ್ಯವಿಲ್ಲ.

ಭಗವಂತನು ಸೃಷ್ಟಿಸಿದ ಅನ್ನದ ಮೇಲೆ ಸರ್ವಪ್ರಾಣಿಗಳಿಗೂ ಅಧಿಕಾರ ಉಂಟು. ಒಂದು ತುತ್ತನ್ನು ನಾವು ತಿಂದರೆ ಅದು ಇನ್ನೊಬ್ಬನಿಗೆ ತಪ್ಪಿಸಿ ತಿಂದದ್ದಾಗಿರುತ್ತದೆ. ಆದ್ದರಿಂದ ಪರರಿಗೆ ಕೊಡದೆ ತಾನೊಬ್ಬನೇ ತಿನ್ನಬಾರದೆಂಬುದು ನೀತಿ.

**462**

**ವಾಗ್ಮಿನೋ ಹಿ ಪುರುಷಾಃ ವಸಂತಿ ಅಭಿಭವಂತಿ ಅನ್ಯಾನ್ ವಸುಮತ್ತಮಾಶ್ಚ| ಅತೋ ವಾಗ್ವಸಿಷ್ಠಃ| -ಛಾಂ. 5-1-2**

ವಾಗ್ಮಿಗಳಾದ ಪುರುಷರು ಇತರರನ್ನು ಪರಾಜಯಗೊಳಿಸುತ್ತಾರೆ. ಇತರರಿಗಿಂತ ಐಶ್ವರ್ಯವಂತರಾಗಿರುತ್ತಾರೆ. ಆದ್ದರಿಂದ ವಾಕ್ಕು ವಸಿಷ್ಠವೇ.

'ವಾಗ್ವಾವ ವಸಿಷ್ಠಃ' (ಛಾಂ. 5-1-2) ಎಂಬು ಶ್ರುತಿ ಇದೆ. ಆದ್ದರಿಂದ ವಸಿಷ್ಠ ಶಬ್ದಕ್ಕೆ ವ್ಯುತ್ಪತ್ತಿ ಇದು. ಅನ್ಯಾನ್ ವಸಂತಿ, ಅಭಿಭವಂತಿ ಅನೇನೇತಿ ವಸಿಷ್ಠಃ | ಅಥವಾ ವಸು-ಐಶ್ವರ್ಯವನ್ನು ಕೊಡುತ್ತದೆಯಾದ್ದರಿಂದ ವಸಿಷ್ಠ.

**463**

**ವಿರೂಪೋಽಪಿ ವಿದ್ವಾನ್ ಬಹುಶೋಭತೇ | -ಕೇನವಾಕ್ಯ ಭಾಷ್ಯ | 4-3**

ವಿದ್ಯಾವಂತನು ಕುರೂಪಿಯಾದರೂ ಬಹಳ ಚೆನ್ನಾಗಿ ಶೋಭಿಸುತ್ತಾನೆ.

**464**

**ನ ಹಿ ಲೋಕೇ ವಿತ್ತಲಾಭಃ ಕಸ್ಯಚಿತ್ ತೃಪ್ತಿಕರೋ ದೃಷ್ಟಃ |**
**-ಕಠ 1-27**

ಯಾರಿಗೂ ಧನಲಾಭವು ತೃಪ್ತಿಕರವಾಯಿತೆಂಬುದು ಲೋಕದಲ್ಲಿ ಕಂಡು ಬರುವುದಿಲ್ಲ.

**465**

**ಜ್ವರಮರಣಕಾರ್ಯಯೋರಪಿ ದಧಿವಿಷಯೋರ್ಗುಡಮಂತ್ರ ಸಂಯುಕ್ತಯೋಸ್ತೃಪ್ತಿ ಪುಷ್ಟಿಕಾರ್ಯದರ್ಶನಾತ್ | -ಬ್ರ.ಸೂ.ಭಾ. 4-1-16**

ಮೊಸರು ಜ್ವರವನ್ನೂ, ವಿಷವು ಮರಣವನ್ನೂ ಉಂಟುಮಾಡತಕ್ಕದ್ದಾದರೂ ಮೊಸರಿಗೆ ಬೆಲ್ಲವನ್ನೂ ವಿಷಕ್ಕೆ ಮಂತ್ರವನ್ನೂ ಸಂಯೋಗಗೊಳಿಸಿದರೆ ಅವುಗಳಿಂದ ಕ್ರಮವಾಗಿ ತೃಪ್ತಿ, ಪುಷ್ಟಿಗಳು ಉಂಟಾಗುವುದು ಕಂಡುಬಂದಿದೆ.

**466**

**ಲೋಕಸ್ಯ ಉನ್ಮಾರ್ಗಪ್ರವೃತ್ತಿ ನಿವಾರಣಂ ಲೋಕಸಂಗ್ರಹಃ |**

**-ಗೀತಾ 3-20**

ಜನರು ತಪ್ಪುದಾರಿಗೆ ಹೋಗುವುದನ್ನು ತಡೆಯುವುದೇ ಲೋಕಸಂಗ್ರಹ.

**467**

**ಪ್ರಕೃತಿರ್ನಾಮ ಪೂರ್ವಕೃತಧರ್ಮಾಧರ್ಮಾದಿಸಂಸ್ಕಾರಃ ವರ್ತಮಾನ ಜನ್ಮಾದಾವಭಿವ್ಯಕ್ತಃ|** **-ಗೀತಾ 3-33**

ಹಿಂದೆ ಮಾಡಿದ ಧರ್ಮಾಧರ್ಮಾದಿ ಸಂಸ್ಕಾರವು ಈ ಜನ್ಮದಲ್ಲಿ ಅಭಿವ್ಯಕ್ತವಾದಾಗ ಪ್ರಕೃತಿಯೆನಿಸುತ್ತದೆ.

'ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ' ಕಿಂ ಕರಿಷ್ಯತಿ'ಎಂಬ ಗೀತಾವಚನದಲ್ಲಿರುವ ಪ್ರಕೃತಿ ಶಬ್ದದ ಅರ್ಥವಿದು.

**468**

**ನ ಹಿ ಪೂರ್ವಜೋ ಮೂಢ ಆಸೀದಿತ್ಯಾತ್ಮನಾಪಿ ಮೂಢಾತ್ಮನಾ ಭವಿತವ್ಯಮಿತಿ ಕಿಂಚಿದಸ್ತಿ ಪ್ರಮಾಣಮ್ |** **-ಸೂ.ಭಾ. 2-1-13**

ಹಿಂದಿನವನು ಮೂಢನಾಗಿದ್ದುದರಿಂದ ತಾನೂ ಮೂಢನಾಗಿಯೇ ಉಳಿಯಬೇಕೆಂಬುದಕ್ಕೆ ಯಾವ ಆಧಾರವೂ ಇಲ್ಲ.

**469**

**ದೇಹ ಮಾತ್ರ ಸಾಧನಾ ರತಿಃ | ಬಾಹ್ಯಸಾಧನಾ ಕ್ರೀಡಾ|** **-ಛಾಂ. 7-25-2**

ತನ್ನ ದೇಹ ಮಾತ್ರದಿಂದಲೇ ಆಗುವ ಆನಂದ ರತಿ. ಬಾಹ್ಯಸಾಧನಗಳಿಂದ ಆಗತಕ್ಕದ್ದು ಕ್ರೀಡೆ.

**470**

**ಆಹ್ರಿಯತ ಇತ್ಯಾಹಾರಃ | ಶಬ್ದಾದಿವಿಷಯ ವಿಜ್ಞಾನಂ ಭೋಕ್ತುರ್ಭೋಗಾಯ ಆಹ್ರಿಯತೇ | ತಸ್ಯ ವಿಷಯೋಪಲಬ್ಧಿಲಕ್ಷಣಸ್ಯ ವಿಜ್ಞಾನಸ್ಯ ಶುದ್ಧಿರಾಹಾರಶುದ್ಧಿಃ | ರಾಗದ್ವೇಷ ಮೋಹದೋಷೈರಸಂಸೃಷ್ಟಂ ವಿಷಯವಿಜ್ಞಾನಮಿತ್ಯರ್ಥಃ ||**

**-ಛಾಂ. 7-25-2**

ಭೋಕ್ತನ ಭೋಗಕ್ಕಾಗಿ ತರಲ್ಪಡುವ ಆ ಶಬ್ದಾದಿವಿಷಯ ಜ್ಞಾನವೇ ಆಹಾರ. ವಿಷಯಗಳ ಜ್ಞಾನದ ಶುದ್ಧಿಯೇ ಆಹಾರಶುದ್ಧಿಯೆನಿಸುತ್ತದೆ. ರಾಗ, ದ್ವೇಷ, ಮೋಹಗಳೆಂಬ ದೋಷಗಳ ಸ್ಪರ್ಶವಿಲ್ಲದ ವಿಷಯವಿಜ್ಞಾನ ಎಂದರ್ಥ.

**"ಆಹಾರ ಶುದ್ಧೌ ಸತ್ತ್ವ ಶುದ್ಧಿಃ, ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ"|** ಎಂಬಲ್ಲಿ ವಿವರಣೆ ಇದು.

ನೋಡಿ-**"ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್"**

**(ಗೀತಾ 2-64)**

**471**

**ಉದಯಶ್ಚ ನಾಮ ಸವಿತುಸ್ತನ್ನಿವಾಸಿನಾಂ ಪ್ರಾಣಿನಾಂ ಚಕ್ಷುರ್ಗೋಚರತಾಪತ್ತಿಃ ತದತ್ಯಯಶ್ಚ ಅಸ್ತಮನಮ್ | ನ ಪರಮಾರ್ಥತಃ ಉದಯಾಸ್ತಮಾನೇ ಸ್ತಃ |**

**-ಛಾಂ. 3-10-4**

ಆಯಾ ಪ್ರಾಂತದಲ್ಲಿ ವಾಸ ಮಾಡುವ ಪ್ರಾಣಿಗಳ ದೃಷ್ಟಿಗೆ ಗೋಚರವಾಗುವುದೇ ಸೂರ್ಯನ ಉದಯ. ಹಾಗೇ ಗೋಚರವಾಗದೆ ಹೋದಾಗ ಸೂರ್ಯಾಸ್ತಮಯ. ಸೂರ್ಯನಿಗೆ ನಿಜವಾಗಿ ಉದಯಾಸ್ತಮಯಗಳಿಲ್ಲ.

**472**

**ಪೃಥಿವೀಚ್ಛಾಯಾಂ ಹಿ ಶಾರ್ವರಂ ತಮ ಆಚಕ್ಷತೇ |** **ಬೃಹ. 6-2-11**

ಭೂಮಿಯ ನೆರಳನ್ನು ರಾತ್ರಿಯ ಕತ್ತಲೆ ಎನ್ನುತ್ತಾರೆ.

**473**

**ನ ಹಿ ಅನುತ್ಸಾಹವತಾಂ ಅನನುತಿಷ್ಠತಾಂ ಅಲಸಾನಾಂ ಭೋಗ ಪ್ರಾಪ್ತಿಃ ಲೋಕೇ ದೃಷ್ಟಾ| -ಛಾಂ. 3-6-2**

ಉತ್ಸಾಹರಹಿತರಾಗಿ ಉದ್ಯೋಗವನ್ನು ಮಾಡದಿರುವ ಸೋಮಾರಿಗಳಿಗೆ ಭೋಗಪ್ರಾಪ್ತಿಯು ಲೋಕದಲ್ಲಿ ಕಂಡುಬಂದಿಲ್ಲ.

**474**

**ಅಥವಾ ನ ದೇವಾ ಅಸುರಾ ವಾ ಅನ್ಯೇ ಕೇಚನ ವಿದ್ಯಂತೇ ಮನುಷ್ಯೇಭ್ಯಃ |**
**-ಬೃಹ. 5-2-3**

ಅಥವಾ ಮನುಷ್ಯರಿಗಿಂತ ಬೇರೆಯಾಗಿ ಯಾವ ದೇವತೆಗಳಾಗಲಿ ಅಸುರರಾಗಲಿ ಇಲ್ಲ.

ಇದು ಮೀಮಾಂಸಕರ ಮತ. ಜೈ. ಸೂ. 8-1-34, 9-1-6 ರಿಂದ 10ರವರೆಗಿನ ಮೀಮಾಂಸಾ ಭಾಷ್ಯವನ್ನು ನೋಡಬಹುದು. ವೇದಾಂತದಲ್ಲಾದರೋ ದೇವತೆಗಳನ್ನೂ ಅಸುರರನ್ನೂ ಒಪ್ಪಲಾಗಿದೆ. (ನೋಡಿ. ಸೂ.ಭಾ. 1-3-26 ರಿಂದ 1-3-34, ಛಾಂ. ಭಾ. 5-1-15)

**475**

**ಪ್ರಸಿದ್ಧಂ ಲೋಕೇ ಸತ್ಯವಾದಿನಾಽನೃತವಾದ್ಯಭಿಭೂಯತೇ ನ ವಿಪರ್ಯಯಃ |**
**-ಮುಂ. 3-1-6**

ಸತ್ಯವಾದಿಯಿಂದ ಸುಳ್ಳುಗಾರನು ಸೋತುಹೋಗುತ್ತಾನೆಂಬುದು ಲೋಕದಲ್ಲಿ ಪ್ರಸಿದ್ಧವಾಗಿದೆ. ಆದರೆ ಸುಳ್ಳುಗಾರನಿಂದ ಸತ್ಯವಾದಿ ಸೋಲುತ್ತಾನೆಂಬ ವಿಪರ್ಯಯವು ಇಲ್ಲ.

ಜನರು ಸತ್ಯವಾದಿಯನ್ನು ನಂಬುತ್ತಾರೆ. ಸುಳ್ಳನನ್ನು ನಂಬುವುದಿಲ್ಲ.

**476**

**ಪರಯಾ ಭಕ್ತ್ಯಾ ಭಗವಂತಂ ತತ್ತ್ವತೋಽಭಿಜಾನಾತಿ | ಯದನಂತರಮೇವ**

**ಈಶ್ವರಕ್ಷೇತ್ರಜ್ಞಭೇದಬುದ್ಧಿರಶೇಷತೋ ನಿವರ್ತತೇ |** **-ಗೀತಾ 18-55**

ಪರಾಭಕ್ತಿಯಿಂದ ಪರಮಾತ್ಮನನ್ನು ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆ. ಅನಂತರ ಈಶ್ವರನು ಬೇರೆ, ಕ್ಷೇತ್ರಜ್ಞನು ಬೇರೆ ಎಂಬ ಬುದ್ಧಿಯು ನಿಶ್ಶೇಷವಾಗಿ ತೊಲಗುತ್ತದೆ.

**477**

**ಅಪೂರ್ವಸ್ಯಾಚೇತನಸ್ಯ ಕಾಷ್ಠಲೋಷ್ಟಸಮಸ್ಯ | ಚೇತನಾಽಪ್ರವರ್ತಿತಸ್ಯ ಪ್ರವೃತ್ತ್ಯನುಪಪತ್ತೇಃ | ತದಸ್ತಿತ್ವೇ ಚ ಪ್ರಮಾಣಾಭಾವಾತ್ |**

**ಸೂ.ಭಾ. 3-2-38**

ಅಪೂರ್ವವು ಕಲ್ಲು, ಮಣ್ಣುಹೆಂಟೆಗಳಿಗೆ ಸಮವಾಗಿ ಅಚೇತನವಾದದ್ದು, ಚೇತನದ ಪ್ರೇರಣೆಯಿಲ್ಲದೆ ಅದರಲ್ಲಿ ಪ್ರವೃತ್ತಿ ಹುಟ್ಟುವುದಿಲ್ಲ. ಅಲ್ಲದೆ ಅಪೂರ್ವವಿದೆಯೆಂಬುದಕ್ಕೆ ಪ್ರಮಾಣವೂ ಇಲ್ಲ.

ಪಾಪ ಪುಣ್ಯಗಳು ಕಾಲಾಂತರದಲ್ಲಿ ಫಲವನ್ನು ಕೊಡುವುದು ಹೇಗೆ? ಅವುಗಳಿಂದ ಅಪೂರ್ವವೆಂಬ ವಸ್ತು ಹುಟ್ಟುತ್ತದೆಯೆಂದೂ ಅದು ಫಲವನ್ನು ಕೊಡುತ್ತದೆಯೆಂದೂ ಮೀಮಾಂಸಕರು ಹೇಳುತ್ತಾರೆ. ಅಪೂರ್ವವು ಜಡವಾದ್ದರಿಂದ ಫಲವನ್ನು ಕೊಡಲಾರದು. ಆದ್ದರಿಂದ ಪಾಪ ಪುಣ್ಯಗಳ ಫಲವನ್ನು ಈಶ್ವರನೇ ಕೊಡುತ್ತಾನೆಂದು ಬ್ರಹ್ಮಸೂತ್ರಕಾರರಾದ ಬಾದರಾಯಣಾಚಾರ್ಯರ ಸಿದ್ಧಾಂತ.

**478**

**ಶ್ರೋತುಃ ಮೃಷಾಶ್ರವಣಮಪಿ ಸಂಭವತಿ | ನ ತು ಚಕ್ಷುಷೋ ಮೃಷಾದರ್ಶನಮ್ |**

**-ಬೃಹ. 4-14-4**

ಕೇಳತಕ್ಕವನಿಗೆ ಸುಳ್ಳನ್ನು ಕೇಳುವ ಸಂಭವವಿರುತ್ತದೆ. ಕಣ್ಣಿಗೆ ಮಾತ್ರ ಸುಳ್ಳನ್ನು ನೋಡುವ ಸಂಭವ ಇರುವುದಿಲ್ಲ.

ಕೇಳಿದ್ದು ಸುಳ್ಳಾಗಿರಬಹುದು. ಕಂಡದ್ದು ಸುಳ್ಳಾಗಿರುವುದಿಲ್ಲ.

**479**

**ನ ಹಿ ಡುಂಡುಭಃ ಸರ್ಪ ಇವೇತ್ಯೇತಾವತಾ ಸವಿಷೋ ಭವತಿ |**

**-ಸೂ.ಭಾ. 2-1-6**

'ನೀರುಹಾವು ಸರ್ಪದಂತಿದೆ' ಎಂದ ಮಾತ್ರಕ್ಕೆ ನೀರುಹಾವಿಗೆ ವಿಷ ಇದ್ದು ಬಿಡುವುದಿಲ್ಲ

**480**

**ಶಾಸ್ತ್ರಜನಿತಜ್ಞಾನಕರ್ಮಭಾವಿತಾ ದ್ಯೋತನಾದ್ದೇವಾ ಭವಂತಿ| ತ ಏವ ಸ್ವಾಭಾವಿಕಪ್ರತ್ಯಕ್ಷಾನುಮಾನಜನಿತ ದೃಷ್ಟಪ್ರಯೋಜನ ಕರ್ಮಜ್ಞಾನಭಾವಿತಾ ಅಸುರಾಃ |**

**-ಬೃಹ. 1-3-1**

ಶಾಸ್ತ್ರಜನ್ಯವಾದ ಜ್ಞಾನದಿಂದ ಹುಟ್ಟಿದ ಕರ್ಮದಿಂದ ಪರಿಷ್ಕೃತವಾದ ಬುದ್ಧಿಯುಳ್ಳವರು ಪ್ರಕಾಶಮಾನರಾಗಿ ದೇವತೆಗಳೆನಿಸುತ್ತಾರೆ. ಇನ್ನು ಸ್ವಾಭಾವಿಕವಾದ ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಜನಿಸಿ, ಲೋಕದೃಷ್ಟವಾದ ಪ್ರಯೋಜನಗಳಿಗೆ ಅಂಟಿಕೊಂಡ ಕರ್ಮದಿಂದಲೂ ಜ್ಞಾನದಿಂದಲೂ ಕೂಡಿದ ಮನೋವೃತ್ತಿಯುಳ್ಳವರು ಅಸುರರೆನಿಸುತ್ತಾರೆ.

**481**

**ಪ್ರತ್ಯಕ್ಷೇಣ ತಾವತ್ ಸುಖದುಃಖತದ್ಧೇತುಲಕ್ಷಣಃ ಸಂಸಾರಃ ಉಪಲಭ್ಯತೇ |**

**-ಗೀತಾ 13-2**

ಸುಖದುಃಖಗಳೂ ಅವುಗಳಿಗೆ ಕಾರಣವಾದ ವಿಷಯೇಂದ್ರಿಯ ಸಂಯೋಗ ಎಂಬ ಸಂಸಾರವೂ ಪ್ರತ್ಯಕ್ಷವಾಗಿ ಕಂಡುಬರುತ್ತದೆ.

ಸಂಸಾರವು ಕಂಡುಬರುವುದು ಅವಿದ್ಯೆಯಿಂದ. ಈ ಸಂಸಾರವು ಮನಸ್ಸಿಗೆ ಗೋಚರ.

**482**

**ರೋಗಾರ್ತಸ್ಯೇವ ರೋಗನಿವೃತ್ತೌ ಸ್ವಸ್ಥತಾ; ತಥಾ ದುಃಖಾತ್ಮಕಸ್ಯ ಆತ್ಮನಃ ದ್ವೈತಪ್ರಪಂಚೋಪಶಮೇ ಸ್ವಸ್ಥತಾ ಅದ್ವೈತಭಾವಃ ಪ್ರಯೋಜನಮ್**

**ಮಾಂ. ಭಾ. ಅವತರಣಿಕೆ**

ರೋಗದಿಂದ ನರಳುವ ರೋಗಿಗೆ ರೋಗವು ಗುಣವಾದಾಗ ಸ್ವಸ್ಥತೆಯುಂಟಾಗುವುದಷ್ಟೆ. ಹಾಗೆಯೇ ಅವಿದ್ಯೆಯಿಂದಾದ ದುಃಖವು ತೊಲಗಲು ದ್ವೈತ

ಪ್ರಪಂಚವು ಅಡಗಿ ಸ್ವಸ್ವರೂಪದಲ್ಲಿ ನಿಲ್ಲುವ ಸ್ವಸ್ಥತೆಯುಂಟಾಗುತ್ತದೆ. ಈ ಅದ್ವೈತ ಭಾವವೇ ಬ್ರಹ್ಮವಿದ್ಯೆಗೆ ಪ್ರಯೋಜನ.

**483**

**ನ ಹ್ಯಗ್ನಿರುಷ್ಣಃ ಸನ್ ಸ್ವಾತ್ಮಾನಂ ದಹತಿ | ನ ಹಿ ನಟಃ ಶಿಕ್ಷಿತಃ ಸನ್ ಸ್ವಸ್ಕಂಧಮಾರೋಕ್ಷ್ಯತಿ | -ಸೂ.ಭಾ. 3-3-54**

ಅಗ್ನಿಯು ಉಷ್ಣವಾಗಿ ದಾಹಕವಾಗಿದ್ದರೂ ತನ್ನನ್ನು ತಾನೇ ಸುಟ್ಟುಕೊಳ್ಳಲಾರದು. ಎಷ್ಟು ಶಿಕ್ಷಣವನ್ನು ಪಡೆದಿದ್ದರೂ ನಟನು ತನ್ನ ಹೆಗಲ ಮೇಲೆ ಹತ್ತಿಕೊಂಡು ಕುಣಿಯಲಾರ!

ಕರ್ತೃವಿಗಿಂತ ಕರ್ಮವು ಬೇರೆಯೇ ಆಗಿರುತ್ತದೆ. ಕರ್ತೃವಿನಲ್ಲಿರುವ ಕ್ರಿಯೆ ಕರ್ಮವನ್ನು ವ್ಯಾಪಿಸಿ ಫಲವನ್ನೀಯುತ್ತದೆ. ಅದು ಕರ್ತೃವನ್ನೇ ವ್ಯಾಪಿಸಿ ಫಲವನ್ನುಂಟು ಮಾಡುವುದಿಲ್ಲ. ಸ್ವಾತ್ಮನಿ ಕ್ರಿಯಾವಿರೋಧಃ ಕ್ರಿಯೆಯು ತನ್ನನ್ನೇ ವ್ಯಾಪಿಸುತ್ತದೆಯೆಂಬುದು ಪ್ರತ್ಯಕ್ಷ ವಿರುದ್ಧವಾದದ್ದು. ನಾಸ್ತಿಕನ ಮತದಲ್ಲಿ ನಾಲ್ಕು ಭೂತಗಳಿಗಿಂತ ಬೇರೆ ವಸ್ತುವಿಲ್ಲ. ಈ ವಸ್ತುಗಳನ್ನು ತಿಳಿದುಕೊಳ್ಳುವ ಚೇತನ ದ್ರವ್ಯ ಯಾವುದು?- ಎಂದು ಚಾರ್ವಾಕ ಮತದ ಖಂಡನೆ ಇದು.

**484**

**ತಸ್ಮಾನ್ಮನೋ ವೃತ್ತ್ಯುಪಾಧಿ ಪರಿಚ್ಛಿನ್ನಮಾತ್ಮವಿಜ್ಞಾನಂ ಮಂತ್ರಾ ಇತಿ |ಏವಂ ಚ ನಿತ್ಯತ್ವೋಪಪತ್ತಿರ್ವೇದಾನಮ್| -ಆನಂದವಲ್ಲೀ ಅನು. 3**

ಮನೋವೃತ್ತಿಯೆಂಬ ಉಪಾಧಿಯಿಂದ ಪರಿಚ್ಛಿನ್ನವಾದ ಆತ್ಮಚೈತನ್ಯವೇ ವೇದಮಂತ್ರಗಳೆಂದು ತಿಳಿಯಬೇಕು. ಆದ್ದರಿಂದ ವೇದಗಳು ನಿತ್ಯವಾದವುಗಳೆಂಬ ಹೇಳಿಕೆಗೆ ಸಮರ್ಥನೆ ಬರುತ್ತದೆ.

ವೇದವು ಶಬ್ದರೂಪವಷ್ಟೆ. ಇದು ನಮ್ಮ ಮನೋವೃತ್ತಿಗೆ ಗೋಚರವಾಗುತ್ತದೆ. ಈ ಜ್ಞಾನರೂಪವಾದ ವೃತ್ತಿಯು ಚೈತನ್ಯದ ಪ್ರತಿಬಿಂಬ. ವೃತ್ತಿಗೆ ವಿಷಯವಾದ ವೇದವು ವೃತ್ತಿಯೊಡನೆ ಅನುಸ್ಯೂತವಾಗಿ ಬಂದ ಚೈತನ್ಯಕ್ಕೂ ವಿಷಯವಾಗುತ್ತದೆ. ವೇದ ವಿಷಯಕವಾದ ಈ ಆತ್ಮಚೈತನ್ಯವೇ ನಿಜವಾಗಿ ವೇದವೆನಿಸತಕ್ಕದ್ದು. ಇದು ನಿತ್ಯವಾದ್ದರಿಂದ ವೇದವು ನಿತ್ಯವಾದದ್ದು ಎಂಬ ಮಾತು ಉಪಪನ್ನವಾಗುತ್ತದೆ. ವೇದವು ಶಬ್ದಮಾತ್ರವಾದರೆ, ನಿತ್ಯವಾಗದೇ ಹೋಗುತ್ತದೆ.

'ವಾಚಾ ವಿರೂಪನಿತ್ಯಯಾ' ಎಂಬ ಶ್ರುತಿಯೇ ವೇದವು ನಿತ್ಯವೆಂದು ಹೇಳಿದೆ.

**485**

**ಲೌಕಿಕೋಽಪ್ಯಾನಂದಃ ಬ್ರಹ್ಮಾನಂದಸ್ಯೈವ ಮಾತ್ರಾ। -ಆನಂದ. ಅನು. 8**

ಲೋಕದಲ್ಲಿ ಜನರು ಅನುಭವಿಸುವ ಆನಂದವೂ ಬ್ರಹ್ಮಾನಂದದ ಒಂದು ಅಂಶವಾಗಿಯೇ ಇದೆ.

**486**

**ಸರ್ವೇಷಾಮಪ್ಯನ್ನರಸವಿಕಾರತ್ವೇ ಬ್ರಹ್ಮವಂಶ್ಯತ್ವೇ ಚ ಅವಿಶಿಷ್ಟೇ, ಕಸ್ಮಾತ್ ಪುರುಷ ಏವ ಗೃಹ್ಯತೇ? ಪ್ರಾಧಾನ್ಯಾತ್। ಕಿಂ ಪುನಃ ಪ್ರಾಧಾನ್ಯಮ್? ಕರ್ಮಾಜ್ಞಾನಾಧಿಕಾರಃ। -ಆನಂದ. ಅನು-1**

ಅನ್ನಾತ್ ಪುರುಷಃ ಎಂದಿದೆಯಷ್ಟೇ. ಎಲ್ಲ ಪ್ರಾಣಿಗಳೂ ಅನ್ನರಸದ ವಿಕಾರವಾಗಿ ಅನ್ನದಿಂದಲೇ ಹುಟ್ಟಿವೆಯಾದರೂ, ಬ್ರಹ್ಮವಂಶಕ್ಕೆ ಸೇರಿದವೇ ಆದರೂ ಪುರುಷ= ಮನುಷ್ಯನನ್ನು ಮಾತ್ರ ಗ್ರಹಿಸುವುದಕ್ಕೆ ಕಾರಣವೇನು? ಮನುಷ್ಯನು ಮುಖ್ಯನಾಗಿರುವುದೇ ಕಾರಣ. ಇವನಲ್ಲಿರುವ ಮುಖ್ಯತೆ ಯಾವುದು? ಕರ್ಮಜ್ಞಾನಗಳಲ್ಲಿ ಅಧಿಕಾರವಿರುವುದೇ ಮುಖ್ಯತೆ.

**487**

**ಯೋ ಹಿ ಯಂ ಪ್ರತಿ ವಿಧೀಯತೇ ಸ ತಸ್ಯ ಧರ್ಮಃ, ನ ತು ಯೇನ ಸ್ವನುಷ್ಠಾತುಂ ಶಕ್ಯತೇ । ಚೋದನಾಲಕ್ಷಣತ್ವಾದ್ಧರ್ಮಸ್ಯ। -ಸೂ.ಭಾ. 3-4-40**

ಯಾವನಿಗೆ ಯಾವುದನ್ನು ವಿಧಿಸಿರುತ್ತದೆಯೋ ಅದು ಅವನಿಗೆ ಧರ್ಮವಾಗುತ್ತದೆ. ಯಾವನಿಗೆ ಯಾವುದನ್ನು ಸರಿಯಾಗಿ ಮಾಡಲಿಕ್ಕಾಗುತ್ತದೆಯೋ ಅದಲ್ಲ. ಏಕೆಂದರೆ, ಧರ್ಮಕ್ಕೆ ವಿಧಾನವೇ ಪ್ರಮಾಣ.

ಬ್ರಹ್ಮಚಾರಿಗೆ ಹೇಳಿದ ಭಿಕ್ಷಾಟನೆ ಗೃಹಸ್ಥನ ಧರ್ಮವಲ್ಲ. ಸಂನ್ಯಾಸಿಗೆ ಹೇಳಿದ ಕಾಷಾಯವಸ್ತ್ರಧಾರಣೆ ಬ್ರಹ್ಮಚಾರಿಗಲ್ಲ.

**488**

**ಸರ್ವಸ್ಯ ಅವಿದ್ಯಾ ಪರಿಕಲ್ಪಿತಸ್ಯ ದ್ವೈತಸ್ಯ ಅವಸಾನಭೂತಮದ್ವೈತಮ್ |**

**-ಆನಂದ. ಅನು. 9**

ಅವಿದ್ಯಾಕಲ್ಪಿತವಾದ ಸಮಸ್ತದ್ವೈತಜಾಲವೂ ಎಲ್ಲಿ ಅವಸಾದವಾಗುವುದೋ ಅದೆಲ್ಲಕ್ಕೂ ಯಾವುದು ಆಶ್ರಯವಿತ್ತಿದೆಯೋ ಅದೇ ಅದ್ವೈತ.



